ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ ಪ್ರಕಟಣೆ
ಸ್ವರವಚನ ಸಾಹಿತ್ಯ ಮಾಲೆ

# ಸ್ವರವಚನ ಸಂಪುಟ : ಒಂದು

*ಸಂಪಾದಕರು*

**ಎಸ್. ಶಿವಣ್ಣ**

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ
ಮೈಸೂರು

SWARAVACHANA SAMPUTA - 1. A collection of Songs of Veerashiva Sharanas. Edited by S. Sivanna, Editor, Centre of Kannada Studies, Bangalore University, Bangalore. Published by J.S.S. Granthamale, Mysore - 4. First Edition 1995; Price : Rs. 100





ಪ್ರಥಮ ಮುದ್ರಣ : ೧೯೯೫

ಬೆಲೆ : ರೂ. ೧೦೦/-



ಮುದ್ರಣ :
ಲಕ್ಷ್ಮಿ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು – ೧೮
ದೂರವಾಣಿ : ೬೬೧೩೧೨೩, ೬೬೧೮೭೫೨

# ಶುಭ ಹಾರೈಕೆ

ವೀರಶೈವ ಧಾರ್ಮಿಕ ಪೀಠಗಳ, ವಿಶ್ವವಿದ್ಯಾಲಯಗಳ ಮತ್ತು ವಿದ್ವಾಂಸರುಗಳ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ – ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ ಎನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ, ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ "ಸ್ವರವಚನಸಾಹಿತ್ಯ"ದ ಸಂಶೋಧನೆ–ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ. ಡಾ. ಫ. ಗು. ಹಳಕಟ್ಟಿಯವರು ಮೊದಲುಮಾಡಿ ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ ಅದು ಬೆಳಕು ಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿಬಂದ ಈ ಪ್ರಕಾರವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನೂ ನಿರಂತರತೆಯನ್ನೂ ಎತ್ತಿ ತೋರಿಸಿದಂತಾಗುತ್ತದೆ. ಜೊತೆಗೆ ವೀರಶೈವಕ್ಕೆ ತನ್ನದೇ ಆದ ಹಾಡುಗಬ್ಬ ಪರಂಪರೆಯೊಂದು ಇರುವುದನ್ನು ಸ್ಪಷ್ಟಪಡಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣು ಮುಂದಿಟ್ಟುಕೊಂಡು ಪ್ರಸ್ತುತ ಯೋಜನೆಯನ್ನು ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯಿಂದ ಕೈಗೆತ್ತಿಕೊಂಡಿದೆ. ಈಗಾಗಲೆ ಡಾ. ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸ ಗೀತಾಂಜಲಿ'ಯನ್ನು ಜೆ. ಎಸ್.ಎಸ್. ಗ್ರಂಥಮಾಲೆಯಿಂದ ಪ್ರಕಟಿಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ಪ್ರಥಮಬಾರಿಗೆ ಬೆಳಕಿಗೆ ತಂದುದಲ್ಲದೆ ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದೆ.

ಇಂಥ ಒಂದು ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ, ಕರ್ನಾಟಕದ ಬೇರೆ ಬೇರೆ ಭಾಗಗಳ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದಿರುವುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನ ಸಾಹಿತ್ಯವನ್ನು ಮೊದಲು ಬಿಡಿಯಾದ ಸಂಪುಟಗಳ ರೂಪದಲ್ಲಿ ಪ್ರಕಟಿಸುವುದು ಎಂದು ಯೋಜಿಸಲಾಗಿದೆ. ಈ ಯೋಜನೆಯು ಫಲಪ್ರದವಾಗುವ ರೀತಿಯಲ್ಲಿ ಎಲ್ಲ ಸ್ವರವಚನಗಳು ಹಸ್ತಪ್ರತಿಗಳಿಂದ, ಜನಪದರ ಕಂಠಸ್ಥಲಗಳಿಂದ, ಸ್ಮೃತಿಪಟಲಗಳಿಂದ ಸೆರೆ ಬಿಡಿಸಿಕೊಂಡು ಬೆಳಕಿಗೆ ಬಂದ ಬಳಿಕ ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿಯು ಪ್ರಕಟಿಸಿದ ಹಾಗೂ ಅನ್ಯರು ಪ್ರಕಟಿಸಿದ ಎಲ್ಲ ಸಂಪತ್ತನ್ನು ಕ್ರೋಢೀಕರಿಸಿ; ವ್ಯವಸ್ಥಿತವಾಗಿ ವರ್ಗೀಕರಿಸಿ; ಅದನ್ನು "ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ" ಹೆಸರಿನಿಂದ ಸಂಪುಟ ಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲರಿಗೂ ಸಕಲ ಶ್ರೇಯಸ್ಸನ್ನು ಹಾರೈಸುತ್ತೇವೆ.

ಮಾಸ ಶಿವರಾತ್ರಿ — ಶ್ರೀ ಶಿವರಾತ್ರಿದೇಶಿಕೇಂದ್ರಸ್ವಾಮಿಗಳು

ಆಗಸ್ಟ್ ೨೪, ೧೯೯೫

# ಪ್ರಕಾಶಕರ ನುಡಿ

ಸುತ್ತೂರು ಜಗದ್ಗುರು ಶ್ರೀ ಶಿವರಾತ್ರೀಶ್ವರ ವೀರಸಿಂಹಾಸನ ಮಠ – ನಮ್ಮ ನಾಡಿನ ಒಂದು ಪ್ರಸಿದ್ಧ ಧಾರ್ಮಿಕಪೀಠ. ಧರ್ಮವನ್ನು ಶರಣಸಿದ್ಧಾಂತದ ವ್ಯಾಪಕ ಅರ್ಥದಲ್ಲಿ ಪರಿಭಾವಿಸಿದ ಈ ಪೀಠವು 'ದಾಸೋಹ'ಪದವನ್ನು ಕಾಲಕ್ಕೆ ತಕ್ಕಂತೆ ಪ್ರಸ್ತುತಗೊಳಿಸುತ್ತ ಬಂದಿದೆ. ಈ ಪ್ರಯೋಗದ ಒಂದು ಅಂಗ 'ಸಾಹಿತ್ಯದಾಸೋಹ'. ಅದರ ಫಲವೇ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ. ಈ ಗ್ರಂಥಮಾಲೆಯಲ್ಲಿ 'ಶಿವದಾಸ ಗೀತಾಂಜಲಿ'ಯನ್ನು ಪ್ರಕಾಶನಗೊಳಿಸುವ ಮೂಲಕ ಶರಣರ 'ಸ್ವರವಚನಸಾಹಿತ್ಯ' ಪ್ರಕಟನೆಯ ಇತಿಹಾಸದಲ್ಲಿ ಶ್ರೀಮಠವು, ಡಾ. ಫ. ಗು. ಹಳಕಟ್ಟಿಯವರ ಬಳಿಕ ಇನ್ನೊಂದು ಹೊಸಘಟ್ಟವನ್ನೇ ತೆರೆಯಿತು. ಧರ್ಮದಾಸೋಹದ ಜೊತೆಗೆ ಈ ಸಾಹಿತ್ಯದಾಸೋಹದ ಕಾರ್ಯವೂ ಕೂಡ ನಿರಂತರವಾಗಿ ಮುಂದುವರಿಯಬೇಕೆಂಬ ಸದುದ್ದೇಶದಿಂದ ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರು 'ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿ'ಯನ್ನು ಸಂಸ್ಥಾಪಿಸಿದರು. ಈ ದತ್ತಿಯ ಆಶ್ರಯದಲ್ಲಿ ಸಾಹಿತ್ಯದಾಸೋಹದ ಅಂಗವಾಗಿ ಈಗಾಗಲೇ ಹಲವಾರು ವಿಚಾರಸಂಕಿರಣಗಳನ್ನೂ ಸಮ್ಮೇಳನಗಳನ್ನೂ ನೆರವೇರಿಸುತ್ತಾ ಬಂದಿರುತ್ತದೆ. ಉತ್ತಮೋತ್ತಮ ಗ್ರಂಥಗಳನ್ನು ಪ್ರಕಟಿಸಲಾಗುತ್ತಿದೆ. ಈ ಗ್ರಂಥಮಾಲೆಯಿಂದ ಆರಂಭಿಸಿದ ಸ್ವರವಚನಸಾಹಿತ್ಯ ಪ್ರಕಟನೆಯ ಮುಂದುವರಿಕೆಯೆಂಬಂತೆ 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ' ಸಂಪುಟವನ್ನು ಪ್ರಕಟಿಸಿದೆ. ಈಗ ಈ ಪ್ರಯತ್ನಕ್ಕೆ ಪೂರ್ಣ ಸ್ವರೂಪವನ್ನು ಕೊಡುವ ಉದ್ದೇಶದಿಂದ ಬೃಹತ್‌ಪ್ರಮಾಣದ 'ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ'ಯನ್ನು ಕೈಗೆತ್ತಿಕೊಂಡಿದೆ.

ವೀರಶೈವಸಾಹಿತ್ಯದ ಮಹತ್ವದ ಪ್ರಕಾರವಾದ ವಚನಸಾಹಿತ್ಯ ಈವರೆಗೆ ಬಹುಮಟ್ಟಿಗೆ ಪೂರ್ಣಪ್ರಮಾಣದಲ್ಲಿ ಪ್ರಕಟವಾಗಿದೆ. ವಚನಗಳ ಸಾಹಿತ್ಯಕ, ಸಾಮಾಜಿಕ, ಸೈದ್ಧಾಂತಿಕ ಪ್ರಭಾವಗಳಿಗೆ ಮಾರುಹೋದ ವಿದ್ವಾಂಸರು, ಶರಣರ ಇನ್ನೊಂದು ಮಹತ್ವದ ಪ್ರಕಾರವಾದ 'ಸ್ವರವಚನಸಾಹಿತ್ಯ'ದ ಪ್ರಕಟಣೆಯ ಕಡೆಗೆ ಅಷ್ಟಾಗಿ ಗಮನ ಹರಿಸಲಿಲ್ಲ. ಈ ಕೊರತೆಯನ್ನು ತುಂಬಿಕೊಡುವ ಮಹೋದ್ದೇಶದಿಂದ ಪ್ರಸ್ತುತ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ.

ತಮ್ಮ ಅನುಭಾವದ ವಾಚನಪಾತಳಿಗಾಗಿ 'ವಚನ'ಗಳನ್ನು ಬರೆದ ಶರಣರು, ಶ್ರವಣಪಾತಳಿಗಾಗಿ 'ಸ್ವರವಚನ'ಗಳನ್ನು ಬರೆದರು. ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ನೂರಾರು ಜನ ಶಿವಶರಣರು, ಶಿವಕವಿಗಳು ಸೃಷ್ಟಿಸಿದ ಈ ಸಾಹಿತ್ಯ ಲಿಖಿತ ಮತ್ತು ಮೌಖಿಕ ಪರಂಪರೆಯಲ್ಲಿ ಸಾಗಿಬಂದಿದೆ. ಈ ಸಾಹಿತ್ಯವನ್ನು ಸಮಗ್ರವಾಗಿ ಪ್ರಕಟಿಸಲಿರುವ ಪ್ರಸ್ತುತ ಯೋಜನೆಯಲ್ಲಿ ನಾವು ಎರಡು ಹಂತಗಳನ್ನು ಕಲ್ಪಿಸಿಕೊಂಡಿದ್ದೇವೆ.

ಅಪ್ರಕಟಿತ ರೂಪದಲ್ಲಿರುವ ಲಿಖಿತ ಮತ್ತು ಮೌಖಿಕ ಪರಂಪರೆಯ ಎಲ್ಲ ಸ್ವರವಚನಗಳನ್ನು

ಪ್ರಕಟಿಸುವ ಉದ್ದೇಶ ನಮ್ಮ ಕಣ್ಣಮುಂದಿದೆ. ಇಲ್ಲಿ ಪ್ರಾಚೀನ ಸ್ವರವಚನ 'ಕೃತಿ'ಗಳನ್ನು ಪರಿಷ್ಕರಿಸಿ ಪ್ರಕಟಿಸುವುದು; ಹಸ್ತಪ್ರತಿಗಳಲ್ಲಿ ಬಿಡಿಬಿಡಿಯಾಗಿ ಸಿಗುವ ಸ್ವರವಚನಗಳನ್ನು ಸಂಗ್ರಹಿಸಿ ಸಂಪುಟರೂಪದಲ್ಲಿ ಪ್ರಕಟಿಸುವುದು; ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಸ್ವರವಚನಗಳನ್ನು ಧ್ವನಿ ಮುದ್ರಣ ಮಾಡಿಕೊಂಡು ಸಂಪುಟರೂಪದಲ್ಲಿ ಪ್ರಕಟಿಸುವುದು – ಇದು ಮೊದಲ ಹಂತದ ಪ್ರಕಟನ ಕಾರ್ಯ.

ಹೀಗೆ ಎಲ್ಲ ಮೂಲಗಳಿಂದ ಸಂಗ್ರಹಿಸಿ ನಾವು ಪ್ರಕಟಿಸಿದ ಮತ್ತು ಈಗಾಗಲೇ ಅನ್ಯಸಂಸ್ಥೆಗಳು ಪ್ರಕಟಿಸಿದ ಎಲ್ಲ ಸ್ವರವಚನಗಳ ರಾಶಿಯನ್ನು ಒಂದು ಶಿಸ್ತಿಗೆ ಅಳವಡಿಸಿ, ಹದಿನೈದು ಸಂಪುಟಗಳಲ್ಲಿ ಏಕಕಾಲಕ್ಕೆ ಪ್ರಕಟಿಸುವುದು ಎರಡನೆಯ ಹಂತದ ಕಾರ್ಯವಾಗಿದೆ. ಈ ಹಂತದ ಒಟ್ಟು ಯೋಜನೆ ಹೀಗಿದೆ;

ಮೊದಲನೆಯದು ಬಸವೇಶ್ವರರು ಮೊದಲಾದ ಹನ್ನೆರಡನೆಯ ಶತಮಾನದ ಶರಣರ ಬಿಡಿ ಸ್ವರವಚನ ಸಂಪುಟ. ಎರಡನೆಯದು ನಿಜಗುಣಶಿವಯೋಗಿ, ಸಪ್ತಕಾವ್ಯದ ಗುರುಬಸವ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತಶಿವಯೋಗಿ, ಮೈಲಾರ ಬಸವಲಿಂಗ ಶರಣರು ಇತ್ಯಾದಿ ಪ್ರಸಿದ್ಧ ಸ್ವರವಚನಕಾರರ ಸಂಪುಟ. ಮೂರು, ನಾಲ್ಕು ಮತ್ತು ಐದು ಗುರುಬಸವಾರ್ಯ, ಕರಸ್ಥಲದ ನಾಗಿದೇವ, ಮಾಗ್ಗೆಯ ಮಾಯಿದೇವ, ಕೆಸ್ತೂರದೇವ, ಕವಿಲಿಂಗ, ವರತೆಯ ಸೋಮಣ್ಣ, ಸೋದೆ ಸದಾಶಿವರಾಯ, ದೊಡ್ಡಷಡಕ್ಷರಿಸ್ವಾಮಿ, ಜಿಗುನಿಮರುಳದೇವ, ಬೆಂಗಳೂರು ಮುದ್ವೀರಸ್ವಾಮಿ, ಕಾರುಗಹಳ್ಳಿ ಶಾಂತಯ್ಯ, ಶಂಕರದೇವ, ನಿಷ್ಕಲರು, ಮರಿಶಾಂತಬಸವ, ಸೋಮನಕಟ್ಟೆ ಕರಿಬಸವೇಶ್ವರ, ಗುರುಗುಂಡಬಸವ – ಇತ್ಯಾದಿ ಅಪ್ರಸಿದ್ಧ ಸ್ವರವಚನಕಾರರ ಸಂಪುಟಗಳು. ಆರು, ಏಳು, ಎಂಟು, ಒಂಭತ್ತು ಮತ್ತು ಹತ್ತು ಹಸ್ತಪ್ರತಿಗಳಲ್ಲಿ ಸಿಗುವ ಬಿಡಿಸ್ವರವಚನ ಸಂಪುಟಗಳು. ಹನ್ನೊಂದು, ಹನ್ನೆರಡು, ಹದಿಮೂರು, ಹದಿನಾಲ್ಕು ಮತ್ತು ಹದಿನೈದು ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗಶರಣರು, ನೀರಲಕೇರಿಸ್ವಾಮಿಗಳು, ರಾಂಪುರದ ಬಕ್ಕಪ್ಪ ಮೊದಲಾದವರ ಸ್ವರವಚನ ಸಂಪುಟಗಳು.

ಈ ಯೋಜನೆ ಶ್ರೀಮಠದ ಸಾಹಿತ್ಯಿಕ ಸಾಧನೆಗಳಲ್ಲಿ ಒಂದು ಮೈಲುಗಲ್ಲು. ಇದು ಪೂರ್ಣಗೊಂಡರೆ ನಮ್ಮ ಅವಜ್ಞೆಯಲ್ಲಿ ಮುಳುಗಿಹೋಗಿರುವ ಹೊಸ ಸಾಹಿತ್ಯಪ್ರಕಾರವೊಂದು ಸಮಗ್ರ ರೂಪದಲ್ಲಿ ಬೆಳಕಿಗೆ ಬರುತ್ತದೆ. ಹಾಗೆ ನೋಡಿದರೆ ಬಹುಸಂಖ್ಯೆ ಜನರ ಮೇಲೆ ಮೋಡಿ ಹಾಕಿದ, ಅವರ ವ್ಯಕ್ತಿತ್ವವನ್ನು ತೀಡುತ್ತ ಬಂದ ಸಾಹಿತ್ಯಸಮುದಾಯದಲ್ಲಿಯೇ ಹಾಡುಗಬ್ಬಪ್ರಕಾರ ಗಣ್ಯವಾದುದು. ಕನ್ನಡಸಾಹಿತ್ಯದ ಮೊದಲಘಟ್ಟದ ರಚನೆಗಳಾಗಿರುವ ಈ ದೇಶೀಯ 'ಹಾಡುಗಬ್ಬ'ಗಳನ್ನು 'ಓದುಗಬ್ಬ'ವಾದ ಚಂಪೂ ಮೊದಲಾದುವು ಮೂಲೆಗೆ ತಳ್ಳಿದವು. ಮುಂದೆ ಹನ್ನೆರಡನೆಯ ಶತಮಾನದಲ್ಲಿ ದೇಶೀ ನೆಲೆಗಳಿಂದ ಬಂದ ಶರಣರು ದೇಶೀಪರಂಪರೆಯನ್ನು ಮತ್ತೆ ಸ್ಥಾಪಿಸುವ ಮೂಲಕ, ಮೂಲೆಗುಂಪಾಗಿದ್ದ 'ಹಾಡುಗಬ್ಬ' ಪರಂಪರೆಯನ್ನು ಹರಿಗಡಿದು, ಅದಕ್ಕೆ ಲಿಖಿತಸಾಹಿತ್ಯದಲ್ಲಿ ನ್ಯಾಯವಾದ ಸ್ಥಾನವನ್ನು ಒದಗಿಸಿಕೊಟ್ಟರು. ಇದರಿಂದಾಗಿ ಜೇಡರದಾಸಿಮಯ್ಯ, ಬಸವಣ್ಣ, ಮಹಾದೇವಿಯಕ್ಕ ಮೊದಲಾದ ಶರಣರು ರಚಿಸಿದ 'ಹಾಡುಗಬ್ಬ' ಪ್ರಕಾರ 'ಸ್ವರವಚನ'ವೆಂಬ ಹೆಸರಿನಲ್ಲಿ ಪ್ರಸಿದ್ಧಿ ಪಡೆಯಿತು. ಬಳಿಕ ನಿಜಗುಣ

ಶಿವಯೋಗಿಗಳಲ್ಲದೆ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಸಪ್ತಕಾವ್ಯದ ಗುರುಬಸವ, ಮೊಗ್ಗೆಯ ಮಾಯಿದೇವ, ಕರಸ್ಥಲದ ನಾಗಿದೇವ ಮೊದಲಾದ ವೀರಶೈವ ಅನುಭಾವಿಗಳು 'ಸ್ವರವಚನ' ಪ್ರಕಾರದಲ್ಲಿ ಕೃಷಿ ಮಾಡಿದರು. ಪ್ರೌಢದೇವರಾಯನ ತರುವಾಯ ನೂರು ವರ್ಷ ಗತಿಸುವಲ್ಲಿ ಪಟ್ಟಕ್ಕೆ ಬಂದ ಕೃಷ್ಣದೇವರಾಯನ ಪರಿಸರದ ಪುರಂದರದಾಸ, ಕನಕದಾಸ ಮೊದಲಾದವರೆಲ್ಲ ಈ ಹಾಡುಗಬ್ಬ ಪ್ರಕಾರವನ್ನು ಹರಿಸರ್ವೋತ್ತಮ ನೆಲೆಯಲ್ಲಿ ದುಡಿಸಿ, 'ಕೀರ್ತನೆ' ಹೆಸರಿನಲ್ಲಿ ಪ್ರಸಿದ್ಧಿಪಡಿಸಿದರು. ಈ ದಾಸಸಂಪ್ರದಾಯದ ಎರಡನೆಯ ಘಟ್ಟದಲ್ಲಿ ಪ್ರಸನ್ನವೆಂಕಟದಾಸ, ವಿಜಯದಾಸ, ಮಹಿಪತಿದಾಸ ಮೊದಲಾದವರು ಹುಟ್ಟಿ 'ಕೀರ್ತನೆ' ಪ್ರಕಾರವನ್ನು ವಿಪುಲ ಪ್ರಮಾಣದಲ್ಲಿ ಬೆಳೆಸಿದರು. ರತ್ನಾಕರವರ್ಣಿ ಮೊದಲಾದ ಜೈನ ಕವಿಗಳು 'ಹಾಡು'ಗಳನ್ನು ಬರೆದರು. ಜೈನರ ಹಾಡು, ದಾಸರ ಕೀರ್ತನೆಯ ಜೊತೆ ಜೊತೆಗೇ ಕಸ್ತೂರದೇವ, ಜಿಗುನಿಮರುಳದೇವ, ಸರ್ಪಭೂಷಣಶಿವಯೋಗಿ, ಮುಪ್ಪಿನಷಡಕ್ಷರಿ, ಮೈಲಾರ ಬಸವಲಿಂಗ ಶರಣರು, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗಶರಣರು ಮೊದಲಾದ ವೀರಶೈವ ಅನುಭಾವಿಗಳು 'ಸ್ವರವಚನ' ಪರಂಪರೆಯನ್ನು ಮುಂದುವರಿಸಿದರು. ಈ ಎಲ್ಲ ರಚನೆಗಳನ್ನು ಒಂದೂ ಬಿಡದಂತೆ ಸಂಗ್ರಹಿಸಿ ಪ್ರಕಟಿಸಿದರೆ 'ಕೀರ್ತನ ಸಾಹಿತ್ಯ'ದ ಮಗ್ಗುಲಲ್ಲಿ 'ಸ್ವರವಚನ ಸಾಹಿತ್ಯ'ವೆಂಬ ಇನ್ನೊಂದು ಪ್ರಕಾರ ಎದ್ದು ಕಾಣುತ್ತದೆ. 'ಹರಿಸರ್ವೋತ್ತಮ' ಹಾಡುಗಬ್ಬ ಸಂಪತ್ತಿನ ಜೊತೆ 'ಶಿವಸರ್ವೋತ್ತಮ' ಹಾಡುಗಬ್ಬ ಸಂಪತ್ತೂ ತೆರೆದುಕೊಳ್ಳುತ್ತದೆ.

ಪ್ರಾಚೀನಕಾಲದಿಂದಲೂ ಕರ್ನಾಟಕದಲ್ಲಿ ಓದುಗಬ್ಬ ಮತ್ತು ಹಾಡುಗಬ್ಬ ಎಂಬ ಎರಡು ಸಾಹಿತ್ಯಪ್ರಕಾರಗಳು ಬೆಳೆದುಬಂದಿವೆ. ಇವುಗಳಲ್ಲಿ ಒಂದು ವಾಚನಪಾತಳಿಯದು, ಸಾಹಿತ್ಯಗುಣ ಪ್ರಧಾನವಾದುದು. ಇನ್ನೊಂದು ಶ್ರವಣಪಾತಳಿಯದು, ಸಂಗೀತಗುಣ ಪ್ರಧಾನವಾದುದು. ಆದರೆ ಇಂಗ್ಲೀಷರ ಸಂಪರ್ಕದಿಂದಾಗಿ ಸಾಕ್ಷರತೆ ಬೆಳೆದು, ನಮ್ಮಲ್ಲಿ ಓದುಗಬ್ಬದೊಂದಿಗೆ ಹಾಡುಗಬ್ಬವನ್ನೂ ವಾಚನಪಾತಳಿಯಲ್ಲಿಟ್ಟು ಅಭ್ಯಾಸ ಮಾಡುವ ತಪ್ಪುಕ್ರಮ ವರ್ಧಿಸುತ್ತ ನಡೆಯಿತು. ಆಗ ಈ ಸ್ವರವಚನಗಳನ್ನು ಧ್ವನಿಮಾಧ್ಯಮದಲ್ಲಿ ಕೇಳಿ ಸಂಗೀತದ ನೆಲೆಯಲ್ಲಿ ವಿಮರ್ಶಿಸದೆ, ಅಕ್ಷರ ಮಾಧ್ಯಮದಲ್ಲಿ ಓದಿ ಸಾಹಿತ್ಯದ ನೆಲೆಯಲ್ಲಿ ವಿಮರ್ಶಿಸುವ ತಪ್ಪುಪದ್ಧತಿ ನಮ್ಮಲ್ಲಿ ಬೆಳೆಯಿತು. ಇದರಿಂದಾಗಿ ಅವು ಸಾಹಿತ್ಯಕ ಗುಣ ವಿದೂರ ರಚನೆಗಳೆಂಬ ಟೀಕೆಗೆ ಗುರಿಯಾದವು. ನಿಜಸ್ಥಿತಿಯೆಂದರೆ ಈ ಸಾಹಿತ್ಯವನ್ನು ಕಿವಿಯಿಂದಲೇ ಕೇಳಿ ವಿಮರ್ಶಿಸುವ ಹೊಸ ವಿಮರ್ಶಾ ಮಾನದಂಡಗಳು ಇಂದು ಬೆಳೆದು ಬರಬೇಕಾಗಿದೆ.

ಎರಡನೆಯದಾಗಿ ನಾವು ಮಾಡಬೇಕಾಗಿರುವ ಇನ್ನೊಂದು ಕಾರ್ಯವೆಂದರೆ, ಈ ಸಾಹಿತ್ಯದ ಪ್ರಸಾರ. ಧ್ವನಿಮಾಧ್ಯಮದ ಸಾಹಿತ್ಯವಾಗಿರುವ ಇದನ್ನು ಸಂಗೀತದ ಮೂಲಕ ಪ್ರಕಟಿಸುವ ವ್ಯವಸ್ಥೆ ಮಾಡುವುದು ಅವಶ್ಯವಿದೆ. ಅಂದರೆ ಸಂಗೀತಕಲಾವಿದರಿಂದ ಪ್ರಚುರಪಡಿಸುವ, ಧ್ವನಿಸುರುಳಿಗಳನ್ನು ಸಿದ್ಧಪಡಿಸುವ ಮೊದಲಾದ ಚಟುವಟಿಕೆಗಳು ಬೆಳೆದು ಬರಬೇಕಾಗಿದೆ.

ಹೀಗೆ ಸಮಗ್ರವಾಗಿ ಪ್ರಕಟಿಸುವುದು, ಹೊಸಬಗೆಯ ಮಾನದಂಡದಿಂದ ವಿಮರ್ಶಿಸುವುದು, ಸಂಗೀತ ಮಾಧ್ಯಮದಲ್ಲಿ ಪ್ರಸಾರಗೊಳಿಸುವುದು – ಈ ಮೂರೂ ಹಂತಗಳಲ್ಲಿ ಕೆಲಸ ನಡೆದರೆ ಮಾತ್ರ 'ಸ್ವರವಚನ'ಗಳಿಗೆ ಸರಿಯಾದ ನ್ಯಾಯ ಒದಗುತ್ತದೆ. ಈ ಬಗೆಯ ನ್ಯಾಯವನ್ನು ಒದಗಿಸಿಕೊಡುವ

ಮೊದಲನೆಯ ಹಂತವಾಗಿ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ'ಯನ್ನು ಶ್ರೀಮಠ ಕೈಗೊಂಡಿದೆ.

ಈ 'ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ'ಗೆ ಪ್ರೋತ್ಸಾಹವನ್ನು ನೀಡಿ, ಸ್ವರವಚನಸಾಹಿತ್ಯ ಸಂಪುಟಗಳು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಾಶನಗೊಳ್ಳಲು ಆಶೀರ್ವದಿಸಿದ ಪರಮಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳವರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ತತ್ತ್ವಕ್ಕೆ ತತ್ತ್ವ, ಸಾಹಿತ್ಯಕ್ಕೆ ಸಾಹಿತ್ಯವಾಗಿರುವ 'ಸ್ವರವಚನಸಾಹಿತ್ಯ' ಏಕಕಾಲಕ್ಕೆ ಆತ್ಮಕಲ್ಯಾಣವನ್ನೂ, ಸಮಾಜಕಲ್ಯಾಣವನ್ನೂ ಪ್ರತಿಪಾದಿಸುವ ಮಹತ್ತ್ವವನ್ನು ಗಳಿಸಿದೆ. ಈ ಮೌಲಿಕ ಸಾಹಿತ್ಯವನ್ನು ಜನತೆಗೆ ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಇಂತಹದೊಂದು ಅತ್ಯಮೂಲ್ಯವಾದ ಯೋಜನೆಯನ್ನು ರೂಪಿಸಿ ಮಾರ್ಗದರ್ಶನ ಮಾಡಿದವರು ನಮ್ಮ ನಾಡಿನ ಹೆಸರಾಂತ ಹಿರಿಯ ಸಂಶೋಧಕರೂ, ಪ್ರಾಧ್ಯಾಪಕರೂ ಆದ ಡಾ. ಎಂ. ಎಂ. ಕಲಬುರ್ಗಿ ಅವರು. ಪ್ರಾರಂಭದಲ್ಲಿ ಸುಪ್ರಸಿದ್ಧ ಸಾಹಿತಿಗಳಾದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ ನಿರ್ದೇಶನದಲ್ಲಿ ಈ ಯೋಜನೆಯನ್ನು ಕಾರ್ಯ ರೂಪಕ್ಕೆ ತರಲು ಯೋಜಿಸಲಾಗಿತ್ತು. ಆದರೆ ಈಗ ಡಾ. ಎಂ.ಎಂ. ಕಲಬುರ್ಗಿಯವರ ನಿರ್ದೇಶನದಲ್ಲಿ ಈ ಸಂಪುಟಗಳು ಹೊರಬರುತ್ತಿವೆ.

ಈ ಯೋಜನೆಯ ಅಂಗವಾಗಿ 'ಸ್ವರವಚನಸಂಪುಟ – ಒಂದು' ಇದನ್ನು ಬೆಂಗಳೂರು ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಕೇಂದ್ರದಲ್ಲಿ ಸಂಪಾದಕರಾಗಿರುವ ಶ್ರೀ ಎಸ್. ಶಿವಣ್ಣ ಅವರು ಸಂಪಾದಿಸಿ ಸಿದ್ಧಪಡಿಸಿಕೊಟ್ಟಿದ್ದಾರೆ. ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್ ಕುಮಾರ್ ಹಾಗೂ ಅವರ ಸಿಬ್ಬಂದಿಯವರು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಈ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ಧನ್ಯವಾದಗಳು.

ಈ ಕೃತಿಯನ್ನು ಸಹೃದಯರು ಸ್ವಾಗತಿಸುವರೆಂದು ನಂಬಿದ್ದೇವೆ.

ಪ್ರಕಾಶಕರು

# ಮೊದಲ ಮಾತು

ಜೇಡರ ದಾಸಿಮಯ್ಯ, ಸಕಲೇಶ ಮಾದರಸ, ಬಸವಣ್ಣ, ಅಕ್ಕಮಹಾದೇವಿ ಮೊದಲಾದ ಶಿವಶರಣ/ಶರಣೆಯರು ಗದ್ಯಗಂಧಿ ರೂಪವಾದ ವಚನಗಳನ್ನು ರಚಿಸಿದಂತೆ, ಸ್ವರವಚನಗಳನ್ನು ರಚಿಸಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ವಿದ್ವಾಂಸರು, ಸಂಶೋಧಕರು ಶಿವಶರಣಾದಿಗಳ ಸ್ವರವಚನ ಸಾಹಿತ್ಯದ ಪ್ರಕಾರದ ಬಗಗೆ ವಹಿಸಿದ ಆಸಕ್ತಿಯ ಪರಿಣಾಮವಾಗಿ ಹೆಚ್ಚು ಹೆಚ್ಚಾಗಿ ಸ್ವರವಚನಗಳು ಬೆಳಕಿಗೆ ಬರತೊಡಗಿವೆ.

ಡಾ। ಫ. ಗು. ಹಳಕಟ್ಟಿಯವರು ಮೈಲಾರ ಬಸಪ್ಪನವರ ಶಿವಾನುಭವ ದರ್ಪಣ (೧೯೨೮) ಸೋಮೇಕಟ್ಟೆ ಕರಿವೃಷಭೇಂದ್ರ ಕೈವಲ್ಯ ಪದ್ಯಗಳು (೧೯೩೩) ಕೃತಿಗಳನ್ನು ಪ್ರಕಟಿಸುವ ಮೂಲಕ 'ಸ್ವರವಚನಗಳನ್ನು ಬೆಳಕಿಗೆ ತರಲು ನಾಂದಿ' ಹಾಡಿದರು. ಬಳಿಕ ಡಾ। ಎಲ್. ಬಸವರಾಜುರವರ 'ಶಿವದಾಸ ಗೀತಾಂಜಲಿ' ಪೀಠಿಕೆ (ಪು. ೭೭–೯೬), ಡಾ। ಎಂ. ಚಿದಾನಂದಮೂರ್ತಿಗಳ (೧೯೭೫) 'ವಚನ ಸಾಹಿತ್ಯ' (ಪು. ೨೪೩–೪೬) ಡಾ। ವಿ. ಶಿವಾನಂದರ (೧೯೭೮) 'ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ' (ಪು. ೨೨೪–೩೭) ಡಾ। ವೀರಣ್ಣರಾಜೂರ ಅವರ ಚೆನ್ನವೀರಾರ್ಯರ 'ಶಿವಯೋಗ ಪ್ರದೀಪಿಕೆ' ಪ್ರಸ್ತಾವನೆ (ಪು. XX-XXX) ಹಾಗೂ ಡಾ। ಎಂ. ಎಂ. ಕಲಬುರ್ಗಿಯವರ ಮಾರ್ಗ I (ಪು. ೨೬೪–೭೦)ಗಳಲ್ಲಿ ಸ್ವರವಚನಗಳ ಹುಟ್ಟು ಬೆಳವಣಿಗೆಗೆ ಸಂಬಂಧಿಸಿದ ವಿವಿಧ ಅಭಿಪ್ರಾಯಗಳ ವಿವರಗಳಿವೆ.

ಈಗ ನಮಗೆ ತಿಳಿದು ಬಂದಿರುವಂತೆ ಬಸವಣ್ಣನವರ ಹಿರಿಯ ಸಮಕಾಲೀನರಾದ ಸಕಳೇಶ ಮಾದರಸರ (ಕ್ರಿ. ಶ. ೧೧೩೦) ಉಪಲಬ್ಧ 'ಸಕಲೇಶ' ಅಂಕಿತದ 'ತಂಗಾಳಿಗಲಿ E ಲ ? ∃ ರು ಮರನ' ಎಂಬುದು ಅತ್ಯಂತ ಪ್ರಾಚೀನತಮವಾದ ಸ್ವರವಚನವಾಗಿದೆ.

ಪ್ರಸ್ತುತ ಕೃತಿ 'ಸ್ವರವಚನ ಸಂಪುಟ–೧'ರಲ್ಲಿ ೨೬೭ ಸ್ವರವಚನಗಳಿವೆ. ಕಾಲದ ದೃಷ್ಟಿಯಿಂದ ಕ್ರಿ. ಶ. ೧೧೬೦ರಲ್ಲಿದ್ದ ಬಸವಣ್ಣನವರ 'ವಿಚಾರಪತ್ನಿ' ನೀಲಮ್ಮನಿಂದ ಹಿಡಿದು ಕ್ರಿ. ಶ. ೧೮೭೦ರ ಕಾಲದಲ್ಲಿನ ಗುರುಪಾದೇಶನವರೆಗೂ ರಚಿತವಾದ ವಿವಿಧ ಶತಮಾನಗಳ ರಚನೆಗಳಿವೆ.

ಇಲ್ಲಿನ ಸ್ವರವಚನಗಳಲ್ಲಿ ಕರ್ತೃ ಹಾಗೂ ಕಾಲ ತಿಳಿದುಬಂದಿರುವ ರಚನೆಗಳ ಸಂಖ್ಯೆ ಅತ್ಯಲ್ಪ. ಅಜ್ಞಾತ ಕರ್ತೃಗಳ ಕೃತಿ ಸಂಖ್ಯೆ ನಿಬ್ಬೆರಗುಗೊಳಿಸುವಂತಿದೆ.

ಸ್ವರವಚನ ಕರ್ತೃಗಳು (ಕಾಲಾನುಗುಣವಾಗಿ)

ನೀಲಮ್ಮ (೧೧೬೦)

ಬಸವಣ್ಣನ ಪತ್ನಿ. ಈಕೆಯ ವಚನ/ಸ್ವರವಚನಗಳ ಅಂಕಿತ 'ಸಂಗಯ್ಯ'. ಸದ್ಯದಲ್ಲಿ ಈಕೆಯ ೨೮೮ ವಚನಗಳು ಉಪಲಬ್ಧವಿದ್ದು ಪ್ರಕಟವಾಗಿವೆ.

ಮಹಾಲಿಂಗದೇವ (೧೪೩೦) ನ 'ಏಕೋತ್ತರ ಶತಸ್ಥಲ' ಹಲಗೆದೇವಾದಿಗಳ (೧೫೩೦) 'ಶೂನ್ಯ

ಸಂಪಾದನೆ', ಗೂಳೂರು ಸಿದ್ಧವೀರನ (೧೬೧೬) 'ಶೂನ್ಯ ಸಂಪಾದನೆ', ಚಿಕ್ಕವೀರಣ್ಣೊಡೆಯನ (೧೬೫೦) 'ಪರಮಮೂಲ ಜ್ಞಾನ ಷಟ್ಸ್ಥಲ', ಮಹತ್ತದೇವನ (೧೭೦೦) 'ವೀರಶೈವ ತ್ರೈಲೋಕ್ಯ ಚಿಂತಾಮಣಿ' ಹಾಗೂ ಸ್ವರವಚನಗಳ ಸಂಕಲನ ರೂಪದ ಕೃತಿಗಳಾದ ಕಂಬಾಳ ಶಾಂತಮಲ್ಲೇಶನ 'ಗಣವಚನ ರತ್ನಾವಳಿ' ಮತ್ತು ಚೆನ್ನವೀರಾರ್ಯನ 'ಶಿವಯೋಗ ಪ್ರದೀಪಿಕೆ'ಗಳಲ್ಲಿ ನೀಲಮ್ಮನ ಸ್ವರವಚನಗಳಿವೆ.

ಪ್ರಸ್ತುತ ಕೃತಿಯ ಕ್ರಮಾಂಕ ೨೪೪ರಲ್ಲಿ ಈಕೆಯ ಸ್ವರವಚನವಿದೆ.

**ಕರಸ್ಥಲದ ನಾಗಿದೇವ (೧೪೩೦)**

ಕರಸ್ಥಲದ ನಾಗಲಿಂಗನೆಂಬ ಹೆಸರು ಉಂಟು. ವಿಜಯನಗರದ ಇಮ್ಮಡಿ ಪ್ರೌಢದೇವರಾಯನ (೧೪೧೯–೪೭) ಕಾಲದಲ್ಲಿನ ನೂರೊಂದು ವಿರಕ್ತರ ಸಮುದಾಯದಲ್ಲೊಬ್ಬ. ಈತನ ಕೃತಿಗಳಲ್ಲಿನ ಅಂಕಿತ ಗುರುಶಾಂತ / ನಿಜಗುರುಶಾಂತ.

**ಕೃತಿಗಳು**

- ಅಕ್ಷರದ ಚೌಪದನ (೨೧)
- ಕರಸ್ಥಲದ ನಾಗಿದೇವ ತ್ರಿವಿಧಿ (೩೧)
- ಕಾಲಜ್ಞಾನ (೨೫)
- ಮಡಿವಾಳಯ್ಯಗಳ ತಾರಾವಳಿ (೨೭)
- ಮಲ್ಲಿಕಾಮಾಲೆ (೧೧ ವೃತ್ತ)
- ಲಿಂಗ ನಿಜಸ್ಥಲ ತ್ರಿವಿಧಿ (೭–೩೧೨)
- ಶಾಂತ ಶತಕ (೧೦೮ ಕಂದ)
- ಶಿವಜ್ಞಾನಾಂಜನ ರತ್ನಮಾಲೆ (೧೭೭–ತ್ರಿಪದಿ)
- ಸ್ವರವಚನ

ಈತನ ಸ್ವರವಚನಗಳು ಕಂಬಾಳ ಶಾಂತಮಲ್ಲೇಶನ (೧೬೦೦) 'ಗಣವಚನ ರತ್ನವಳಿ' ಹಾಗೂ ಚೆನ್ನವೀರಾರ್ಯನ (೧೬೦೦) 'ಶಿವಯೋಗ ಪ್ರದೀಪಿಕೆ'ಗಳಲ್ಲಿವೆ.

ಪ್ರಸ್ತುತ ಸಂಪುಟದ ಕ್ರಮಾಂಕ ೧೬೩ರಲ್ಲಿ ಈತನ ಸ್ವರವಚನವಿದೆ.

**ಮಗ್ಗೆಯ ಮಾಯಿದೇವ (೧೪೩೦)**

ಐಪುರದ ಸೋಮನಾಥನ ಭಕ್ತ. ವಿಜಯನಗರದ ಗಜವೇಂಟಕಾರ ಇಮ್ಮಡಿ ಪ್ರೌಢದೇವರಾಯನ (ಕ್ರಿ. ಶ. ೧೪೧೯–೧೪೪೭) ಸಮಕಾಲೀನ. ಶಿವಾಗಮ ನಿಷ್ಣಾತ. ತಂದೆ ನಾಕರಾಜನ ಶಿಷ್ಯ ಸಂಗಮೇಶ್ವರ. ಕಲ್ಯಾಣದ ಎಂಬ ಹೆಸರೂ ಇವನಿಗುಂಟು. ಷಟ್ಸ್ಥಲ ಬ್ರಹ್ಮಿಯಾದ ಮಾಯಿದೇವ ಕನ್ನಡ, ಸಂಸ್ಕೃತಗಳಲ್ಲಿ ಕೃತಿಗಳನ್ನು ರಚಿಸಿದ್ದಾನೆ. ಈತನ ಕೃತಿಗಳ ಅಂಕಿತ ಐಪುರಿ ಸೋಮನಾಥ.

**ಕೃತಿಗಳು**

- ಏಕೋತ್ತರ ಶತಸ್ಥಲದ ಷಟ್ಪದಿ (೧೧೫ ವಾ. ಷ.)
- ಮಗ್ಗೆಯ ಮಾಯಿದೇವ ವಚನ (ಸ್ವರವಚನ)

– ಶತಕತ್ರಯ (ವೃತ್ತ)
– ಷಟ್ಸ್ಥಲ ಗದ್ಯ (ರಗಳೆ)

ಸಂಸ್ಕೃತದಲ್ಲಿ

– ಅನುಭವ ಸೂತ್ರ
– ಪ್ರಭುಗೀತೆ (ಅಲ್ಲಮಪ್ರಭುಗಳ ವಚನಗಳ ಅನು)
– ವಿಶೇಷಾರ್ಥ ಪ್ರಕಾಶಿಕೆ
– ಕಾರಣಾಗಮದ ನಾಂದ್ಯವೆಂಬ ಕೃತಿ ಈತನಿಗೆ ಆರೋಪಿತವಾಗಿದೆ.

ಈತನ ಸ್ವರವಚನಗಳು ಕಂಬಾಳ ಶಾಂತಮಲ್ಲೇಶನ (೧೬೦೦) 'ಗಣವಚನ ರತ್ನಾವಳಿ' ಮತ್ತು ಚೆನ್ನವೀರಾರ್ಯನ (೧೬೦೦) 'ಶಿವಯೋಗ ಪ್ರದೀಪಿಕೆ'ಗಳಲ್ಲಿವೆ.

ಪ್ರಸ್ತುತ ಸಂಪುಟದಲ್ಲಿ ಈತನ 3 ಸ್ವರ ವಚನಗಳು ಕ್ರಮಾಂಕ ೪೧–೪೩ರಲ್ಲಿವೆ.

ಕವಿ ಲಿಂಗ (೧೪೯೦)

ವಿಜಯನಗರದ ಸಾಳುವ ನರಸಿಂಹನ (1487–97) ಆಸ್ಥಾನ ಕವಿ. ಇವನನ್ನು 'ಪರಬ್ರಹ್ಮ ಚರಿತೆ'ಕಾರ ಅಹೋಬಲದಾಸ (ಸು. ೧೭೦೦) ಹಾಗು ಹಂಪೆಯ ಚರಪತಿ ಮಹಲಿಂಗಸ್ವಾಮಿ (೧೭೦೦) 'ಬಾಲ ಕುಮಾರರಾಮನ ಸಾಂಗತ್ಯ'ಗಳಲ್ಲಿ ಹೆಸರಿಸಿದ್ದಾರೆ. ಈತನ ಸ್ವರವಚನಗಳ ಅಂಕಿತ 'ಕಪಿನಿಪತಿ', 'ಕಪಿನಿಪತಿ ನಂಜುಂಡಲಿಂಗ' ಇ.

ಕೃತಿಗಳು

– ನಂಜುಂಡೇಶ್ವರನ ಜಾತ್ರೆಯ ತಾರಾವಳಿ
– ಲಿಂಗಾಂಗ ಸಮರಸದ ಪಾರಿಜಾತ
– ಸ್ವರವಚನಗಳು (೧೩೦ಕ್ಕೂ ಮೀರಿ)

ಈತನ ನಾಲ್ಕು ಸ್ವರವಚನಗಳು ಕ್ರಮಾಂಕ ೪೪–೪೭ರಲ್ಲಿವೆ.

ಕಾರುಗಹಳ್ಳಿ ಶಾಂತಯ್ಯ (೧೫೩೩)

'ಗುರುಶಾಂತಲಿಂಗ' ಅಂಕಿತದ 6 ಸ್ವರಚನಗಳು ಉಪಲಬ್ಧವಿದೆ. ಈತನನ್ನು ಸಿದ್ಧನಂಜೇಶ (೧೬೦೦) 'ಗುರುರಾಜ ಚಾರಿತ್ರ' (೧೬–೧೫)ದಲ್ಲಿ ಉಲ್ಲೇಖಿಸಿದ್ದಾನೆ. ಕ್ರಿ. ಶ. ೧೫೩೩ರ ಶಾಸನ ಈತನನ್ನು ಹೆಸರಿಸಿದೆ.

ಪ್ರಸ್ತುತ ಸಂಪುಟದ ಕ್ರಮಾಂಕ ೯೫ರಲ್ಲಿ ಈತನ ಸ್ವರವಚನವೊಂದಿದೆ.

ರತ್ನಾಕರ (೧೫೫೭?)

'ಭರತೇಶ ವೈಭವ'ದ ಕರ್ತೃ ರತ್ನಾಕರವರ್ಣಿ ವೀರಶೈವನಾಗಿದ್ದ ಕಾಲದಲ್ಲಿ 'ಜ್ಯೋತಿರ್ಮಯ ಲಿಂಗ' ಅಂಕಿತದಲ್ಲಿ ರಚಿತವಾದ ಸ್ವರಚವನವಿರಬೇಕೆಂದೆನಿಸುತ್ತದೆ. ಹಸ್ತಪ್ರತಿಯಲ್ಲಿನ ಕೃತಿಯ ಆದಿಯಲ್ಲಿ 'ರತ್ನಾಕರ ವಚನ'ವೆಂದಿದೆ.

ಪ್ರಸ್ತುತ ಸಂಪುಟದಲ್ಲಿ ಕ್ರಮಾಂಕ ೧೪೫ರಲ್ಲಿ ಸ್ವರವಚನವಿದೆ.

**ಶಂಕರದೇವ (೧೫೮೦)**

ತುಮಕೂರು ಜಿಲ್ಲೆ ದೇವರಾಯನದುರ್ಗದ ನಿವಾಸಿ. 'ಗುರುಶಂಕರೇಶ್ವರ ಶತಕ'ದಲ್ಲಿ (ವೃತ್ತ–೪೫) ತೋಂಟದ ಸಿದ್ಧಲಿಂಗರ ಪರೋಕ್ಷ ರೀತಿಯ ಉಲ್ಲೇಖವಿದೆ. ಈತ ರಗಳೆ, ಕಂದ, ವೃತ್ತ, ದಂಡಕ, ವಾರ್ಧಕ ಷಟ್ಪದಿ ಹಾಗೂ ಸ್ವರವಚನಗಳನ್ನು ರಚಿಸಿದ್ದಾನೆ. ಈತನ ೧೨೪ ಸ್ವರವಚನಗಳು ಪ್ರಕಟವಾಗಿದ್ದು ಅಲ್ಲಿಲ್ಲದ ೫ ಸ್ವರವಚನಗಳು ಪ್ರಸ್ತುತ ಸಂಪುಟದ ಕ್ರಮಾಂಕ ೨೦೯–೧೪ರಲ್ಲಿವೆ.

ಈತನ ಸ್ವರವಚನಗಳು ಕಂಬಾಳದ ಶಾಂತಮಲ್ಲೇಶನ (೧೬೦೦) 'ಗಣವಚನ ರತ್ನಾವಳಿ' ಚೆನ್ನವೀರಾರ್ಯನ (೧೬೦೦) 'ಶಿವಯೋಗ ಪ್ರದೀಪಿಕೆ' ಮತ್ತು ಅಜ್ಞಾನ ಸಂಕಲನಕಾರನ (ಸು. ೧೮೦೦) 'ಬಿಡಿ ಸ್ವರವಚನಗಳು' ಕೃತಿಗಳಲ್ಲಿ ಉಲ್ಲೇಖಗೊಂಡಿವೆ.

**ಗುರುಬಸವಯ್ಯ (೧೫೮೦)**

ವೀಣೆ ಗುರುಬಸವಯ್ಯನೆಂದು ಪ್ರಸಿದ್ಧಿ ಪಡೆದಿದ್ದಾನೆ. ಈತನ ಗುರುಪರಂಪರೆ ಹೀಗಿದೆ –

ನಿರಂಜನಗುರು ಚೆನ್ನಬಸವ ಶಿವಯೋಗೀಶ್ವರ > ಹರದನಹಳ್ಳಿಯ ಪ್ರಭುಲಿಂಗ ಗುರುಸ್ವಾಮಿ > ನಿಜಾನಂದಗುರು ಚೆನ್ನಯ್ಯ > ಗುರುಸಿದ್ಧವೀರೇಶ್ವರದೇವರು > ಗುರುಬಸವಯ್ಯ

ಈತನ ಸ್ವರವಚನಗಳ ಅಂಕಿತ ಗುರುಬಸವ. ಈತನ 176 ಸ್ವರವಚನ ಹಾಗೂ 87 ಸ್ವರ ಬೊಲ್ಲಿಗಳನ್ನು ಶ್ರೀ ಮೊರಬದ ಮಲ್ಲಿಕಾರ್ಜುನ ಅವರು ಪ್ರಕಟಿಸಿದ್ದಾರೆ.

ಈತನ ಸ್ವರವಚನಗಳನ್ನು ಕಂಬಾಳ ಶಾಂತಮಲ್ಲೇಶ (೧೬೦೦) 'ಗಣವಚನ ರತ್ನಾವಳಿ'ಯಲ್ಲೂ ಚೆನ್ನವೀರಾರ್ಯ (೧೬೦೦) 'ಶಿವಯೋಗ ಪ್ರದೀಪಿಕೆ'ಯಲ್ಲೂ ಉದಾಹರಿಸಿರುವರು.

ಅಪ್ರಕಟಿತ ೩ ಸ್ವರವಚನಗಳು ಪ್ರಸ್ತುತ ಸಂಪುಟದ ಕ್ರಮಾಂಕ ೮೯, ೯೧–೨ ರಲ್ಲಿವೆ.

**ವಿರಕ್ತ ತೋಂಟದಾರ್ಯ (೧೬೧೬)**

ಪರ್ವತೇಂದ್ರನ ಕರಜಾತ. ಗೂಳೂರು ಸಿದ್ಧವೀರೇಶ್ವರನ ದಯಾಪಾತ್ರ. ಈತನಿಗೆ ತೋಂಟದ ಸಿದ್ಧಲಿಂಗದೇಶಿಕನೆಂಬ ಹೆಸರಿದೆ. ಈತನ ಕೃತಿಗಳಲ್ಲಿ 'ನಿರಂಜನಲಿಂಗ'ವೆಂಬ ಅಂಕಿತವಿದೆ. ಕನ್ನಡ ಸಂಸ್ಕೃತಗಳಲ್ಲಿ ಕೃತಿ ರಚಿಸಿದ್ದಾನೆ.

**ಕೃತಿಗಳು**

– ಕರ್ಣಾಟಕ ಶಬ್ದಮಂಜರಿ (೧೨೦ ವಾ. ಷ.)
– ಪಾಲ್ಕುರಿಕೆ ಸೋಮೇಶ್ವರ ಪುರಾಣ (ವಾ. ಷ.)
– ಸಿದ್ಧೇಶ್ವರ ಪುರಾಣ (ವಾ. ಷ.)
– ಚಿದಾನಂದ ಸಿಂಧು (ಚಂಪು)
– ಮಗ್ಗೆಯ ಮಾಯಿದೇವ ಶತಕತ್ರಯ ಟೀಕೆ
– ಮನೋವಿಜಯ (ಗುರುಬಸವ) ಟೀಕೆ

- ತೋಂಟದಾರ್ಯ ರಗಳೆ
- ದೇವಿಯರ ಸಹಸ್ರನಾಮ (೪೪ ವಾ. ಷ.)
- ನಿರಂಜನ ಶತಕಂ (ವೃತ್ತ)
- ಸರ್ವಮಂಗಳೆ ಶತಕ (ವೃತ್ತ)
- ಸಿದ್ಧಲಿಂಗೇಶ್ವರ ಶತಕ (ವೃತ್ತ)
- ನಿರಂಜನಲಿಂಗ ಶತಕ (ಕಂದ)
- ಶಿವಸಹಸ್ರನಾಮ (೨೫ ವಾ. ಷ.)
- ಶೈವಸಂಜೀವಿನಿ (ಟೀಕೆ)
- ಸ್ವರವಚನ

ಸಂಸ್ಕೃತದಲ್ಲಿ

- ಕೈವಲ್ಯಸಾರ
- ಬಸವೇಶ್ವರ ಸಹಸ್ರ ನಾಮಾವಳಿ
- ಷಟ್ಸ್ಥಲಜ್ಞಾನ ಚಿಂತಾಮಣಿ

ಪ್ರಸುತ್ತ ಸಂಪುಟದಲ್ಲಿ ಈತನ ೩ ಸ್ವರವಚನಗಳು ಕ್ರಮಾಂಕ ೧೬೫—೬೭ರಲ್ಲಿವೆ.

ಎಳಂದೂರು ಷಡಕ್ಷರದೇವ (೧೬೫೫—೭೭)

ದನುಗೂರು ಮಠಾಧೀಶ ಚಿಕವೀರದೇಶಿಕನ ಶಿಷ್ಯ. ಹದಿನಾಡ ಮುದ್ದುಭೂಪ (೧೬೫೪) ಮೈಸೂರು ಚಿಕದೇವರಾಜ (೧೬೭೨—೧೭೦೪) ಕೆಳದಿ ಭದ್ರಪ್ಪ ನಾಯಕ (೧೬೬೧—೬೩), ಕೆಳದಿ ಸೋಮಶೇಖರ ನಾಯಕ (೧೬೬೩—೭೧), ಕೆಳದಿ ಚೆನ್ನಮ್ಮಾಜಿ (೧೬೭೧—೯೭) ಯರ ಸಮಕಾಲೀನ. ಉಭಯಭಾಷಾ ವಿಶಾರದ. ಕನ್ನಡದ ಕೃತಿಗಳಲ್ಲಿ 'ಶಿವಲಿಂಗ' ಅಂಕಿತವಿದೆ. ಈತನ ಬಗೆಗೆ 'ಚರಮ ಗೀತೆ'ಯೊಂದು ಇಮ್ಮಡಿ ಗುರುಸಿದ್ಧಸ್ವಾಮಿಗಳಿಂದ ರಚಿತವಾಗಿದೆ.

ಕೃತಿಗಳು

- ರಾಜಶೇಖರ ವಿಳಾಸ (ಚಂಪು)
- ಶಬರ ಶಂಕರ ವಿಳಾಸ (ಚಂಪು)
- ಬಸವರಾಜ ವಿಜಯ (ಚಂಪು)
- ಮಂತ್ರಮಹತ್ವದ ರಗಳೆ
- ಗುರು ರಗಳೆ

ಈತನ ೩ ಸ್ವರವಚನಗಳು ಕ್ರಮಾಂಕ ೨೨೫—೨೭ರಲ್ಲಿವೆ.

ಸೋದೆ ಸದಾಶಿವರಾಜ (೧೬೭೪—೧೭೧೭)

ಸೋದೆಯ ಮಳೆಯ ಬಗೆಯ ಹಿರಿಯಮಠದ ಗುರು ನಂದೀಶನ ಶಿಷ್ಯ. ಕನ್ನಡ/ಸಂಸ್ಕೃತಗಳಲ್ಲಿ ಕೃತಿ ರಚಿಸಿದ್ದಾನೆ. ಈತನ ಕೃತಿಗಳ ಅಂಕಿತ 'ಗುರುನಂದೀಶ'.

– ಉಳುವೆಯ ಮಹಾತ್ಮೆ (೭೩ ಕಂದ + ವಾ.ಷ. + ವೃತ್ತ)
– ಕಲಹ ಕೇತಯ್ಯಗಳ ಲಕ್ಷಣ (ಗ + ಕಂ)
– ಖಡ್ಗ ಪ್ರಬಂಧ (೩೮)
– ಜಾವಡಿ (ಹಾ)
– ಜೋಗುಳ ಪದ
– ತ್ರಿವಿಧಿ
– ನವರಸ ಜಕ್ಕಿಣಿ (ಹಾ)
– ನಂದೀಶ್ವರ ಅಷ್ಟಕ [ಈಶಾಧೀಶ್ವರ......] (೮ ವೃ)
– ನಂದೀಶ್ವರ ಅಷ್ಟಕ [ವರವನ್ನಿತ್ತು....] (೮ ವೃ + ೧ ಶ್ಲೋ)
– ಪಂಚವಿಂಶತಿ ಲೀಲೆಯ ಮಂಗಳಾಷ್ಟಕ (೧೦ ವೃ)
– ಪಂಚವಿಂಶತಿ ಲೀಲೆಯ ಮೂಲಪದ್ಯ (ಕಂ + ವೃ)
– ಪಂಚವಿಂಶತಿ ಲೀಲೆಯ ರಗಳೆ
– ಪ್ರಭುಲಿಂಗಲೀಲೆಯ ಜಾವಡಿ (ಹಾ)
– ಭಿಕ್ಷಾಟನ ಲೀಲೆಯ ಕಂದ (ಕಂ + ಶ್ಲೋ)
– ಮಹಾಚತುರಂಗ ಲಕ್ಷಣ
– ರಾಗಮಾಲಿಕೆ
– ವಿನಾಯಕ ಮಂಗಳಾಷ್ಟಕ (೧೦ ವೃ)
– [ಶಿವ] ಮಂಗಳಾಷ್ಟಕ (೯ ವೃ)
– ಸದಾಶಿವ ನೀತಿ (ಕಂ)
– ಸದಾಶಿವರಾಜೀಯ (ಟೀ + ಷ. ಇ.)
– ಸಮಸ್ಯಾಪೂರಣ ವೃತ್ತ ಕಂದ (೩೪)
– ಸ್ವರವಚನ
– ಹಾಲಾಸ್ಯ ಪುರಾಣ (ಭಾ. ಷ.)

ಸಂಸ್ಕೃತದಲ್ಲಿ ಶಂಕರಾರಾಧ್ಯ (೧೫೦೦)ನ 'ಬಸವ ಪುರಾಣ'ಕ್ಕೆ ಟೀಕೆ ಬರೆದಿದ್ದಾನೆ.

ಕ್ರಮಾಂಕ ೧೫೭–೬೦ರಲ್ಲಿ ಈತನ ೪ ಸ್ವರವಚನಗಳಿವೆ.

ಇಮ್ಮಡಿ ಗುರುಸಿದ್ಧ (?–೧೭೨೯)

ಚಿತ್ರದುರ್ಗ ಶೂನ್ಯಸಿಂಹಾಸನದ ಮೂಲಕರ್ತೃ ಮುರಿಗೆ ಶಾಂತವೀರಸ್ವಾಮಿಗಳ (?–೧೭೦೩) ಶಿಷ್ಯ. ಉಭಯ ಭಾಷೆಗಳಲ್ಲಿ ಪ್ರಕಾಂಡ ಪಂಡಿತ. ಈತನಿಗೆ ತೆಲುಗು, ಉರ್ದು ಮೊದಲಾದ ಭಾಷೆಗಳು ತಿಳಿದಿದ್ದವು. ಈತ ಕನ್ನಡ/ಸಂಸ್ಕೃತಗಳಲ್ಲಿ ಕ್ರಮವಾಗಿ ೨೩ ಹಾಗೂ ೩ ಕೃತಿಗಳನ್ನು ರಚಿಸಿದ್ದಾನೆ. ಈತನ ಅಂಕಿತ 'ಶಿವಲಿಂಗ'.

ಕೃತಿಗಳು

- ಉದ್ಧರಣೆಯ ವಾರ್ಧಿಕ (೩೯)
- ಕನ್ನಡ ವಿರೂಪಾಕ್ಷ ಪಂಚಾಶಿಕೆ (ಭಾ. ಷ.)
- ಕರಣ ಹಸಿಗೆ ಟೀಕೆ
- ಕೈವಲ್ಯ ಸೋಪಾನ ನಾಮ್ಯೆಕೋತ್ತರ ಶತಸ್ಥಲ (೧೦೧ ಹಾಡು)
- ಕೊರವಂಜಿ ಕಟ್ಟಳೆ
- ಪರಮತ ಖಂಡನದ ವಾರ್ಧಿಕ ಷಟ್ಪದಿ
- ಪಾದಸ್ತೋತ್ರ (ಹಾಡು)
- ಬಿಜ್ಜಾಂಬ ಚರಿತೆ (ಯಕ್ಷಗಾನ)
- ಮಿಶ್ರಾರ್ಪಣ ವಾರ್ಧಿಕ
- ಮುರಿಗೆ ತಾರಾವಳಿ
- ಯೋಗಕಲಾಪಸಾರ (ಭಾ. ಷ.)
- ಲಿಂಗಾಚಾರ ರಚನಾಗಮ ಟೀಕೆ
- ಶಿವಮತ ಪ್ರತಿಷ್ಠಾಪನ ವಾರ್ಧಿಕ
- ಶಿವರಹಸ್ಯ ಪುರಾಣ (ಭಾ. ಷ.)
- ಶಿವಲಿಂಗ ನಾಂದ್ಯ (೨೫ ಭಾ. ಷ. + ವಾ. ಷ.)
- ಶಿವಲಿಂಗ ಮಹಿಮಾ ಷಟ್ಪದಿ (೧೦೫ ವಾ. ಷ.)
- ಶಿವಾಧಿಕ್ಯ ತಿಲಕ (ಅಲಭ್ಯ)
- ಶೂನ್ಯಮಂತ್ರ ಗೋಪ್ಯ (೨೦೯ ವಚನ)
- ಸ್ಕಂದಕಲ್ಯಾಣ (ಚೌಪದಿ)
- ಹಾಡುಗಳು (= ಸ್ವರವಚನ)
- ಹಾಲಾಸ್ಯ ಪುರಾಣ (ಚಂ)
- ಹೋಳಿಪದ

ಸಂಸ್ಕೃತದಲ್ಲಿ

- ಚಾಮರವೃತ್ತ (೩ (ಅಥವಾ ೫) ವೃತ್ತ)
- ಪ್ರಭುಲೀಲಾ
- ನಂದೀಶ್ವರ ದಂಡಕ

ಕ್ರಮಾಂಕ ೨೨೮–೪೧ರಲ್ಲಿ ಈತನ ೧೪ ಸ್ವರವಚನಗಳಿವೆ.

ಸೋದೆ ಬಸವಲಿಂಗರಾಜ (೧೬೯೭–೧೭೪೫)

ಸೋದೆ ಸದಾಶಿವರಾಜ (೧೬೭೪–೧೭೧೭)ನ ಮಗ. ಇ. ಗುರುಸಿದ್ಧಸ್ವಾಮಿಗಳು ಈತನ ಕೋರಿಕೆಯಂತೆ 'ಶಿವರಹಸ್ಯ ಪುರಾಣ'ವನ್ನು ಭಾಮಿನೀ ಷಟ್ಪದಿಯಲ್ಲಿ ಅನುವಾದಿಸಿದ್ದಾರೆ.

**ಕೃತಿಗಳು**

— ಶ್ರೀ ಗುರುಸಿದ್ದೇಶ್ವರ ಸ್ತೋತ್ರಾಷ್ಟಕ (೯ ಕಂದ)
— ಸ್ವರವಚನ

ಉಳುವೆ ಕ್ಷೇತ್ರದ ಮಹಿಮೆಯನ್ನು ನಿರೂಪಿಸುವ ಈತನ ಸ್ವರವಚನ ಕ್ರಮಾಂಕ ೩೮ ರಲ್ಲಿದೆ.

**ಕೆಸ್ತೂರದೇವ (೧೭೦೦)**

'ಅಭಿನಯ ಅಲ್ಲಮ'ರೆಂದೆನಿಸಿದ ಎಡೆಯೂರು ಸಿದ್ದಲಿಂಗ (೧೫೬೧) ಶಿವಯೋಗಿಗಳ ಹೆಸರನ್ನೇ ತನ್ನ ಸ್ವರವಚನಗಳಿಗೆ ಅಂಕಿತವಾಗಿ ಬಳಸಿಕೊಂಡ ಕೆಸ್ತೂರದೇವನ ಸ್ವರವಚನಗಳ ಅಂಕಿತ 'ಗುರು ಸಿದ್ಧಲಿಂಗ'. ಈತನ 113 ಸ್ವರವಚನಗಳನ್ನು ಡಾ। ಎಂ. ಎಸ್. ಸುಂಕಾಪುರ ಅವರು ಪ್ರಕಟಿಸಿದ್ದಾರೆ. ತುಮಕೂರು ಜಿಲ್ಲೆಯ ಕೆಸ್ತೂರಿನ ನಿವಾಸಿಯೆನಿಸುತ್ತದೆ. ಗುರುಸಿದ್ಧಲಿಂಗ ಅಂಕಿತದ 'ಗುರುಸಿದ್ಧಲಿಂಗೇಶ್ವರ ತ್ರಿವಿಧಿ' ಸಹ ಈತನ ಮತ್ತೊಂದು ರಚನೆಯೆಂದೆನಿಸುತ್ತದೆ.

ಕ್ರಮಾಂಕ ೯೮–೯೯ರಲ್ಲಿ ಈತನ ಎರಡು ಸ್ವರವಚನಗಳಿವೆ.

**ಕವಿ ಶಿವಲಿಂಗದೇವ (೧೭೦೩)**

ಮುರಿಗೆ ಶಾಂತವೀರಸ್ವಾಮಿಗಳ (?–೧೭೦೩) ಸಮಕಾಲೀನ. ಸ್ವಾಮಿಗಳ ಸ್ತುತಿ ಈತನ ಸ್ವರವಚನದ ವಸ್ತು. ಕ್ರಮಾಂಕ ೧೯೦ರಲ್ಲಿ ಈತನ ಸ್ವರವಚನವಿದೆ.

**ಸೋಮೇಕಟ್ಟೆ ಅಯ್ಯ (ಸು. ೧೭೩೦)**

'ಸಂಗಮದೇವ' ಅಂಕಿತದ ಸ್ವರವಚನವೊಂದು ಲಭ್ಯವಿದ್ದು ಅದರ ಆದಿಯಲ್ಲಿ 'ಸೋಮೇಕಟ್ಟೆ ಅಯ್ಯಗಳ' ಎಂದಿದೆ. ಈತ ಚೇಲಾಳಪರಂಪರೆಯವನು.

ಕ್ರಮಾಂಕ ೨೮೫ ರಲ್ಲಿ ಈತನ ಸ್ವರವಚನವಿದೆ.

**ಹಾಗಲವಾಡಿ ಮುದ್ವೀರಸ್ವಾಮಿ (?–೧೭೩೮)**

ಪ್ರಾರಂಭದಲ್ಲಿ ಬೆಂಗಳೂರಿನಲ್ಲಿದ್ದ ಮುದ್ವೀರ ಸ್ವಾಮಿಗಳು ಅನಂತರ ಹಾಗಲವಾಡಿ ಮುದಿಯಪ್ಪ ನಾಯಕನ (೧೭೨೦–೪೦) ಕೋರಿಕೆಯಂತೆ ಹಾಗಲವಾಡಿಗೆ ತೆರಳಿ ರಾಜಗುರುಗಳಾಗಿದ್ದು, ಅಲ್ಲಿಯೇ ಕ್ರಿ. ಶ. ೧೭೩೮ರಲ್ಲಿ ಲಿಂಗೈಕ್ಯರಾದರು.

ಚೆನ್ನವೀರಕವಿ (ಸು. ೧೭೩೮) ಈ ಸ್ವಾಮಿಗಳ ಜೀವನ ಚಿತ್ರಣವನ್ನೇ ವಸ್ತುವಾಗುಳ್ಳ, 'ಮುದ್ವೀರ ತಾರಾವಳಿ'ಯನ್ನು ರಚಿಸಿದ್ದಾನೆ.

ಮುದ್ವೀರಸ್ವಾಮಿಗಳ ಸ್ವರವಚನವೊಂದರಲ್ಲಿ ಸಿದ್ಧಬಸವೇಶನೆಂಬ ವ್ಯಕ್ತಿಯ ಉಲ್ಲೇಖವಿದೆ. ಇವರ ಕೃತಿಗಳ ಅಂಕಿತ ಗುರುಸಂಗ, ಗುರು ಸಂಗಮೇಶ್ವರ ಇತ್ಯಾದಿ.

**ಕೃತಿಗಳು**

— ವಚನ (ಅಂ : ಮುದ್ವೀರ ಪ್ರೀಯ ಸಂಗಮೇಶ್ವರ)

– ಶಿವತತ್ತ್ವ ಸುಜ್ಞಾನ ಪ್ರದೀಪಿಕೆ (೫೦೮ ವಾ. ಷ.)
– ಸ್ವರವಚನಗಳು

ಈತನ ೧೦೭ ಸ್ವರವಚನಗಳನ್ನು ಡಾ। ವೀರಣ್ಣ ರಾಜೂರ ಪ್ರಕಟಿಸಿದ್ದಾರೆ.

ಅಲ್ಲಿರದ ೫ ಸ್ವರವಚನಗಳು ಪ್ರಸ್ತುತ ಸಂಪುಟದ ಕ್ರಮಾಂಕ ೨೪೮–೨೫೨ರಲ್ಲಿವೆ.

ಸೋಮೇಕಟ್ಟೆ ಚೆನ್ನವೀರಸ್ವಾಮಿ (ಸು. ೧೭೪೦)

ತುಮಕೂರು ಸೋಮೇಕಟ್ಟೆ ಪರಂಪರೆಯ ಸ್ವಾಮಿಗಳು. ಚೀಲಾಳ ಬಗೆಗೆ ಸೇರಿದವರು. ಇವರ ಕೃತಿಗಳ ಅಂಕಿತ 'ಗುರು ಚೆನ್ನಬಸವ'. ಇವರ ಕೃತಿಗಳ ಅಮೂಲ್ಯ ಸಂಗ್ರಹ ಹೊನ್ನವಳ್ಳಿ 'ಕರಿಸಿದ್ಧೇಶ್ವರ ಮಠ'ದಲ್ಲಿವೆ. (ತಿಪಟೂರು ತಾಲ್ಲೂಕು) ಈಗ ಗುರುತಿಸಲಾಗಿರುವಂತೆ ಇವರ ಕೃತಿಗಳ ಸಂಖ್ಯೆ ೨೪.

ಕೃತಿಗಳು

– ಅಪರಾಧ ಸ್ತೋತ್ರ (೨೭)
– ಅಮ್ಮಗಳ ತ್ರಿವಿಧಿ (೫೫)
– ಅಷ್ಟಾವರಣ ತ್ರಿವಿಧಿ (೧೭)
– ಅಷ್ಟೋತ್ತರಶತ ಕಂದ (೧೦೯)
– ಆಚರಣೆಯ ತ್ರಿವಿಧಿ (೫೯)
– ಇಷ್ಟಲಿಂಗದ ಚರಿತೆ (೨೩ ಭಾ. ಷ.)
– ಗಣತಾರಾವಳಿ (೫)
– ಗಿರಿಜಮ್ಮನ ತ್ರಿವಿಧಿ (೫೩)
– ಗುರುಕರುಣದ ತ್ರಿವಿಧಿ (೫೫)
– ಗುರುಕರುಣಾಮೃತ (೩೩ ಭೋ. ಷ.)
– ಗುರು ಚೆನ್ನಬಸವ ರಗಳೆ (೭೩ + ೧)
– ಗುರುಲಿಂಗದ ರಗಳೆ (ರ + ಕಂ)
– ಗುರುಸ್ತೋತ್ರ
– ಚೆನ್ನಬಸವೇಶ್ವರ ಷಟ್ಪದ (೧೭ ವಾ. ಷ.)
– ಚೆನ್ನಬಸವೇಶ್ವರ ತ್ರಿವಿಧಿ (೮೩)
– ಪಾದಪೂಜೆ ವಚನ
– ಪುರಾತನ ದೇವಿಯರ ತ್ರಿವಿಧಿ (೫೪)
– ಭೈರವೇಶ್ವರನ ತಾರಾವಳಿ (೧೫)
– ಮಂತ್ರಮಹಾತ್ಮೆಯ ರಗಳೆ
– ವ್ಯಾಲಪದ (ಪ + ೧೨ ನುಡಿ)
– ಶರಣಚರಿತೆ (೨೩ ತ್ರಿ)
– ಶಿವಯೋಗಾನಂದ ತ್ರಿವಿಧಿ (೭೧ + ಕಂದ ೧)

– ಸ್ವರವಚನಗಳು
– ಹರಗಣಂಗಳ ಚರಿತೆ (೩೩೫)

ಪ್ರಸ್ತುತ ಸಂಕಲನದಲ್ಲಿ ಇವರ ೨೭ ಸ್ವರವನಚಗಳಿದ್ದು ಅವು ಕ್ರಮಾಂಕ ೭೫–೮೮ ಹಾಗೂ ೧೨೫–೧೩೭ರಲ್ಲಿವೆ.

**ಮೈಲಾರದ ಬಸವಲಿಂಗ (೧೭೫೦–೬೦)**

ಜನ್ಮಸ್ಥಲ ಮೈಲಾರ (ಬಳ್ಳಾರಿ ಜಿಲ್ಲೆ ಹಡಗಲಿ ತಾಲ್ಲೂಕು). ಗುರುಗಳು ಹಾಲವರ್ತಿ ಚೆನ್ನವೀರಸ್ವಾಮಿಗಳು. ಪರಂಪರೆಯ ಹೇಳಿಕೆಯಂತೆ ಬಾಲಲೀಲಾ ಮಹಾಂತ ಶಿವಯೋಗಿಗಳು ಇವರ ಕಿರಿಯ ಸಮಕಾಲೀನರು. ವೀರಶೈವ ಸಿದ್ಧಾಂತದ ಪ್ರತಿಪಾದನೆ ಹಾಗೂ ಆಚರಣೆಗಳಲ್ಲಿ ಇವರಿಗಿದ್ದ ನಿಷ್ಠೆ ಇಂದೂ ಜನರ ನೆನಪಿನಲ್ಲಿ ಮರೆಯಾಗದೆ ಉಳಿದಿದೆ. ಇವರ ಕೃತಿಗಳಲ್ಲಿನ ಅಂಕಿತ 'ಚೆನ್ನವೀರ'. ಸ್ವರವಚನವೊಂದರಲ್ಲಿ ಹರಪುರದ ದೊರೆ ಸೋಮಶೇಖರನೃಪನ (೧೭೪೨–೬೬) ಉಲ್ಲೇಖವಿದ್ದು ಇವರು ೧೮ನೆಯ ಶತಮಾನದವರೆಂಬ ಬಗೆಗೆ ಸಂಶಯವಿಲ್ಲ.

**ಕೃತಿಗಳು**

– ಇಪ್ಪತ್ತೆರಡುಸಾವಿರದಆರುನೂರು ಕೇವಲ ನಿರ್ಗುಣಪದ ನಿರ್ಣಯ (ಗದ್ಯ)
– ಗುರುಕರುಣ ತ್ರಿಪದಿ
– ಭಕ್ತಿಬಿನ್ನಹ ದಂಡಕ
– ಲಿಂಗಪೂಜಾ ವಿಧಾನ (೫೭ ಕಂದ)
– ಷಟ್‌ಸ್ಥಲ ನಿರಾಭಾರಿ ವೀರಶೈವ ಸಿದ್ಧಾಂತ (೧೨೧ ವಾ. ಷ.)
– ಸ್ವರವಚನಗಳು

ಡಾ। ಫ. ಗು. ಹಳಕಟ್ಟಿ (೧೯೩೦) ಪ್ರೊ। ಶಿ. ಶಿ. ಬಸವನಾಳ (೧೯೬೨) ಮತ್ತು ಡಾ। ಎಸ್. ವಿ. ಅಯ್ಯನಗೌಡರ (೧೯೮೪) ಸಂಕಲನಗಳಲ್ಲಿ ಪ್ರಕಟವಾಗದ ಕ್ರಮಾಂಕ ೧೩೯–೧೪೦ನೆಯ ಸ್ವರವಚನಗಳು ಪ್ರಸ್ತುತ ಸಂಪುಟದಲ್ಲಿವೆ.

**ಐನೂಲಿ ಬಸವಲಿಂಗ (೧೮೦೦)**

ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕ ಐನೂಲಿ ನಿವಾಸಿ.

ಈತನ ಸ್ವರವಚನ ಕ್ರಮಾಂಕ ೪೦ರಲ್ಲಿದೆ.

**ಶಿವಪೂಜಿದೇವ (೧೮೫೪)**

ಬೃಹನ್ಮಠ (ಚಿತ್ರದುರ್ಗ)ದ ೨೦ನೆಯ ಪಟ್ಟದ ಸಣ್ಣಪಾದದ ಚೆನ್ನವೀರದೇಶಿಕರ ಲಿಂಗೈಕ್ಯದ ಕಾಲವನ್ನು ಸ್ವರವಚನದಲ್ಲಿ ದಾಖಲಿಸಿದ್ದಾನೆ. ಇನ್ನೊಂದು ಸ್ವರವಚನದಲ್ಲಿ ತಾನು ವೃದ್ಧನಾದ ಸಂಗತಿ ಸೂಚಿಸಿದ್ದಾನೆ.

ಈತನ ೨ ಸ್ವರಚನಗಳು ಪ್ರಸ್ತುತ ಸಂಪುಟದ ಕ್ರಮಾಂಕ ೨೨೩–೨೨೪ರಲ್ಲಿವೆ.

**ಗುರುಪಾದೇಶ (೧೮೭೦)**

ಚಿತ್ರದುರ್ಗ ಬೃಹನ್ಮಠದ ಪಟ್ಟದ ೨೧ನೆಯ ಮಹಲಿಂಗಸ್ವಾಮಿಗಳ (೧೮೫೪—೭೦) ಸಮಕಾಲೀನ. ಸ್ವಾಮಿಗಳ ಸ್ತುತಿ ಸ್ವರವಚನದ ವಸ್ತು.

ಕ್ರಮಾಂಕ ೯೪ ರಲ್ಲಿ ಪ್ರಸ್ತುತ ಸ್ವರವಚನವಿದೆ.

**ಕವಿ ನಂಜ (?)**

ಈವ ಕಡಬದ ನಂಜೇದೇವರ ಶಿಷ್ಯ. ಸಿದ್ಧಲಿಂಗರ ಸ್ತುತಿ ಕೃತಿಯ ವಸ್ತು.

ಕ್ರಮಾಂಕ ೨೬೨ರಲ್ಲಿ ನಂಜನ ಸ್ವರವಚನವಿದೆ.

**ಕವಿ ಸಿದ್ಧರಾಮ (?)**

'ಶಾಂತಯ್ಯ' ಅಂಕಿತದ ಸ್ವರವಚನದ ಕರ್ತೃ. ಜೀವನ ವಿವರಗಳು ಅಜ್ಞಾತ.

ಪ್ರಸ್ತುತ ಸಂಪುಟದಲ್ಲಿ ೨೧೫ನೆಯ ಕ್ರಮಾಂಕದಲ್ಲಿ ಈತನ ಸ್ವರವಚನವಿದೆ.

**ಮಲ್ಲಿಕಾರ್ಜುನ (?)**

'ಎತ್ತಿನಹಟ್ಟಿವೀರ' ಅಂಕಿತದ ಸ್ವರವಚನಕಾರ. ಈತನ ಸ್ವರವಚನವೊಂದರಲ್ಲಿ (ಕ್ರಮಾಂಕ ೧೫) ಕುರುಗೋಡಿನ ಉಲ್ಲೇಖವಿದೆ. ಹೀಗಾಗಿ ಈತ ಬಳ್ಳಾರಿ ಜಿಲ್ಲೆಯವನಾಗಿರುವ ಸಂಭಾವ್ಯತೆ ಇದೆ. ಪ್ರಸ್ತುತ ಸಂಪುಟದಲ್ಲಿ ೨೮ ಸ್ವರವಚನಗಳಿದ್ದು ಅವುಗಳ ಕ್ರಮಾಂಕ ೧—೨೮ ಆಗಿದೆ.

**ಶಬ್ದಮಣಿಸ್ವಾಮಿ (?)**

'ಗುರುಬಸವೇಶ್ವರ' ಅಂಕಿತದ ಸ್ವರಚನ ಕರ್ತೃ. ಕಾಲ ದೇಶಾದಿಗಳ ಬಗೆಗೆ ಏನೂ ತಿಳಿದಿಲ್ಲ. ಕ್ರಮಾಂಕ ೯೩ರಲ್ಲಿ ಈತನ ಸ್ವರವಚನವಿದೆ.

## ಮಠಾಧೀಶರು/ಸ್ವಾಮಿಗಳು ಇತ್ಯಾದಿ

**ಆರೂಢಮಲ್ಲ (೬೨—೪)***

ಈ ಅಂಕಿತದ ಸ್ವರವಚನಗಳ ಓಲೆ ಕೃತಿಯೊಂದು 'ಸಿದ್ಧಾರ್ಥಿ ಸಂವತ್ಸರದ ವೈಶಾಕ ಶುದ್ಧ ೫ ಅಂಗಾರಕವಾರ'ದಲ್ಲಿ ಲಿಖಿತವಾಗಿದೆ. (ಸಂಖ್ಯೆ : ೧೯೧, ಬೃಹನ್ಮಠ. ...

**ಕಂಬಳಿದೇಶಿಕ (೬೨)**

ಈತನನ್ನು ಕುರಿತ ಕೆಲವು ಸ್ವರವಚನಗಳನ್ನು ಶ್ರೀ ಪಿ. .
(ಬಸವಪಥ, ೪—೯, ೧೯೮೨, ೪೮—೫೨). ಇಲ್ಲಿನ ಸ್ವರ
ಚಿತ್ರವತ್ತಾಗಿದೆ.

---

* 'ದುಂಡುಕಂಸದಲ್ಲಿನ ಸಂಖ್ಯೆಗಳು ಪ್ರಸ್ತುತ ಸಂಪುಟದ ಕ್ರಮಾಂಕಕ್ಕೆ ಸಂ॰

**ಕೆಂಪುಕಂಬಳಿ ಬಸವಲಿಂಗೇಶ (೬೩–೬)**

ಈ ಅಂಕಿತದ ಸ್ವರವಚನಗಳಲ್ಲಿ ಬಾಗುಳಿ ಬಸವಲಿಂಗೇಶನ (೧೭೪೨–೧೭೬೬) ಉಲ್ಲೇಖವಿದ್ದು ಈ ಸ್ವರವಚನಗಳು ಸು. ೧೭೬೦ರ ವೇಳೆಯಲ್ಲಿ ರಚಿತವಾಗಿರಬಹುದು.

**ಕೊಟ್ಟೂರ ಬಸವ (೬೭–೭೦, ೧೭೨)**

ಎಮ್ಮೆಬಸವನ (೧೫೪೩)ನ 'ಕಾಲಜ್ಞಾನೋಕ್ತ'. ಮೊಗಲ ಸಾರ್ವಭೌಮ ಅಕ್ಬರನ ಸಮಕಾಲೀನ.

೬೭ರಲ್ಲಿ ಕೊಟ್ಟೂರ ಬಸವ, ಕೊಟ್ಟೂರಿನಲ್ಲಿರುವ ಹಿರಿಯಮಠದ ಪಟ್ಟದ ಗುರು ಚೆನ್ನಬಸವನ ಕರಜಾತ ಮರಿ ಚೆನ್ನಬಸವನಿಗೆ ವರವಿತ್ತಂತೆ ತಿಳಿಸಿದೆ.

೭೦ರಲ್ಲಿ ಕೊಟ್ಟೂರೇಶ ಬಾಗುಳಿವಂಶದಿಷ್ಟದಾಯಕನಾಗಿದ್ದ ಅಂಶದ ಸೂಚನೆಯಿದೆ.

**ಕೊಪ್ಪಳದ ಗವಿಮಠವಾಸ (೭೧)**

ಕೊಪ್ಪಳದ ಶಾಂತವೀರಯೋಗಿಯ ಸ್ತುತಿಯಿದೆ.

**ಕೋರಾಣ್ಯದ ಶಿವಲಿಂಗೇಶ (೭೨–೪)**

ಕರ್ತೃ ಅಜ್ಞಾತ. ಲಿಂಗಣ್ಣ ಕವಿಯ (೧೭೫೦) 'ಕೆಳದಿನೃಪವಿಜಯ' ದಂತೆ ಶಿವಪ್ಪನಾಯಕರ (೧೬೪೫–೬೧) ಪುತ್ರಿ ಬಸಲಿಂಗಮ್ಮಾಜಿಯನ್ನು ಕೊರಾಣ್ಯದ ಶಿವಲಿಂಗದೇವರ ಶಿಷ್ಯ ಬಸವ ಲಿಂಗಯ್ಯನಿಗೆ ಕೊಟ್ಟು ವಿವಾಹ ಮಾಡಿದಂತೆ ಹೇಳಿದೆ. ಬಸವಲಿಂಗಯ್ಯನೇ (ಅಥವಾ ಇನ್ನೊಬ್ಬವ್ಯಕ್ತಿ) ತನ್ನ ಗುರುವಿನ ಹೆಸರನ್ನು ಅಂಕಿತವಾಗಿ ಬಳಸಿಕೊಂಡು ಸ್ವರವಚನಗಳನ್ನು ರಚಿಸಿರಬಹುದು. ಹೀಗಾಗಿ ಈ ಸ್ವರವಚನಕಾರನ ಕಾಲ ಸು. ೧೬೫೦ರ ಆಚೀಚೆ ಆಗಬಹುದಾಗಿದೆ.

**ಚೇಲಾಳಸ್ವಾಮಿ (೧೦೨–೧೨೨)**

ಕರ್ತೃ ಅಜ್ಞಾತ. ನೂರೈವತ್ತಕ್ಕೂ ಮಿಕ್ಕ 'ಸ್ವರಚವನಗಳು' ಹಾಗು 'ಲಿಂಗಾಂಗ ಸಾಮರಸ್ಯ ಪಾರಿಜಾತ'ದ ಕರ್ತೃ. 'ಚೇಲಾಳ ಬಗೆ'ಗೆ ಕಾರಣಕರ್ತನಾದ ಚೇಲಾಳಪ್ಪನ ಹೆಸರನ್ನೇ ತನ್ನ ಸ್ವರವಚನಗಳ ಅಂಕಿತವನ್ನಾಗಿ ಬಳಸಿಕೊಂಡ ಈತನ ಕಾಲ ಹದಿನೆಂಟನೆಯ ಶತಮಾನದ ಪೂರ್ವಾರ್ಧವಾಗಿರಬಹುದು.

೧೨೦ನೆಯ ಸ್ವರವಚನದಲ್ಲಿ ಮುದ್ರಾಪುರಾಧೀಶನೆಂದಿರುವ ಅಂಶ ಗಮನಾರ್ಹ.

**ಚೆನ್ನಬಸವಪ್ರಿಯ ಮುರಿಗೆ ಗುರುಸಿದ್ಧ (೧೩೮)**

ಸ್ವಾದಿ ಚೆನ್ನಬಸವಸ್ವಾಮಿಗಳ ಅಂಕಿತವಿದಾಗಿರಬಹುದು. ಇವರು ಚಿತ್ರದುರ್ಗ ಬೃಹನ್ಮಠದ ಮಠಾಧೀಶರು. ಇಮ್ಮಡಿ ಮುರಿಗೆ ಗುರುಸಿದ್ಧಸ್ವಾಮಿಗಳ (?–೧೭೨೯) ಶಿಷ್ಯರು. ಇವರು ಸಂಸ್ಕೃತದಲ್ಲಿ 'ವೀರಶೈವೋತ್ಕರ್ಷ ಸಂಗ್ರಹ'ದ ಕರ್ತೃಗಳು. ತಮ್ಮ ಗುರುಗಳ ಸ್ತುತಿ ಸ್ವರವಚನ ವಸ್ತು.

**ಜಟ್ಟಿಗಿ ಬಸವಲಿಂಗ (೧೪೨)**

ಚಿನ್ಮೂಲಾದ್ರಿ ಮುರಿಗೇಶರನ್ನು ಸ್ತುತಿಸಿರುವ ಈ ವಚನಕಾರ ಅಜ್ಞಾತ. ಈ ಮುರಿಗೇಶರ ಪೂರ್ಣನಾಮಧೇಯ ತಿಳಿಯದು.

**ಜಡೆಯ ಚಿಕ್ಕಬಸವ (೧೪೩–೧೪೪)**

ಈತ ಸ್ವಾದಿ ಚೆನ್ನಬಸವಸ್ವಾಮಿಗಳ (೧೭೩೦) ಶಿಷ್ಯ.

ಈತನ ಸ್ತುತಿ ಸ್ವರವಚನಗಳ ವಸ್ತು. ಹೀಗಾಗಿ ಈ ಸ್ವರವಚನಕಾರನ ಕಾಲ ಸು. ೧೭೫೦.

**ತಿಪ್ಪೇರುದ್ರ (೧೪೬–೧೪೭)**

೧೪೬ನೆಯ ಸ್ವರವಚನದಲ್ಲಿ ಈತ ಚೆನ್ನಮ್ಮಲಗಿರಿ ಚಂದ್ರಮೌಳಿ ದೊರೆಯನ್ನು ಕ್ಷತ್ರಿಯನೆನಿಸಿದ ಐತಿಹಾಸಿಕ ಸಂಗತಿ ನಮೂದಿತವಾಗಿದೆ.

**ತೋಂಟದಯ್ಯ (೩೯, ೯೯, ೧೪೮–೫೪, ೨೫೭, ೨೬೨–೬೩)**

ಕವಿ ನಂಜಕೃತ ಸ್ವರವಚನ ೨೬೨ರಲ್ಲಿ ಸಿದ್ಧಲಿಂಗನ ಕಗ್ಗೆರೆಯ ವಾಸ್ತವ್ಯದ ಕಾಲದಲ್ಲಿ ನಡೆದ ಕೆಲವು ಘಟನೆಗಳು ಸೂಚಿತವಾಗಿವೆ. ವಚನ 152 ಅವರನ್ನು 'ಗೋಸಲ ಕರಜ ದಿವ್ಯಾಂಗ'ನೆಂದೂ ೨೬೩ನೆಯ ವಚನ 'ಗೋಸಲ ಬಗೆ ಸದ್ಗುರು ಕರಜಾತ'ನೆಂದು ಅವರ ವಂಶದ ಬಗೆಗೆ ಸೂಚಿಸಿವೆ.

**ನಿರ್ವಾಣಿ ಚೆನ್ನಬಸವ (೧೬೮)**

ಕರ್ತೃ ಅಜ್ಞಾತ. ಸ್ತುತಿ ಕೃತಿಯ ವಸ್ತು.

**ನಿಶ್ಚಿಂತ ಶಾಂತ (೧೬೯)**

ಈ ಸ್ವರವಚನ ಚೆನ್ನವೀರಾರ್ಯನ (೧೬೦೦) 'ಶಿವಯೋಗ ಪ್ರದೀಪಿಕೆ'ಯಲ್ಲಿ ಉದ್ಧೃತವಾಗಿದೆ.

**ಬಾಹದರಖಾನ (೧೭೩)**

ಐತಿಹಾಸಿಕ ವ್ಯಕ್ತಿ. ಇವನ ಶಿವಭಕ್ತಿ ಧಾರ್ಮಿಕ ಸಹಿಷ್ಣುತೆಯ ದಿಕ್ಸೂಚಿ.

**ಬುಕ್ಕಾಂಬುಧಿ ಮಲ್ಲಿಕಾರ್ಜುನ (೧೭೪–೧೭೫)**

೧೭೪ನೆಯ ಸ್ವರ ವಚನದಲ್ಲಿ ಈತನ ಬಹಿರಂಗರೂಪಧಾರಣೆಯ ಚಿತ್ರಣದಲ್ಲಿ ಕಾಣಬರುವ ಕುಸುರಿತನ ಗಮನಾರ್ಹ.

**ಬೂದಿ (ಧೂಳಿ) ಬಸವ (೧೭೬)**

ಈತ ಗೊಬ್ಬೂರ ನಿವಾಸಿ. ಮುರಿಗಿಯ ಶಾಂತನ (೧–೧೭೦೩) ಕಂದನಾದ ಈತನಕಾಲ ೧೭೦೦.

**ಮುದ್ದಾನೀಶ (೧೭೮–೧೭೯)**

ಷಡುಸ್ಥಲಾಧೀಶನೆಸಿದ ಈತನ ಶೀಲದುರ್ಗದ ನಿವಾಸಿ.

**ಮಹಂತಖಾನೇಂದ್ರ (೧೮೨)**

ಎರಮಲೆ ಹೆಬ್ಬುಲಿ ಎಂಬ ಖ್ಯಾತಿಗೆ ಭಾಜನನಾದ ಈತನ ಶಿವಭಕ್ತಿ ಅನನ್ಯ ಅಸದೃಶ ಅಪೂರ್ವ.

**ಮುದ್ವೀರದೇವ/ಲಿಂಗ (೧೮೩–೮೪)**

ಮುರಿಗೇಂದ್ರನ ಕರಕಂಜನೆನಿಸದ ಈತನ ಕಾಲ ಸು. ೧೭೦೦.

**ಮುದ್ವೀರಾತ್ಮಕ ಚೆನ್ನವೀರ (೧೮೫–೧೮೬)**

ಮೈಲಾರದ ಬಸವಲಿಂಗ ಸ್ವಾಮಿಗಳ (೧೭೫೦–೬೦) ಗುರುಗಳು ಹಾಲವರ್ತಿ ಚೆನ್ನವೀರ ಸ್ವಾಮಿಗಳು. ಇವರ ಗುರುಗಳಾರೆಂಬ ಸಂಗತಿ ತಿಳಿದುಬಂದಿಲ್ಲ. ಒಂದು ವೇಳೆ ಮುದ್ವೀರಸ್ವಾಮಿಗಳು ಇವರ ಗುರುಗಳಾದ ಪಕ್ಷದಲ್ಲಿ 'ಮುದ್ವೀರಾತ್ಮಕ ಚೆನ್ನವೀರ' ಅಂಕಿತದ ಸ್ವರವಚನಗಳ ಕರ್ತೃತ್ವ ಹಾಲವರ್ತಿ ಚೆನ್ನವೀರರಿಗೆ ಸಲ್ಲುತ್ತದೆ. ಇವರ ಕಾಲ ಸು. ೧೭೩೦. ಈ ಕಾಲದಲ್ಲಿ ಪ್ರಸಿದ್ಧರಾಗಿದ್ದ ಹಾಗಲವಾಡಿ ಸಂಸ್ಥಾನದ ರಾಜಗುರುಗಳಾಗಿದ್ದ ಮುದ್ವೀರಸ್ವಾಮಿಗಳೇ ಇವರಾಗಿರಬಹುದಾದ ಸಾಧ್ಯತೆಯನ್ನು ನಿರಾಕರಿಸುವಂತಿಲ್ಲ.

೧೮೬ನೆಯ ಸ್ವರವಚನದಲ್ಲಿ ಕಿನ್ನರಿ ನುಡಿಸುತ್ತ ಬಂದ ಚೆನ್ನವೀರ ಜೋಗಿಗಳ ವ್ಯಕ್ತಿತ್ವ ಹೃದಯ ಸ್ಪರ್ಶಿಯಾಗಿ ಪಡಿಮೂಡಿದೆ.

೧೮೭ರಲ್ಲಿನ ೩–೪–೫ನೆಯ ನುಡಿಗಳು ಬಾಲಲೀಲಾ ಮಹಾಂತ ಶಿವಯೋಗಿಗಳ 'ಆಶೀರ್ವಾದದ ಶರೀಪು ಕಳುಹಿ' ಸ್ವರವಚನದಲ್ಲಿನ ೬–೭–೮ನೆಯ ನುಡಿಗಳೇ ಆಗಿವೆ.

ಸ್ವರವಚನ ೨೦೬ರಲ್ಲಿ ಬಸವಪುರಾಣವನ್ನು ತೆಲಗು–ಕನ್ನಡ–ಸಂಸ್ಕೃತಗಳಲ್ಲಿ ಬರೆದ ಪಾಲ್ಕುರಿಕೆ ಸೋಮ–ಭೀಮಕವಿ–ಶಂಕರಾರಾಧ್ಯ ಹಾಗು ಷಡಕ್ಷರದೇವರನ್ನು ಹೆಸರಿಸಿದೆ. ಅಲ್ಲದೆ ಈ ಕೃತಿಗೆ ಶ್ರುತಿಸಮ್ಮತಿ ಪೂರ್ವಕವಾದ ಗ್ರಂಥಾರ್ಥವನ್ನು ಯತಿಪುರದ ಸಿದ್ದೇಶನ ದಯದಿಂದ ಹೇಳಿದ ಬಸವಲಿಂಗರನ್ನು ಸ್ಮರಿಸಲಾಗಿದೆ.

೨೦೭ನೆಯ ಸ್ವರವಚನದಲ್ಲಿ ರಂಗಪುರವಾಸ ಬಸವಪ್ರಭುದೇವನನ್ನು ಹೆಸರಿಸಿ ಆತ ಶಾಂತನಿಗೆ ವರವಿತ್ತ ಸಂಗತಿ ಹೇಳಿದೆ. ಈ ಶಾಂತ ಯಾರೆಂಬ ಬಗೆಗೆ ಏನೂ ತಿಳಿದಿಲ್ಲ.

೨೦೮ರಲ್ಲಿ ರೇವಣ (ಸಿದ್ಧ)ಯತಿಯ ಜೀವನದ ಕೆಲವು ಘಟನೆಗಳ ಚಿತ್ರಣವಿದೆ. ಅಂಕಿತದಲ್ಲಿ ರೇವಣಯತಿರೊಡನೆ ತೋಂಟದ ಸಿದ್ಧಲಿಂಗೇಶ್ವರನ್ನು ಕೂಡಿಸಿ ಹೇಳುವಲ್ಲಿನ ಕವಿಯ ವಿಶಾಲ ಹೃದಯದ ದರ್ಶನ ಶ್ಲಾಘನೀಯ.

೨೦೯ರಲ್ಲಿ ಕೆಳದಿ ಸೋಮಶೇಖರ ಭೂಪಾಲ (೧೬೬೩–೭೧) ಮತ್ತು ಆತನರಸಿ ಚೆನ್ನವ್ವ (೧೬೭೧–೯೭)ರ ಉಲ್ಲೇಖ ಐತಿಹಾಸಿಕ ದಾಖಲೆ. ಇದರಲ್ಲಿ ಕೆಳದಿ ಚೆನ್ನವ್ವ ಲಕ್ಷದ ತೊಂಬತ್ತಾರು ಸಾವಿರಕ್ಕೆ ಭಿಕ್ಷವ ನೀಡುವಳೆಂಬ ಉಲ್ಲೇಖ ಧಾರ್ಮಿಕ ದೃಷ್ಟಿಯಿಂದ ಗಮನಾರ್ಹ.

ಬಂಧ ಹಾಗೂ ವಸ್ತುಗಳ ದೃಷ್ಟಿಯಿಂದ ಈ ಸ್ವರವಚನವನ್ನು 'ಕರ್ನಾಟಕ ಕವಿಚರಿತೆ'ಯ ತೃತೀಯ ಸಂಪುಟದ ಪುಟ ೨ (೧೯೨೯)ರಲ್ಲಿ ಉಕ್ತವಾಗಿರುವ ಕೆಳದಿ ಬಸವಭೂಪಾಲನಿಗೆ ಮೂಕಾಂಬಿಕೆ ಹೂವಿತ್ತ ಸ್ವರವಚನದೊಡನೆ ಹೋಲಿಸಬಹುದು.

೨೨೦ರಲ್ಲಿ ಪಲ್ಲವಿ ರಹಿತವಾದ ೨೨ ಸಾಂಗತ್ಯಗಳಿವೆ. ಇದರಲ್ಲಿ ಮೊದಲ ಸಾಂಗತ್ಯವನ್ನು ಬಿಟ್ಟು

ಉಳಿದೆಲ್ಲ ಅಂದರೆ ೨ ರಿಂದ ೨೨ರವರೆಗಿನ ಸಾಂಗತ್ಯಗಳು ನಾಗಲಿಂಗಯ್ಯ ಕೃತ 'ಕಲಿಕಾಮನ ಸಾಂಗತ್ಯ'ದಲ್ಲಿ ದೊರೆಯುತ್ತವೆ. ಅಲ್ಲದೆ ಇವೇ ಸಾಂಗತ್ಯಗಳೆ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ಸಂಗ್ರಹದಲ್ಲಿನ (ಬೆಂ. ವಿ. ವಿ.) ಓಲೆ ಪ್ರತಿ ಕ್ರಮಾಂಕ ೧೨೪ರಲ್ಲಿನ 'ಬಸವೇಶ್ವರ ಪಂಚಸ್ತೋತ್ರ'ದಲ್ಲಿ ಉಲ್ಲೇಖವಾಗಿವೆ.

೨೩೪ರಲ್ಲಿ ವಚನಕಾರ ಸ್ವತಂತ್ರ ಸಿದ್ಧಲಿಂಗನ (೧೬೦೦) ಸ್ತುತಿಯಿದೆ. ಈತ ಕಾಪನಹಳ್ಳಿಯ ಗವಿಯ ನದಿತೀರವಾಸನೆಂದು ಹೇಳಿ ಆತ ಲಿಂಗೈಕ್ಯನಾದ ಸ್ಥಳವನ್ನು ತಿಳಿಸಿದೆ.

೨೩೫ರಲ್ಲಿ ಬೆಳಗಾಂ ಜಿಲ್ಲೆ ಗೋಕಾಕ ತಾಲ್ಲೂಕಿನ ಸಾವಳಗಿ ಶಿವಲಿಂಗೇಶನ ಸ್ತುತಿಯಿದೆ. ಇವರ ಕಾಲ ಸು. ೧೬೦೦. ಇವರನ್ನು ಕುರಿತು ಶಿವಪುರದ ಸಿದ್ಧಲಿಂಗ (೧೭೦೦) 'ಪುರಾಣ'ವೊಂದನ್ನು ರಚಿಸಿದ್ದಾನೆ. ಅಲ್ಲದೆ ಅಜ್ಞಾತ ಕರ್ತೃವಿನ 7 ವೃತ್ತಗಳ 'ಅಷ್ಟಕ'ವೊಂದಿದೆ.

೨೩೬ರಲ್ಲಿ ಗುರುವರೇಣ್ಯನೆನಿಸಿದ ಸಾಸಲ ಸೋಮನಾಥನ ಸ್ತುತಿಯಿದೆ.

ವೀರಭದ್ರ (೨೦೯, ೨೬೫)

೨೦೯ರಲ್ಲಿ ಕೆಳದಿ ವೀರಭದ್ರನ ಹಾಗೂ ೨೬೫ರಲ್ಲಿ ಹೊಸಹಳ್ಳಿ ವೀರಭದ್ರನ ಸ್ತುತಿಗಳಿವೆ.

ಚಿತ್ರದುರ್ಗದ ಮಠಾಧೀಶರು

ಪ್ರಸ್ತುತ ಸಂಪುಟದಲ್ಲಿ ಚಿತ್ರದುರ್ಗ ಪರಂಪರೆಗೆ ಸಂಬಂಧಿಸಿದ ಮುರಿಗಾ ಶಾಂತವೀರರು, ಇಮ್ಮಡಿ ಗುರುಸಿದ್ಧರು, ಸ್ವಾದಿ ಚೆನ್ನಬಸವಸ್ವಾಮಿಗಳು, ನೈಘಂಟಿನ ಸಿದ್ಧಬಸವರು, ಸಾವಳಗಿ ಗುರುಶಾಂತಸ್ವಾಮಿಗಳು, ಸಣ್ಣಪಾದದ ಚೆನ್ನವೀರಸ್ವಾಮಿಗಳು ಹಾಗೂ ಮಹಾಲಿಂಗಸ್ವಾಮಿಗಳನ್ನು ಕುರಿತು ಬರೆದ ಸ್ವರವಚನಗಳಿವೆ. ಅಲ್ಲದೆ ಮುರಿಗಾ ಗುರುಬಸವೇಶರಿಗೆ ಸಂಬಂಧಿಸಿದ ಸ್ವರವಚನವೊಂದು ಸಹ ದೊರಕಿದೆ.

ಮುರಿಗಾ ಶಾಂತವೀರ (?–೧೭೦೩)

೧೮೯ರಲ್ಲಿ ಅಂದಣದಲ್ಲಿ ಮೂರ್ತಿಗೊಂಡಿದ್ದ ಮುರಿಗಾಸ್ವಾಮಿಗಳ ಬಗೆಗೆ (= ಮುರಿಗಾ ಶಾಂತವೀರ) ಸಖಿಯರು ತಮ್ಮ ತಮ್ಮಲ್ಲೇ ಮಾತನಾಡಿಕೊಂಡ ಚಿತ್ರಣವಿದೆ.

೧೯೦ನೆಯ ಸ್ವರವಚನದಲ್ಲಿನ ಕರಿಬಸವರಾಜೇಂದ್ರ ಮುರಿಗೆ ಶಾಂತವೀರಸ್ವಾಮಿಗಳಿಗಿದ್ದ ಮತ್ತೊಂದು ಹೆಸರು.

೧೯೬ರಲ್ಲಿ ಮುರಿಗೆ ಶಾಂತವೀರರನ್ನು ಮುರಿಗೆ ರುದ್ರರೆಂದು ಕರೆಯಲಾಗಿದೆ.

೨೦೨ರಲ್ಲಿ ಮುರಿಗೆ ಶಾಂತವೀರರ ವಾದ ನೈಪುಣ್ಯತೆಯ ವಿವರವಿದೆ.

೧೭೬ರಲ್ಲಿ ಬೂದಿ (ಧೂಳಿ) ಬಸವರು ತಮ್ಮನ್ನು 'ಮುರಿಗಿಯ ಶಾಂತ ಮಗ'ನೆಂದು ಕರೆದು ಕೊಂಡಿದ್ದಾರೆ.

೧೮೪ರಲ್ಲಿ ಮುದ್ವೀರಸ್ವಾಮಿಯನ್ನು ಮುರಿಗೇಂದ್ರರ ಕರಕಂಜ ತುಂಗ'ನೆಂದು ಕೀರ್ತಿಸಲಾಗಿದೆ.

೧೯೮ರಲ್ಲಿ ಲಿಂಗವಾದ ಮುರಿಗೆ ಶಾಂತವೀರ ಲಿಂಗಸಂಗಿ (ಸ್ವಾದಿ) ಬಸವಲಿಂಗರಾಜನನ್ನು ಪಾಲಿಸಿದ ಸಂಗತಿ ನಮೂದಿತವಾಗಿದೆ.

೧೯೩ರಲ್ಲಿ ಶಾಂತವೀರರು ಹಿರಿ ಮುರಿಗೆವೊಡೆಯರೆಂದು ಕೀರ್ತಿತರಾಗಿದ್ದಾರೆ.

೨೧೮ರಲ್ಲಿ ಶಾಂತವೀರಸ್ವಾಮಿಗಳು ಶರಣರಿಗೆ ಷಟ್ಸ್ಥಲದ ಹಾದಿ ತೋರಿಸಿ ಬೋಧಿಸಿ ಸಲಹುತ್ತಿದ್ದ ಸಂಗತಿ ನಿರೂಪಿತಗೊಂಡಿವೆ.

**ಇಮ್ಮಡಿ ಗುರುಸಿದ್ಧ (?–೧೬೨೯)**

೯೦ರಲ್ಲಿ ನೂತನ ಶಾಂತರೆಂದು ಕೀರ್ತಿಸಲಾಗಿದೆ. ಅಲ್ಲದೆ ಇವರ ವಾದಸಾಮರ್ಥ್ಯದ ಬಗೆಗೆ 'ನಟನಾ ವಿನೋದಿ ಜಿತವಾದಿ' ಎಂದಿದೆ.

೧೯೨–೧೯೩ರಲ್ಲೂ ಗುರುಸಿದ್ಧರ ವಿದ್ವತ್ ಬಗೆಗೆ ಕೀರ್ತಿಸಿದೆ

**ಸ್ವಾದಿ ಚೆನ್ನಬಸವ (೧೬೨೯–೩೦)**

೧೩೮ರಲ್ಲಿ ಸ್ವಾದಿ ಚೆನ್ನಬಸವ ಸ್ವಾಮಿಗಳು ತಮ್ಮ ಗುರುಗಳಾದ ಗುರುಸಿದ್ಧರನ್ನು ಮುಕ್ತಕಂಠದಿಂದ ಸ್ತುತಿಸಿದ್ದಾರೆ.

**ನೈಘಂಟಿನ ಸಿದ್ಧವೃಷಭ (= ಬಸವ) ೧೮೦೦ – ೧೮೨೦)**

ಶೂನ್ಯಸಿಂಹಾಸನ ಪರಂಪರೆಯ ಹದಿನೇಳನೆಯ ಪಟ್ಟಾಧಿಕಾರಿಗಳು

೨೫೮–೬೧ರಲ್ಲಿ ಸಿದ್ಧ ಬಸವಸ್ವಾಮಿಗಳ ಸ್ತುತಿ ಇದೆ.

**ಸಾವಳಗಿ ಗುರುಶಾಂತಸ್ವಾಮಿಗಳು (೧೮೩೫–೧೮೪೦)**

ಬಾಲಲೀಲಾ ಮಹಾಂತಸ್ವಾಮಿಗಳ ಸಮಕಾಲೀನರು.

೧೮೬ರಲ್ಲಿ ಇವರನ್ನು ಹಿರೆ ತ್ರೈಜಗದ್ಗುರುವೆಂದು, 'ಅರುಣಾಚಲ ಬುಡದ ರಾಮಾಪತಿ ಲಿಂಗೋದ್ಭವ'ರೆಂದು ಕರೆದಿದ್ದಾರೆ.

**ಸಣ್ಣಪಾದದ ಚೆನ್ನವೀರ (೧೮೪೦–೧೮೫೪)**

ಬೃಹನ್ಮಠದ ೨೦ನೆಯ ಪಟ್ಟದವರು.

ಇವರ ಶಿಷ್ಯ ಶಿವಪೂಜೆದೇವ ಸ್ವರವಚನ ೨೨೩ರಲ್ಲಿ ಆನಂದನಾಮ ವತ್ಸರ ಚಯಿತ್ರ ಶುದ್ಧದ ಭಾನು ಉಪದಯ ಭರ್ಗವಾಸರ ಪ್ರತಿಪದೆಯಲ್ಲಿ ಬಯಲ ನೈದಿದ ಸಂಗತಿ ತಿಳಿಸಿದ್ದಾನೆ. ಇದು. ಕ್ರಿ. ಶ. 29/30–3–1854ಕ್ಕೆ ಹೊಂದುತ್ತದೆ.

**ಮಹಾಲಿಂಗಸ್ವಾಮಿ (೧೮೫೪–೧೮೬೦)**

ಬೃಹನ್ಮಠದ ಪಟ್ಟದ ಇಪ್ಪತ್ತೊಂದನೆಯ ಸ್ವಾಮಿಗಳು.

ಶಿಷ್ಯ ಗುರುಪಾದೇಶ ವಚನ ೯೪ರಲ್ಲಿ ಗುರುಗಳ ಸ್ತುತಿ ಮಾಡಿದ್ದಾನೆ.

**ಮುರಿಗಾ ಗುರುಬಸವ (?)**

೧೮೮ರಲ್ಲಿ ಇವರ ಸ್ತುತಿ ಇದೆ. ವಿವರಗಳಿಲ್ಲ.

## ಐತಿಹಾಸಿಕ ವ್ಯಕ್ತಿಗಳ ಉಲ್ಲೇಖ

**ಕೆಳದಿ**

೨೦೯ರಲ್ಲಿ ಕೆಳದಿ ಸೋಮಶೇಖರ ಭೂಪಾಲ (೧೬೬೩–೭೧); ಚೆನ್ನಮ್ಮಾಜಿ (೧೬೭೧–೯೭)

**ಚಿತ್ರದುರ್ಗ**

೧೪೬ರಲ್ಲಿ ಚಂದ್ರಮೌಳೀಶ (ತಿಪ್ಪೇರುದ್ರನ ಸಮಕಾಲೀನ)

೨೨೯ರಲ್ಲಿ ಬ್ರಹ್ಮಭೂಪಾಲ (=ಬರಮಭೂಪ) (೧೬೮೮–೧೭೨೦)

**ಬಾಗುಳಿ**

೭೦ರಲ್ಲಿ ವಂಶದ ಉಲ್ಲೇಖ

೬೭, ೬೯ರಲ್ಲಿ ಹರಪುರದ ಬಸವಂತರಾಜನ ಉಲ್ಲೇಖ

೬೫ರಲ್ಲಿ ಸೋಮಶೇಖರನ ಉಲ್ಲೇಖ (೧೭೪೨–೬೬)

**ಸೋದೆ**

೩೮, ೧೯೮ರಲ್ಲಿ ಬಸವಲಿಂಗರಾಜನ ಉಲ್ಲೇಖ (೧೬೯೭–೧೭೪೫)

**ಇತರರು**

೧೪೧ರಲ್ಲಿ ಗುಡಿಯ ಮಾರನಪುರದ ಜ್ವಲಕಂತೇಶನ ಭಕ್ತ ಕೆಂಪಭೂಪನ ಉಲ್ಲೇಖ

೧೫೧ರಲ್ಲಿ ಬಸವೇಂದ್ರ

೧೮೨ರಲ್ಲಿ ಮಹಂತಖಾನೇಂದ್ರ

೧೮೫ರಲ್ಲಿ ದೊರೆಗಳು (?)

**ಕರ್ತೃಗಳು ತಿಳಿಯದ ಸ್ವರವಚನಗಳ ಕ್ರಮಾಂಕ**

೨೯, ೩೦, ೩೧, ೩೨–೪, ೩೫–೬, ೩೭, ೪೦, ೪೮, ೫೦, ೫೧, ೫೨–೭, ೫೮, ೫೯, ೬೦, ೬೧, ೬೨, ೬೩–೬, ೬೭–೮, ೬೯, ೭೦, ೭೧, ೭೨–೪, ೯೦, ೯೬–೭, ೧೦೦–೦೧, ೧೦೨–೨೩, ೧೩೮, ೧೪೧, ೧೪೨, ೧೪೩–೪೪, ೧೪೬–೪೭, ೧೪೮–೫೪, ೧೫೫, ೧೫೬, ೧೬೧–೬೨, ೧೬೪, ೧೬೮, ೧೬೯, ೧೭೦–೭೧, ೧೭೨, ೧೭೩, ೧೭೪, ೧೭೫, ೧೭೬, ೧೭೭, ೧೭೮–೭೯, ೧೮೦, ೧೮೧, ೧೮೨, ೧೮೩–೮೪, ೧೮೫–೮೬, ೧೮೭, ೧೮೮, ೧೮೯, ೧೯೧, ೧೯೨, ೧೯೪, ೧೯೫, ೧೯೬, ೧೯೭, ೧೯೮, ೧೯೯, ೨೦೦–೦೪, ೨೦೫, ೨೦೬, ೨೦೭, ೨೦೮, ೨೦೯, ೨೧೪, ೨೧೬–೧೭, ೨೧೮, ೨೧೯,

೨೨೦–೨೧, ೨೨೨, ೨೪೨, ೨೪೩, ೨೪೬–೪೭, ೨೫೩, ೨೫೪, ೨೫೫, ೨೫೬, ೨೫೭, ೨೫೮–೬೧, ೨೬೩, ೨೬೪, ೨೬೫, ೨೬೬, ೨೬೭.

**ಸ್ವರವಚನ ಆಕರಗಳು**

ಸ್ವರವಚನಗಳ ಸಂಗ್ರಹವನ್ನು ಈ ಕೆಳಕಂಡ ವ್ಯಕ್ತಿಗಳು ಹಾಗೂ ಸಂಸ್ಥೆಗಳ ಮೂಲಕ ಮಾಡಿದೆ.

### ವ್ಯಕ್ತಿಗಳು

ಪ್ರೊ। ಉಮಾಪತಿ ಎಸ್. (ದಾವಣಗೆರೆ)
ಪ್ರೊ। ಉಮಾಪತಿಶಾಸ್ತ್ರಿ, ಗೌ. ಮ. (ಧರ್ಮಸ್ಥಳ)
ಶ್ರೀ ಉಮೇಶಚಂದ್ರ (ಕೆಂಗೇರಿ)
ಶ್ರೀ ಗಿರಿರಾಜು ಪಿ. ಎಂ. (ಮೈಸೂರು)
ಡಾ। ಗುಂಜಾಳ ಎಸ್. ಆರ್. (ಧಾರವಾಡ)
ಶ್ರೀ ಶಾಂತವೀರಯ್ಯ, ಹಿ. ಚೇ. (ಬೆಂಗಳೂರು)
ಶ್ರೀ ಶಿವಲಿಂಗಯ್ಯ ಜಿ. ಎಂ. (ಮೈಸೂರು)
ಷ. ಬ್ರ. ಸಿದ್ಧರಾಮ ಶಿವಚಾರ್ಯ (ಯಲಬುರ್ಗಿ)

### ಸಂಸ್ಥೆಗಳು

ಕ. ಅಂ. ಕೇಂ. : ಕನ್ನಡ ಅಧ್ಯಯನ ಕೇಂದ್ರ (ಬೆಂಗಳೂರು)
ಕ. ಅ. ಸಂ. : ಕನ್ನಡ ಅಧ್ಯಯನ ಸಂಸ್ಥೆ (ಮೈಸೂರು)
ಕರಿಸಿದ್ದೇಶ್ವರಮಠ (ಹೊನ್ನವಳ್ಳಿ)
ಕೊಟ್ಟೂರಸ್ವಾಮಿ ಮಠ (ಹೊಸಪೇಟೆ–ಬಳ್ಳಾರಿ)
ತರಳಬಾಳು ಬೃಹನ್ಮಠ (ಸಿರಿಗೆರೆ)
ತೋಂಟದಾರ್ಯ ಸಂಸ್ಥಾನ ಮಠ (ಗದಗ)
ಪಂಚನಹಳ್ಳಿ ಸಂಗ್ರಹ
ಬಸವ ಭವನ (ಬೆಂಗಳೂರು)
ಬೃಹನ್ಮಠ (ಚಿತ್ರದುರ್ಗ)
ಬೇಲಿಮಠ (ಬೆಂಗಳೂರು)
ಮ. ಸಂ. ಪಾ. ಮಹಾರಾಜ ಸಂಸ್ಕೃತ ಪಾಠಶಾಲೆ (ಮೈಸೂರು)
ಮೂರುಸಾವಿರಮಠ (ಹುಬ್ಬಳ್ಳಿ)
ವ. ವಾ. ಭಾಂ. : ವಚನ ವಾಙ್ಮಯ ಭಂಡಾರ (ಧಾರವಾಡ)

ಸ್ವರವಚನ ಸಂಪುಟ – ೧ನ್ನು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯ ಮೂಲಕ ಪ್ರಕಟಿಸುತ್ತಿರುವ ಶ್ರೀಶ್ರೀ ಶಿವರಾತ್ರಿ ದೇಶಿಕೇಂದ್ರಸ್ವಾಮಿಗಳವರಿಗೆ ನನ್ನ ಶಿರಸಾಷ್ಟಾಂಗ ಪ್ರಣಾಮಗಳು.

ಈ ಸಂಪುಟದ ಪ್ರಕಟಣೆಗೆ ಮೂಲ ಪ್ರೇರಕವಾದ ಡಾ। ಎಂ. ಎಂ. ಕಲಬುರ್ಗಿಯವರಿಗೆ

ವಂದನೆಗಳು. ಈ ಸಂಪುಟದ ಸಿದ್ಧತೆಗೆ ಹಲವಾರು ವ್ಯಕ್ತಿಗಳು ಹಾಗೂ ಸಂಸ್ಥೆಗಳ ನೆರವನ್ನು ಬಳಸಿಕೊಳ್ಳಲಾಗಿದೆ. ಅವರೆಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

ಈ ಸಂಪುಟವನ್ನು ಅಂದವಾಗಿ ವಿನ್ಯಾಸಗೊಳಿಸಿ ಮುದ್ರಿಸಿದ ಲಕ್ಷ್ಮಿ ಮುದ್ರಣಾಲಯ ಶ್ರೀ ಅಶೋಕ್ ಕುಮಾರ್ ಅವರಿಗೂ, ಅವರ ಸಿಬ್ಬಂದಿಯವರಿಗೂ ನಮನಗಳು.

## ಸಂದರ್ಭ ಗ್ರಂಥಗಳು


– ಕರಿಬಸವಾರ್ಯ ವಿರಚಿತ ನೀತಿರತ್ನಾಕರ
(ಸಂ.) ಶ್ರೀ ಶಿವರಾಜ ಎಂ. ದೇವಪ್ಪ ಹೂವಿನ ಶಿಗ್ಗಿ, 1994

– ಕಂಬಾಳ ಶಾಂತಮಲ್ಲೇಶನ ಗಣವಚನ ರತ್ನಾವಳಿ
(ಸಂ.) ಪ್ರೊ| ಎಸ್. ಉಮಾಪತಿ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1986

– ಕೆಸ್ತೂರದೇವನ ಸ್ವರವಚನಗಳು
(ಸಂ.) ಡಾ| ಎಂ. ಎಸ್. ಸುಂಕಾಪುರ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1982

– ಗುರುಬಸವಾರ್ಯರ ಸ್ವರವಚನಗಳು
(ಸಂ.) ಶ್ರೀ ಮೊರಬದ ಮಲ್ಲಿಕಾರ್ಜುನ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1986

– ಘನಮಠದ ಶ್ರೀ ನಾಗಭೂಷಣ ಶಿವಯೋಗಿಯ ಪಾವನ ಚರಿತ್ರೆ
ಶ್ರೀ ಕಲ್ಲೂರ ಸಂಗಣ್ಣ, ನರಗುಂದ 1986 (2)

– ಘನಮಠದಾರ್ಯರು
ಪ್ರೊ| ಎಸ್. ಎಸ್. ಕಟಗಿಹಳ್ಳಿಮಠ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1986

– ಘನಮಠೇಶ ತತ್ತ್ವ ಪದಗಳು
(ಸಂ.) ಶ್ರೀ ಮಲ್ಲಿಕಾರ್ಜುನ ದೇಶಿಕೇಂದ್ರಸ್ವಾಮಿ, ಸಂತೆಕೆಲ್ಲೂರು, 1970

– ಭಕ್ತಿಸುಧಾಸಾರ
(ಸಂ.) ಪ್ರೊ| ಸಂ. ಶಿ. ಭೂಸನೂರುಮಠ, ಮುರುಘಾಮಠ, ಧಾರವಾಡ, 1972 (2)

– ಚೆನ್ನವೀರಾರ್ಯನ ಶಿವಯೋಗ ಪ್ರದೀಪಿಕೆ
(ಸಂ.) ಡಾ| ವೀರಣ್ಣ ರಾಜೂರ, ಕ. ವಿ. ವಿ. ಧಾರವಾಡ, 1981

– ನೀಲಮ್ಮನ ವಚನಗಳು
(ಸಂ.) ಡಾ| ಸಾ. ಶಿ. ಮರುಳಯ್ಯ, ಎಸ್. ಶಿವಣ್ಣ, ಬಸವ ಸಮಿತಿ, ಬೆಂಗಳೂರು, 1993

– ಮೈಲಾರ ಬಸವಲಿಂಗ ಶರಣರ ಕೃತಿಗಳು
(ಸಂ.) ಪ್ರೊ| ಶಿ. ಶಿ. ಬಸವನಾಳ, ಮುರುಘಾಮಠ, ಧಾರವಾಡ, 1962 (3)

– ಮೈಲಾರ ಬಸವಲಿಂಗ ಶರಣರು
ಡಾ| ದೇವೇಂದ್ರ ಕುಮಾರ ಹಕಾರಿ ಕ. ವಿ. ವಿ. ಧಾರವಾಡ, 1979

– ಮೊಗ್ಗೆಯ ಮಾಯಿದೇವ ಪ್ರಭುವಾಣಿ
(ಸಂ.) ಚೆನ್ನಮಲ್ಲಿಕಾರ್ಜುನ, ಮುರುಘಾಮಠ, ಧಾರವಾಡ, 1962

– ವೀರಶೈವ ವಾಗ್ಗೇಯಕಾರರು
ಶ್ರೀ ಟಿ. ಆರ್. ಮಹಾದೇವಯ್ಯ, ಮುಂಡರಗಿ, 1993
– ವೀರಶೈವ ಸಂಶೋಧನೆಗಳು
ಡಾ। ಬಿ. ಆರ್. ಹಿರೇಮಠ, ಧಾರವಾಡ, 1992
– ಶಂಕರದೇವರ ಸ್ವರವಚನಗಳು
(ಸಂ.) ಶ್ರೀ ಎಸ್. ಶಿವಣ್ಣ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1987
– ಶಿವದಾಸ ಗೀತಾಂಜಲಿ
(ಸಂ.) ಡಾ। ಎಲ್. ಬಸವರಾಜು, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು, 1963
– ಸರ್ಪಭೂಷಣ ಶಿವಯೋಗಿಗಳ ಕೈವಲ್ಯ ಕಲ್ಪವಲ್ಲರಿ
(ಸಂ.) ಪ್ರೊ। ಶಿ. ಶಿ. ಬಸವನಾಳ, ಸರ್ಪಭೂಷಣ ಶಿವಯೋಗೀಶ್ವರ ಮಠ, ಬೆಂಗಳೂರು, 1949.
– ಸೋದೆಯ ಸದಾಶಿವರಾಯನ ಕೃತಿಗಳು
(ಸಂ.) ಡಾ। ಬಿ. ಆರ್. ಹಿರೇಮಠ, ತೋಂಟದಾರ್ಯ ಸಂಸ್ಥಾನಮಠ, ಗದಗ, 1995
– ಹಾಗಲವಾಡಿ ಮುದ್ವೀರಸ್ವಾಮಿಗಳ ಸ್ವರವಚನಗಳು
(ಸಂ.) ಡಾ। ವೀರಣ್ಣ ರಾಜೂರ, ತೋಂಟದಾರ್ಯ ಸಂಸ್ಥಾನ ಮಠ, ಗದಗ, 1986

# ಪರಿವಿಡಿ

೧

ಅರಿವ ನೀ ಅರಿಯೊ ಹರಣವ ತೋರಿಯೊ ಅದು ಮುಂದೆ
ಗುರಿಯೊ ತಿಳಿದರೆ ದೊರಿಯೊ
ಅರಿವ ನೀ ಅರಿಯೊ || ಪಲ್ಲ ||

ಪರಹಿತವರಿಯೊ ಪಂಚಾಕ್ಷರಿ ನೆನಿಯೊ ಪಾಪವ ಸು
ಟ್ಟುರಿಯೊ ಪರಮನೊಳು ಬೆರಿಯೊ
ಅರಿವ ನೀ ಅರಿಯೊ || ೧ ||

ವಿಷಯವನಳಿಯೊ ಕಸವ ನೀ ಕಳೆಯೊ
ಮಸುಳಿಸಿ ತೊಳಿಯೊ ಕುಶಲದೊಳು ಬೆಳಿಯೊ
ಅರಿವ ನೀ ಅರಿಯೊ || ೨ ||

ಧರೆಯೊಳು ಅರಿಯೊ ಎತ್ತಿನ್ಹಟ್ಟಿಯ ದೊರಿಯೊ
ಸ್ಥಿರದಿಂದಲರಿಯೊ ಗುರುವಿನೊಳು ನೀ ನೆರಿಯೊ
ಅರಿವ ನೀ ಅರಿಯೊ || ೩ ||

೨

ಅರು[ಹ]ನೆ ಅರುಹಲಾಗದು ಇಂಥ
ದುರುಳುತನದಿ ಬಾಳಿದ ಕುರಿಜನರಿಗೆ ಗುಟ್ಟು
ಅರು[ಹ]ನೆ ಅರುಹಲಾಗದು || ಪಲ್ಲ ||

ಗುರುವುಪದೇಶವಾಯಿತೆಂಬರು ಅದ[ರ]
ಪರಿಯು ಎಂತೆಂದರೆ ಅರಿಯರು
ಪರಿಪರಿಯಿಂದಲಿ ಬ್ರಹ್ಮವ ನುಡಿವುತ
ನರಕದೊಳಗೆ ಬೀಳ್ವ ಮರುಳುಮಾನವರೊಳು
ಅರು[ಹ]ನೆ ಅರುಹಲಾಗದು || ೧ ||

ತತ್ತ್ವವ ಬಲ್ಲೆವೆಂದೆಂಬರು ತಾವೆ
ತ್ತತ್ತಲಾಗಿ ನುಡಿವರು
ಸತ್ಪುರುಷರು ಕಂಡು ಗೊತ್ತನು ಕೇಳಲು
ನೆತ್ತಿ ನೆಲಕೆಯಿಟ್ಟು ನರಳುವಂತವರೊಳು
ಅರು[ಹ]ನೆ ಅರುಹಲಾಗದು || ೨ ||

ಬೆಳಗನು ಕಂಡೆವೆಂದೆಂಬರು ಅದರ
ಕಳೆಯು ಎಂತೆಂದರೆ ಅರಿಯರು
ಸುಳುಹು ತಪ್ಪಿದ ಕಣ್ಣು ಮಿಳಿಕಿಸಿದಂದದಿ
ತಿಳುವಿಕಿಲ್ಲದೆ ಹುಚ್ಚು ತಿರುಗುವಂತವರೊಳು
ಅರು[ಹ]ನೆ ಅರುಹಲಾಗದು ॥ ೩ ॥

ನಾದವ ಬಲ್ಲೆವೆಂದೆಂಬರು ಅದರ
ಭೇದವೆಂತೆಂದರೆ ಅರಿಯರು
ಸಾಧನೆಯಿಲ್ಲದೆ ಈ ಪರಿಯಿಂದಲಿ
ವಾದಮಾಡಿ ಕೆಟ್ಟು ಹೋಗುವಂತವರೊಳು
ಅರು[ಹ]ನೆ ಅರುಹಲಾಗದು ॥ ೪ ॥

ಅಮೃತಪಾನವನುಂಬೆವೆಂಬರು
ತಾಮಮಲು ಭಂಗಿಯನೀಗ ತಿಂಬರು
ಕ್ರಮದಲ್ಲಿ ಈ ಪರಿ ನಡತಿಯ ನಡವುತ
ಯಮನ ಬಾಧೆಗೆ ಬಿದ್ದು ಹೋಗುವಂತವರೊಳು
ಅರು[ಹ]ನೆ ಅರುಹಲಾಗದು ॥ ೫ ॥

ಘನಮಹತ್ತಮರೆಂದುಕೊಂಬರು ತ
ಮ್ಮನುಭಾವವನು ತಾವರಿಯರು
ಬಿನುಗು ಬುದ್ಧಿಗಳಿಂದ ಬಿರಿನುಡಿ ನುಡಿವುತ
ಸುನಕನ ಪರಿಯಂತೆ ಚರಿಸುವಂತವರೊಳು
ಅರು[ಹ]ನೆ ಅರುಹಲಾಗದು ॥ ೬ ॥

ಸತ್ಯಸಾಧುಗಳಿನ್ನು ಹೇಳ್ವರು ವಿಷಯ
ಮೊತ್ತದೊಳಗೆ ಸುಖಬಾಳ್ವರು
ಎತ್ತಿನ್ಹಟ್ಟೆ ಈಶನಂಘ್ರಿಯ ಕಾಣದೆ
ಕತ್ತೆಯಂದದಿ ತಾವು ಹೊಗುವಂತವರೊಳು
ಅರು[ಹ]ನೆ ಅರುಹಲಾಗದು ॥ ೭ ॥

೩

ಊರು ಹಾಳಾಯಿತಮ್ಮ ಉಲುಹು ಅಡಗಿ ಹೋಯಿತು
ಸೇರಿದಂಥ ಜನರು ಎಲ್ಲ ಕೆಟ್ಟು ಹೋಯಿತಮ್ಮ
ಊರು ಹಾಳಾಯಿತಮ್ಮ ಉಲುಹು ಅಡಗಿ ಹೋಯಿತು ॥ ಪಲ್ಲ ॥

ನಾರಿ ಒಬ್ಬಳೀಗೆ ಮತ್ತೆ
ಮೂರು ಮಂದಿ ಮಕ್ಕಳುಟ್ಟಿ
ಪಾರುಪತ್ಯ ಮಾಡಿಕೊಂಡು ಪಟ್ಟಣಕ್ಕೆ ಬಂದರು
ಕಾರುಬಾರು ಮಾಡಿಕೊಂಡು
ತಮಗೆ ತಾವು ಆಳುತಿರಲು
ವಾರೆಯೇನೊಂಬತ್ತು ಅವರೊಳು ಮೂರು ಬಟ್ಟಲಾಯಿತು ॥ ೧ ॥

ಬೇರೆ ಬೇರೆಯಾಗಿಯಿವರು
ನಾರಿ ಪುರುಷರೊಡನೆ ಇರಲು
ಆರು ಏಳು ಮಂದಿ ಮಕ್ಕಳವರಿಗಾಗಲು
ಪೋರತಾನದಿಂದಲೆಲ್ಲ
ದಾರಿ ಬಟ್ಟೆ ಕಾಯ್ದುಕೊಂಡು
ಆರನಾದರೇನು ಬಿಡದೆ ಹೆಡಕನೀಗ ಬಡಿವದು ॥ ೨ ॥

ಹತ್ತು ಎಂಟು ಮಂದಿಯಿವಗೆ
ಪುತ್ರ ಪೌತ್ರರಾಗಿ ತಮ್ಮ
ಮೊತ್ತವನ್ನು ಕೂಡಿಕೊಂಡು ಮಲೆಯ ಸೇರಲು
ಸುತ್ತ ಮುತ್ತ ದಾರಿಯಾನು
ಎತ್ತ ಹೊರಡಗೊಡದೆ ಜನರ
ಕತ್ತಿಗೀಯ ಕೊಯಿದು ಅವರ ನೆತ್ತರನ್ನು ಕುಡಿವರೆ ॥ ೩ ॥

ಮತ್ತೆ ನಾರಿಯಿಂದಲೀಗ
ಇಪ್ಪತ್ತೈದುಮಂದಿ ಹುಟ್ಟಿ
ಸುಸ್ತಲಾ ರಾಜ್ಯವನೆಲ್ಲ ಸೂರೆಮಾಡಿ ಬಿಟ್ಟರು
ಭೀ[ತಿ] ಮಾಡುವರಿಲ್ಲ ಎಮಗಿ
ನ್ನೆತ್ತಲಾದರೇನು ಎನುತ
ಬತ್ತೀಸಾಯುಧಗಳ ಕಟ್ಟಿ ಬಯಲ ಬೀದಿ ಹಿಡಿವರು ॥ ೪ ॥

ಸತ್ಯ ಶರಣರಿದನು ಕೇಳಿ
ಎತ್ತಿನ್ನನಟ್ಟಿ ಈಶ [ಗೇಳೆ]
ಎತ್ತಿನಿಂದ ಬಂತು ದಂಡು ಹೇಳಶಕ್ಯವಿಲ್ಲವು
ಮುತ್ತಿಕೊಂಡು ಮೂರು ಘಳಿಗೆ

ಕುತ್ತಿಗೀಯ ಕೊಯಿದು ಎಲ್ಲರ
ಹತ್ತಿ ಠಾಣ್ಯ ಹಾಕಿಕೊಂಡು ಅಂಗ ಕೌಲು ಕೊಟ್ಟರು ॥ ೫ ॥

೪

ಎನ್ನೊಳೇತಕೆ ಬೆರದೊ ಗುರುವೆ ನಾನು ಜಡದೇಹಿಗನು
ನಾನು ನನಗೆ ಇದು ಥರವೆ ?
ಎನ್ನೊಳೇತಕೆ ಬೆರದೊ ಗುರುವೆ ? ॥ ಪಲ್ಲ ॥

ಸಂಸಾರ ಜಡರೆಂಬ ಸಾಗರದ ಜಲಧಿಯೊಳು
ಸಾಗಲಾರದೆ ನಾನು ಮುಳುಗೇಳುತೆ
ಅಂಗಭೋಗಗಳಳಿದ ಆತ್ಮಶುದ್ಧಿಗಳೊಳಗೆ
ಭೋಗಕರ್ತನೆ ನೀನು ಬೆರೆಯಬೇಕಲ್ಲದೆ ॥ ೧ ॥

ನಿಷ್ಠೆವಂತನು ಅಲ್ಲ ನಿರುತ ಎನ್ನೊಳಗಿಲ್ಲ
ಭ್ರಷ್ಟರೊಳಾಡುವ ಭ್ರಮೆಗೇಡಿಯು
ಅಷ್ಟಭೋಗವದೆಲ್ಲ ಸುಟ್ಟುರುಹಿ ನಿಂದಂಥ
ಸೃಷ್ಟಿಪಾಲಕರೆಲ್ಲ ಬೆರೆಯಬೇಕಲ್ಲದೆ ॥ ೨ ॥

ಆಚಾರ ಕ್ರಿಯವಿಲ್ಲ ಆತ್ಮಶುದ್ಧಿಗಳಿಲ್ಲ
ಲೋಕದವರತೆರದಿ ನಡತೆಯಿಲ್ಲವು
ಬೇಕಾದ ಭಕ್ತರೊಳು ಏಕವಾಗಿರು ಹೋಗು
ಕಾಕುಮನುಜನು ನಾನು ಕುಣಿಸೈ ಹರನೆ ಹರನೆ ॥ ೩ ॥

ಅಣ್ಣತಮ್ಮದಿರಿಲ್ಲ ಆತ್ಮ ಬಂಧುಗಳಿಲ್ಲ
ಕಣ್ಣಿಂದ ನೋಡುವರು ಮೊದಲಿಲ್ಲವು
ಪುಣ್ಯವನು ಮಾಡಿದ ಪುರುಷರೊಳಿರು ಹೋಗ
ಎಮ್ಮಂಥ ನೀಚರನು ನಂಬದಿರು ಹರನೆ ॥ ೪ ॥

ಎತ್ತಿನ್ನಟ್ಟಿಯವಾಸ ಎನ್ನ ಪಾಲಿಸು ಈಶ
ಭೃತ್ಯತನದಲಿ ನಿನ್ನ ನಾ ಬೇಡಿಕೊಳುವೆ
ಸತ್ಯದಿಂದಲಿ ಎನ್ನ ಸಂಸಾರಯೋಗದಲಿ
ಮುಕ್ತನನು ಮಾಡಯ್ಯ ಮುನಿಯ [ದೆ] ಮ್ಮಯ್ಯ ॥ ೫ ॥

೨೫

ಎಂಥ ಒಳ್ಳೆದನಕ್ಕ ಎನ ಗಂಡ  ಎಂಥ ಒಳ್ಳೆದನೆ
ಚಿಂತೆಯ ಬಿಡಸಿ ನೀ ಶಾಂತಳಾಗಿರು ಎಂದು
ಸಂತೋಷದಿಂದೆನ್ನ ಸಲಹಿದನಕ್ಕ
ಎಂಥ ಒಳ್ಳೆದನೆ............ ‖ ಪಲ್ಲ ‖

ಸಣ್ಣಕ್ಕಿ ಸವಿಬೋನ ಬೆಣ್ಣೆಕಾಸಿದ ತುಪ್ಪ
ಉನ್ನತ ಶಾಖಪಾಕಂಗಳನು
ಚೆನ್ನಾಗಿ ಅಡಿಗಿಯ ಮಾಡಿಸಿ ಎನ್ನನು ಹೆಣ್ಣೇ ನೀ
ಸಣ್ಣವಳುಣಯೆಂಬೊನಕ್ಕ
ಎಂಥ ಒಳ್ಳೆದನೆ............ ‖ ೧ ‖

ಕಮ್ಮೆಣ್ಣೆ ಕಸ್ತುರಿಯೆನ್ನ ಮಂಡೆಗೆ ಪೂಸಿ
ಪನ್ನೀರನೆರಸಿ ಪಾಕವ ಮಾಡಿಸಿ
ಬಣ್ಣಿಸಿ ಬಾಚಿ ಬೈತಲೆಯನೆ ತೆಗಸಿ ತಾ
ಎನ್ನ ಜಡೆಗೆ ಹೆಳಲು ಹಾಕಿಸುವನಕ್ಕ
ಎಂಥ ಒಳ್ಳೆದನೆ............ ‖ ೨ ‖

ಚೆನ್ನದ ಕಂಬಿಯ  ಸೀರೆ ಶಿಸ್ತಿನಿಂದುಡಿಸುತೆ
ಬಣ್ಣದ ಕುಪ್ಪಸ ಬಾಜೂಬಂಧನಿಟ್ಟು
ರನ್ನವು ತೆತ್ತಿಸಿದ ರಜತದ ಒಡ್ಯಾಣ
ಎನ್ನ ನಡುವಿಗೆ ತಂದು ಇಟ್ಟ ಕಾಣಕ್ಕ
ಎಂಥ ಒಳ್ಳೆದನೆ............ ‖ ೩ ‖

ಉನ್ನತ ವಸ್ತುವನೆಲ್ಲವ ತಂದಿಟ್ಟು
ಚೆನ್ನಾಗಿ ಎನ್ನ ಶೃಂಗರಿಸುತಲಿ
ಕನ್ನಡಿಯನು ತಂದು ಕೈಯ್ಯಲ್ಲಿ ಕೊಟ್ಟು ತಾ
ಎನ್ನ ನೀಪರಿಯಿಂದ ನಗಿಸುವನಕ್ಕ
ಎಂಥ ಒಳ್ಳೆದನೆ............ ‖ ೪ ‖

ಕಾಚು ಕರ್ಪುರ ವೀಳ್ಯ ಕತ್ತರಿಸಿದ ಹೋಳು
ಸೋಸಿದ ಸುಣ್ಣ ಏಲಕ್ಕಿಯನು

ಈಸು ಪರಿಯ ಮಾಡಿ ಎನ್ನ ಕೈಯಲ್ಲಿ ಕೊಟ್ಟ
ಲೇಸಿನಿಂದಲಿ ನೀಡಿಕೊಳ್ಳೆಂಬೊನಕ್ಕ
ಎಂಥ ಒಳ್ಳಿದನೆ............ ॥ ೩ ॥

ಹಾಸುಮಂಚದ ಮೇಲೆ ಅರಳುಮಲ್ಲಿಗೆ ಹಾಸಿ
ನಾಲ್ಕು ಕಡಿಗೆ ನಂದದೀವಿಗಿಟ್ಟು
ಊಟದ ಊದುಬುಕ್ಕಿಟ್ಟು ಹರಸುತಲಿ
ಏಕಾಂತಮನಿಗೆ ಎಳೆದೊಯ್ದನಕ್ಕ
ಎಂಥ ಒಳ್ಳಿದನೆ............ ॥ ೪ ॥

ಚಿತ್ತಜನರಗಿಳಿ ಇತ್ತ ಬಾರೆನುತಲಿ
ಒತ್ತಿ ಹಿಡಿದು ಗಲ್ಲವ ಚುಂಬಿಸಿ
ಹತ್ತೆಗರದು ಎನ್ನ ಹಾಸುಮಂಚದೊಳಿರಿಸಿ
ಮುತ್ತಿನ ಮೂಗುತಿ ಮೂಗಿನೊಳಟ್ಟ
ಎಂಥ ಒಳ್ಳಿದನೆ............ ॥ ೭ ॥

ಇರದೆ ಮಂಚದೊಳೆನ್ನ ಒರಗಿಸಿ ಬಹುವಿಧ
ಸರಸ ಸಲ್ಲಾಪಗಳಾಡುತಲಿ
ಪರಿಪರಿಯಿಂದಲಿ ವಿರಹವ ಪುಟ್ಟಿಸಿ
ಮರಸಿದ ಎನ್ನಯ ಮಾತೆಪಿತರನೀಗ
ಎಂಥ ಒಳ್ಳಿದನೆ............ ॥ ೮ ॥

ಮುತ್ತು ಮಾಣಿಕ ನವರತ್ನದ ಕರುವಾಡ
ಮತ್ತೇಳುನೆಲೆಯ ಮಂಟಪದೊಳಗೆ
ಸತ್ತು ಚಿತ್ತಾನಂದ ಸಮರಸವನೆ ತೋರಿ
ಎತ್ತಿನ್ಹಟ್ಟಿಯ ಈಶ ಎನ್ನ ಕೂಡಿದನಕ್ಕ ॥ ೯ ॥

೪

ಕಾಡಬೇಡ ಕರುಣದಿಂದಲಿ ಏ ಸ್ವಾಮಿ ಹರನೆ
ನೋಡು ನಿಮ್ಮ ಕರುಣ ದಿಟ್ಟಲಿ ॥ ಪಲ್ಲ ॥

ಬೇಡಿದೊರವನೀವನೆಂದು
ರೂಢಿ ಜನರು ಪೇಳುತಿರಲು
ಪಾಡಿ ಪೊಗಳ್ವೆನಯ್ಯ ನಿಮ್ಮ
ಗಾಡಿಕಾರ ಮಹಿಮೆಗಳನು ॥ ೧ ॥

ಮೃಡನೆ ನಿಮ್ಮ ಪಾದವನ್ನು
ಬಿಡದೆ ನಂಬಿದವರನಿಂತು
ಕೆಡಿಸುವಂಥದುಚಿತವಲ್ಲ
ಬಿಡದೆ ರಕ್ಷಿಸಯ್ಯ ಶಿವನೆ
ಕಾಡಬೇಡ... ॥ ೨ ॥

ಕೊಡಿ ಕಾಡಬಾರದೆಂಬ
ನಾಡ ಜನರ ಗಾದೆಯುಂಟು
ಬೇಡಿದೊರವನಿತ್ತು ಎನ್ನ
[ಕೂಡೆ] ಕರುಣಿಸೈಯ್ಯ ಶಿವನೆ ॥ ೩ ॥

ಹತ್ತುಮಂದಿ ಮಕ್ಕಳೊಳಗೆ
ಹುಚ್ಚನೊಬ್ಬನಾಗಿಯಿರಲು
ಸತ್ತು ಹೋಗಲೆಂದು ಅವನ
ವ್ಯರ್ಥವಾಗಿ ಕೊಲ್ಲುತಿಹರೆ ॥ ೪ ॥

ಧಾತ್ರಿಯೊಳಗೆ ಅಧಿಕವಾದ
ಎತ್ತಿನಹಟ್ಟಿ ಈಶ ನಿಮ್ಮ
ಹೆತ್ತ ತಾಯಿ ತಂದೆಯೆಂದು
ಮತ್ತೆ ನಂಬಿದವನನಿಂತು
ಕಾಡಬೇಡ ಕರುಣದಿಂದಲಿ.......... ॥ ೫ ॥

## ೭

ಕೊಡನ ಹೊರುವರೇನೆ ಅಮ್ಮಯ್ಯ ಕೊಡನ ಹೊರುವರೇನೆ
ಕೊಡನ ಹೊರುವರೆ ಬಹುಭಾರವಿ ಕೊಡ
ನಡುವೆ ನಷ್ಟವಾಗಿ ಒಡೆದು ಹೋಗುವ ಕೊಡ ॥ ಪಲ್ಲ ॥

ಹಸಿ ಬಿಸಿಯಾದ ಕೊಡ ಹದನಿಲ್ಲವೀ ಕೊಡ
ಮಸಿ ಮಣ್ಣು ಕಲೆತಂಥ ಮಣ್ಣು ಕೊಡ
ಸಸಿನೆಯಿಲ್ಲದ ಕೊಡ ಸರ್ವರಿಗೆ ಭಾರವು ಕೊಡ
ಒಸರಿ ಒಸರಿ ನೀರು ಹೊಲಸು ಏಳುವ ಕೊಡ ॥ ೧ ॥

ಮಲತ್ರಯದೊಳು ಬಿದ್ದು ಮುಳುಗಿದುದಿ ಕೊಡ
ಹೊಲಿ ಬಳಕಿ ಆದಂಥ ಹೊಲಸು ಕೊಡ
ಬಲು ರಂಧ್ರಗಳು ಬಿದ್ದು ಬಸಿದು ಸೋರುವ ಕೊಡ
ಹಲವು ಬಗೆಯಲಿ ಕೊಡೆ ಹಸನಿಲ್ಲವೀ ಕೊಡ ॥ ೨ ॥

ಮುಟ್ಟು ಚಟ್ಟನದಿ ಕೊಡ ಮುರುಕಿ ನಾರುವ ಕೊಡ
ಹೊಟ್ಟೆ ಬೇನೆಯೆದ್ದು ಹೊರಳೊ ಕೊಡ
ಬಿಟ್ಟಿಗೆ ಮಾಡಿದ್ದೀ ಕೊಡ ಬಿಟ್ಟು xx ಕೊಡ
ಸುಟ್ಟು ಸುಡುಗಾಡು ಕಲೆತು ನಷ್ಟವಾಗದ ಕೊಡ ॥ ೩ ॥

ಕಷ್ಟ ಕರ್ಮದ ಕಾರಣವಿಲ್ಲದ ಕೊಡ
ನಷ್ಟ ಬಡಿದು ನಾಶ ಮಾಡೊ ಕೊಡ
ಎಷ್ಟುದಿನವಿದ್ದರಿದು ಎರವಾಗಿ ಹೋಗೊ ಕೊಡ
ಬಿಟ್ಟು ಬಿಡಬೇಕೀ ಕೊಡ ಬೇಡಬೇಡವಿ ಕೊಡ ॥ ೪ ॥

ನಿತ್ಯವಲ್ಲದ ಕೊಡ ನಿರುತವಿಲ್ಲದ ಕೊಡ
ಸತ್ಯವಂತರಿಗಿದು ಸಲ್ಲದ ಕೊಡ
ಭಕ್ತ ಮಾಹೇಶ್ವರರು ಬಳಕೆ ಮಾಡದ ಕೊಡ
ಎತ್ತಿನಹಟ್ಟಿಯೆಂಬೀಶ[ಗೆ] ಯೋಗ್ಯವಲ್ಲದ ಕೊಡ ॥ ೫ ॥

೮

ಚೇಳು ಕಚ್ಚಿತಮ್ಮ ದೇವರೆ ನೋವು
ತಾಳಲಾರೆ ಮದ್ದು ಹೇಳಿರೆ
ಚೇಳಿನ ಬೇನೆಯ ಹೇಳೇನೆಂದರೆ
ಭಾಳಮಂದಿಗೆ ಸುಖವಾಯಿತ್ಯೆಯ್ಯಯೋ ॥ ಪಲ್ಲ ॥

ಹಾಳು ಗೋ ೱೱ ಒಂದು ಗ್ರಾಮವೆ ಅಲ್ಲಿ
ಭಾಳಾಕ್ಷನ ಬಹು ನೇಮವೆ
ನಾಳಿನ ದಿನದಲ್ಲಿ ನಾ ಹೋದೇನೆಂಬರೆ
ಏಳುಮಣಿಯ ಚೇಳು ಹೆಬ್ಬೆರಳೂರಿತೆ ॥ ೧ ॥

ಒಮ್ಮನದಡಿಗೆಯನಟ್ಟಿದ್ದೆ ನಾ
ಸುಮ್ಮಾನದುಡಿಗೆಯುನುಟ್ಟಿದ್ದೆ
ಕಮ್ಮನ ಬೆಣ್ಣೆಯ ಕರಗಿಸಿಕೊಂಡು ನಾ
ಘಮ್ಮನೆ ಹೊರಡಲು ಕಡಿಯಿತ್ತೈಯ್ಯಯ್ಯೋ ॥ ೨ ॥

ಹಬ್ಬವ ಮಾಡುವೆನೆಂದಿದ್ದೆ ನಾ
ಉಬ್ಬುಬ್ಬಿ ಸಕ[ಲ] ವ ತಂದಿದ್ದೆ
ಕಬ್ಬಿನ ಹಾಲಿನ ಕೊಡಕೆ ಕೈ ಚಾಚಲು
ಅಬ್ಬರದಿಂದಲಿ ಹಚ್ಚಿತಯ್ಯಯ್ಯೋ ॥ ೩ ॥

ಕಾಲಿಂದ ಮೇಲಕ್ಕೆ ಏರಿತೆ ಬಹು
ಕಾಲವು ತಲೆಗಿನ್ನು ಸೇರಿತೆ
ಬಾಳಲೀಸದು ಎನ್ನ ಬದುಕುವುದಿನ್ನೆಂತೊ
ಶೂಲಧರನು ಬಲ್ಲ ಸುಲಭವಲ್ಲಮ್ಮ ॥ ೪ ॥

ಎತ್ತಿನ್ಹಟ್ಟಿಯ ಈಶಗಲ್ಲದೆ ನೋವು
ಮತ್ತಾರಿಗೆಯಿದು ನಿಲ್ಲದೆ
ಮಸ್ತಕದೊಳು ತಮ್ಹಸ್ತವನಿಟ್ಟರೆ
ಮತ್ತುಟ್ಟದಂತೆ ನಾ ಸಟೆಯಲ್ಲವಮ್ಮ
ಚೇಳು ಕಚ್ಚಿತಮ್ಮ ದೇವರೆ... ॥ ೫ ॥

೯

ಜಂಗಮ ಜಂಗಮ ಎಂಬೊ ಜಗದ ಜೀವರುಗಳು ಕೇಳಿ
ಜಂಗಮನ ಕುರುಹ ಜಡದೇ [ಹಿ ಬಲ್ಲನೆ ?] ॥ ಪಲ್ಲ ॥

ಕೊಂ [ಗ] ನಂತೆ ಹರಿವ ಮನವ
ಭಂಗಿಸಿ ಶಿಕ್ಷಿಸುವಾತ
ಜಂಗಮನು ಎನಿಸಿಕೊಂಬ ಜನರು ಕೇಳಿರೈ ॥ ೧ ॥

ಲಿಂಗದೊಳಗೆ ಮನವನಟ್ಟು
ಸಂಗಸುಖದೊಳಿರುವನಾತ
ಜಂಗಮ ಎನಿಸಿಕೊಂಬ ಜನರು ಕೇಳಿರೈ ॥ ೨ ॥

ಸಂಗನ ಶರಣರ ಪಾದ
ದಂಘ್ರಿಯನ್ನು ಬಿಡದೆ ಭಜಿಪ
ಜಂಗಮನು ಎನಿಸಿಕೊಂಬ ಜನರು ಕೇಳಿರೈ ॥ ೩ ॥

ರಂಗವನ್ನು ಮಾಡದಂಥ
ರಂಗದಲ್ಲಿ ಅರಿವನಾತ
ಜಂಗಮನು ಎನಿಸಿಕೊಂಬ ಜನರು ಕೇಳಿರೈ ॥ ೪ ॥

ಕಂಗಳೀಗೆ ಎತ್ತಿನ್ನಷ್ಟ
ಲಿಂಗವಾಗಿ ಮೆರವ ಈಶ
ಜಂಗಮನು ಎನಿಸಿಕೊಂಬ ಜನರು ಕೇಳಿರೈ ॥ ೫ ॥

## ೧೦

ತಿಳಿದು ಹೇಳಿರಣ್ಣಗಳಿರ ತಿರಿಗಿ ಕೇಳದಂತೆಯಿದನು
ಸುಳುಹುತಪ್ಪಿದ ಹುಟ್ಟುಗುರುಡ ಸೂರ್ಯನನ್ನು ಕಂಡುದ ॥ ಪಲ್ಲ ॥

ಅಂತರ[ಂಗ]ದಲ್ಲಿ[ಯಿ]ರುವದೊಂದು ಆಳುದ್ದಬಾವಿಯಿದರ
ಅಂತು ತಿಳಿಯಲಿಕ್ಕೆ ಮತ್ತಿನ್ನಷ್ಟು ಇಷ್ಟು ಅಲ್ಲವು
ಮುಂತೆ ಸಪ್ತಶರಧಿಯನ್ನು ಮುಣುಗಿಸಿತೆನ್ನೊಳಗೆಯಿರಿಸಿ
ಭ್ರಾಂತಿಬಟ್ಟಮನುಜ[ನ]ನ್ನು ಬಹಳ ಹತನ ಮಾಡಿತೊ ॥ ೧ ॥

ಮುಂದೆ ಒಂದು ಮೃಗವು ಅಲ್ಲಿ ಬಂದು ತೃಷೆಯಗೊಳ್ಳುತಿರಲು
ವೇದಿಕೇಯು ತಪ್ಪಿ ತಪ್ಪಿ ಆದರೊಳು ಹೊರಳಿಕೊಂಡು ಬಿದ್ದಿತು

ಹಿಂದೆ ಸತ್ತ ಕೋಳಿ ಎದ್ದು ಹೆದರದಿರು ಎಂದು ಕೂಗಲು
ಕಂದಿ ಕುಂದಿ ಬಹಳ ನೊಂದು ಕಾಯವನ್ನು ಬಿಟ್ಟಿತು ॥ ೨ ॥

ಸೂರೆ ಹೋದ ಮೃಗವು ಕಂಡು ನೀರಿನೊಳಗೆಯಿದ್ದ ಜ್ಯೋತಿ
ಮೇರುವೇಯ ಹತ್ತಿ ಮುಂದಕೆ ಮಿಗಿಲು ಪರಿಯಲು
ನೀರು ಬತ್ತಿ ಬಾವಿ ಆರ್ದು ನಿಶ್ಚಲಾವು ಆಗಲಿಕ್ಕೆ
ಸಾರ ಅಮೃತವಾದಂಥ ಶರಧಿ ಅದಕೆ ತುಂಬಿತು ॥ ೩ ॥

ಅಮೃತ ಪಾನವನ್ನು ಮಾ[ಡೆ] ಹರಣವದಕೆ ತುಂಬಿ ಬಂತು
ಅಮಮ ನೋಡಲಿಕ್ಕೆ ಅಂದು ಹಾರಿತು ಅಂತಾಕಾಶಕೆ
ದ್ಯುಮಣಿ ಕೋಟಿ ಕಳೆಯು ತುಂಬಿ ದಿಬ್ಬದಲ್ಲಿ ಕುಳಿತು ಕೊಂಡಿತು ॥ ೪ ॥

ಗುರುವೆ ಗುರುವೆ ಎಂಬ ಶಬ್ದ ಮರೆಯದಾಡಿ ಕೂಗುತಿತ್ತು
ತರಣಿಯೆಂಬೊ ಹಣ್ಣನೀಗ[ಳೀಗ] ಹರುಷದಿಂದ ಮೆದ್ದಿತು
ಪರಮ ಸಂತಸದಿಂದವದು ಪಕ್ಕವನ್ನು ಎತ್ತಿದಾಕ್ಷಣ
ಧರೆಯೊಳಧಿಕವು ಎತ್ತಿನ್ಹಟ್ಟಿಪುರ ಮನೆ ತಾನಾಯಿತು ॥ ೫ ॥

೧೧

ತೂ ಥೂ ತೂ ಥೂ ಮೂಢಾ ನಿನ್ನದೇತರ ನಡತೀದು ಬ್ಯಾಡ
ಧಾತ ಸದ್ಗುರುವಿನ ಪಾದವ ನೆನಿಯದೆ
ಈ ತೆರದಲಿ ಕೆಟ್ಹೋಗುವೆ ನೋಡ ॥ ಪಲ್ಲ ॥

ಮಾತೆ ಪಿತರೆಂಬೆ ಬಹು ಪ್ರೀತಿಯು ಎನಗೆಂಬೆ
XXX ಕಾಲದೂತರು ಎಳೆವಾಗ
ಪೋತರಂತೆ ತಾವು ಮುಸುಗುವರಲ್ಲದೆ ॥ ೧ ॥

ಹೆಂಡರು ಮಕ್ಕಳು ಎಂಬೆ ಒಳ್ಳೆ ಭಂಡಾರವು ಬದುಕೆಂಬೆ
ಚಂಡ ಯಮದೂತರು ಕುಂಡೆ ಕುಂಡೆ ಬಡಿವಾಗ
ಹಿಂಡು ಮಂದಿಯಿದ್ದು ಏನ ಮಾಡುವರು ॥ ೨ ॥

ಒಡಹುಟ್ಟಿದರಿಹರೆಂಬೆ ಬಹು
XXX ಡಿಮೆಯಾಗಿ ನಿನ್ನ ಪ್ರಾರಬ್ಧವು ಯಮ
ಹಿಡಿದೊಯ್ವಾಗಲು ಬಿಡಿಸಿಕೊಂಬರಿನ್ನಾರಿಲ್ಲ ನಿನಗೆ ॥ ೩ ॥

ನಂಟರಿಷ್ಟರೆಂಬೆ ವ್ಯಾಳ್ಯಕ್ಕುಂಟು ಎನಗೆಂಬೆ
ಕಂಟಕಮುಖದಿಂದ ಕಾಲರ ಸಂಧಿಸಿ ಯಮ
ಭಂಟರು ಹಿಡಿದೊಯ್ವಾಗಾರಿಲ್ಲ ಮರುಳೆ ॥ ೪ ॥

ಮರ್ತ್ಯದೊಳಗಿನ್ನಧಿ[ಕ] ಪುರ ಎತ್ತಿನ್ನಹಟ್ಟಿಯೆಂಬುದಿದಕೋ
ಕರ್ತುರ ಈಶನ ನಂಬಿ ಮುಕ್ತಿಯ ಹಿಡಿಯದೆ
ವ್ಯರ್ಥವಾಗಿ ಕೆಟ್ಟು ಹೋಗಲು ಬೇಡ ॥ ೫ ॥

೧೨

ದೊರವದು ಮುಕ್ತಿ ದೊರವದು ಎಮ್ಮ
ಹರ ಶಿವಶರಣರ ಸ್ಮರಣೆಯೊಳಿರು ನೀ
ದೊರವದು ಮುಕ್ತಿ ದೊರವದು ॥ ಪಲ್ಲ ॥

ಅರುಣೋದಯದೊಳೆದ್ದು ಪರಮ ಸದ್ಗುರುವಿನ
ಚರಣಾರವಿಂದಕ್ಕೆ ನಮಿಸುತಲಿ
ಗುರು ಕೊಟ್ಟ ಲಿಂಗವ ಕರದೊಳಗಾಂತಷ್ಟ
ಪರಿಪರಿ ವಿಧದ ಪೂಜೆಯ ಮಾಡುತ
ಧರಿಸಿ ಭಸಿತ ಗಂಧಾಕ್ಷತೆಗಳನಿಟ್ಟು
ಶರಣರ ಸ್ತುತಿಸು ನೀ ಮರಿಯದೀಪರಿನಿತ್ಯ ॥ ೧ ॥

ನಿರುತ ಕಾಲವು ಹೀಗೆ ಸ್ಮರಿಸುತ ಬರುತಿರೆ
ದುರಿತ ದುರ್ಗಣವೆಲ್ಲ ಉರಿದೋವುವು
ಅರಿಹು [ಹು]ಟ್ಟಿ ಜ್ಞಾನವಂಕುರಿಸುವುದೇವೋ ನಿನ್ನ
ಕರಣಗಣವು ಸುಮ್ಮನಿರುತಿಹವು
ಶರಿರ ಸೂಕ್ಷ್ಮಿಯ ನೋಡಿ ಪರಿಯನೆಲ್ಲವ ಕಂಡು
ಕರುಣಾಳು ಸದ್ಗುರು ಪೊರದು ನಿನ್ನನು ಕಾಯ್ವ
ದೊರವದು ಮುಕ್ತಿ ದೊರವದು ॥ ೨ ॥

X ರಿಯಾಗಿ ಜ್ಞಾನದಿಂದರಿತು ನೋಡಲು ನಿನ್ನ
ಶರಿರದಿ ಚಿಜ್ಯೋತಿ ಬೆಳಗುತಿದೆ
ಪರಿಪರಿ ವಾದ್ಯವೆಲ್ಲವು ಕೇಳಿ ಸುಖಿಸುತ

ಪರಮನಂದದಿ ಮನಮುಳಿಗೇಳುತಿದೆ
ಧರೆಯೊಳಧಿಕ ಎತ್ತಿನಟ್ಟಿ ಈಶನೆಂಬೊ
ದೊರೆಪಟ್ಟ ನೀನಗೀಗಳಾಗುತಿದೆ
ದೊರವದು ಮುಕ್ತಿ ದೊರವದು ಎಮ್ಮ... ॥ ೩ ॥

೧೩

ಬಲೆಗೆ ಬಿದ್ದ ಪಕ್ಷಿ ತಾನು ಬಯಲಿಗೆ ಹಾರೋಯಿತೇ ?
ಹಲವು ಮಾತನಾಡಲೇನದರಾಯುಷ್ಯ ಹೆಚ್ಚಾಯಿತೇ ?
ಬಲೆಗೆ ಬಿದ್ದ ಪಕ್ಷಿ ತಾನು ಬಯಲಿಗೆ ಹಾರೋಯಿತೆ ? ॥ ಪಲ್ಲ ॥

ಹಲವು ವಿಷಯದಿಂದಲದರ ಹಂಬಲಿಸಿದ್ದೆನಮ್ಮ
ಕೆಲವು ಕಾಲದಲ್ಲಿ [ಯ]ದರ ಕಣ್ಣಿಲಿ ನಾ ಕಂಡೆನೆ
ಬಲು ಬಗೆಯ ಬಲೆಯ ಮಾಡಿ ಭದ್ರವಾಗಿ ಕುಳಿತು ಇದ್ದೆ
ಹೊಲಬುದಪ್ಪಿ ಬಂದು ಬಿದ್ದು ಹೊರಗೆ ಹಾರಿಹೋಯಿತೆ ॥ ೧ ॥

ಎಷ್ಟು ಕಷ್ಟ ಬಟ್ಟು ನಾನು ಹಣಗಿ ಘಾಸಿಯಾದೆನಮ್ಮ
ಕಟ್ಟಕಡೆಗೆ ಹೋಗಿ ಮೂರು ಬೆಟ್ಟವನ್ನು ಸೇರಿತೆ
ಪುಟ್ಟಿದಂದಿಗಿಂದಿಗೆನಗೆ ಉಂಡೆನೆಂಬೊ ಆಶೆಯಿತ್ತು
ಕೆಟ್ಟ ಕೇಡ ಕೆಡಸಿ ಎನ್ನ ಕೈ ಹೊರಗಾಯಿತೆ ॥ ೨ ॥

ಬಿಟ್ಟು ಬಿಡಲಾರದೆ ಬೆನ್ನಟ್ಟಿ ಹೋಗುತಿದ್ದೆನಮ್ಮ
ಇಷ್ಟರಷ್ಟರೊಳಗೆ ಇತ್ತು ಹಿಡಿದು ಕೊಂಡೆನೆಂದನೆ
ಸೃಷ್ಟಿಗಧಿಕ ಎತ್ತಿನ್ಹಟ್ಟಿ ಪಟ್ಟದರಸು ಎನ್ನ ತನ್ನ
ಬಟ್ಟಬಯಲ ಮಾಡಿ ಬಿಟ್ಟು ಬ್ರಮೆಯು ಹಿಂಗಿ ಹೋಯಿತೆ ॥ ೩ ॥

೧೪

ಬೆಲ್ಲ ಮಾರಲಿ ಬಂದಿದೆ ಈ ಜಗದೊಳು ಕೊಳ್ಳುವವರು ಬನ್ನಿ
ಎಲ್ಲರು ಸವಿವಂಥ ಬೆಲ್ಲವಿದಲ್ಲವು
ಬಲ್ಲವರಿದರ ಭೇದವನೆಲ್ಲ ಬಲ್ಲರು ॥ ಪಲ್ಲ ॥

ಎತ್ತಿ ಹೇರುವದಲ್ಲ ಹೊತ್ತು ಮಾರುವದಲ್ಲ
ಮಾನ್ಯರಿಗೆ ಇದು ತಿಳಿಯದಲ್ಲ

ಸತ್ಯ ಶರಣರು ತಿಳಿಯಬೇಕಾದರೆ
ಹತ್ತೆಂಟು ಲಕ್ಷಕೆ ಬೆಲೆಯಾಗೋ ಬೆಲ್ಲ ॥ ೧ ॥

ಮುಚ್ಚಿ ಮಾರುವುದಲ್ಲ ಬಿಚ್ಚಿ ತೋರುವುದಲ್ಲ
ಪಚ್ಚೆಗಟ್ಟಿಯಲ್ಲಿ ಇಡುವದಲ್ಲ
ಸಚ್ಚಿದಾನಂದನ ಶರಣರು ಕಂಡಾಗೆಲ್ಲ
ತಕ್ಕೊಟ್ಟದೊಂದಚ್ಚು ಈ ಬೆಲ್ಲ ॥ ೨ ॥

ಮರ್ತ್ಯದ  ಜನರಿಗೆ ಮಾರಿ ಹೋಗುವುದಲ್ಲ
ಎತ್ತಿನ್ನಷ್ಟ ಈಶನಾಹ ತಾ ಬಲ್ಲ
ಚಿತ್ತ ಸುದ್ಧವಾಗಿ ಸೇವಿಸುವವರಿಗೆ
ನಿರ್ಮಲವನು ಮಾಡುವ ಬೆಲ್ಲ
ಬೆಲ್ಲ ಮಾರಲಿ ಬಂದಿದೆ..... ॥ ೩ ॥

೧೫

ಭಳಿರೆ ಭಳಿರೆ ಭಾಪು ಬಸವರಾಜ
ಭಳಿ ಭಳಿಭಳಿರೆ ಭಾಪು
ಭಳಿರೆ ಭಳಿರೆ [ಭಾಪು] ಬಸವರಾಜೇಂದ್ರನೆ
ಇಳೆಯೊಳು ನಿಮ್ಮಂಥ ಛಲದಂಕರಾರುಂಟು
ಭಳಿ ಭಳಿ ಭಳಿರೆ ಭಾಪು ॥ ಪಲ್ಲ ॥

ಕಾಶಿಯಪುರದಲ್ಲಿ ವ್ಯಾಸನೆಂಬುವನೊಬ್ಬ
ಈಶನ ಶರಣರ ದೂಷಿಸಿ ನುಡಿಯಲು
ಖೇಚರತ್ವದಲಿ ನಿಂದು ಕರವತೆಗ
ದೀಶಗರ್ಪಿಸಿದೆ ತಂದು ಆ ತೋಳ್ಗಳಾ
ದೇಶದಿ ಮೆರಯಲೆಂದು ನಂದಿಯ
ಧ್ವಜಕೇರಿಸಿ ಮೆರಯಲೆಂದು
ಬಸವರಾಜ ಭಳಿ ಭಳಿರೆ ಭಾಪು ॥ ೧ ॥

ಧರೆಯ ಜೈನರನೆಲ್ಲ ಶಿರವನರಿದು ಮತ್ತೆ
ಪರಮ ಭಕ್ತರನ್ನು ಉದ್ಧರಿಸಿ ಶಿವಾ
ಚಾರದನುವ ನೀ ತೋರಿದಂದು ಭಕ್ತಿ ಜ್ಞಾನ

ಬರಲಿ ಭಕ್ತರಿಗೆ ಎಂದು ವ್ಯಕ್ತವಾಗಿ ತಿಳಿದು ಮಾ
ಡಿರಿ ನೀವೆಂದು ಮುಕ್ತಿಯಮಾರ್ಗದ
ಅರುಹಿನಲಿ ಬಾಳಿರೆಂದು
ಬಸವರಾಜ ಭಳಿ ಭಳಿರೆ ಭಾಪು ॥ ೨ ॥

ಅತ್ತ ಕಲ್ಯಾಣಪಟ್ಟಣದಿ ಬಿಜ್ಜಳನೊಳು
ನಿತ್ಯ ಪವಾಡವ ತೋರಿಸಿ ದಿನ ದಿನ
ಲಕ್ಷದ ಮೇಲೆ ತೊಂಬತ್ತಾರುಸಾವಿರಕೆ
ಭಿಕ್ಷವ ನೀಡುತಲಿ ಸತ್ಯದಿ ಪಾರ
ಮಾರ್ಥವ ನಡಸುತಲಿ ಪರಮ ವಿ
ರಕ್ತರ ಸಲಹುತ ಹೀಗೆ ನಡಸಿದೆ
ಬಿಡದೆ ನಿತ್ಯಕಾಲದಲಿ
ಬಸವರಾಜ ಭಳಿ ಭಳಿರೆ ಭಾಪು ॥ ೩ ॥

ಧರೆಯರಿಯಲು ಸಿಂಧಿಗೇರಿಯ ಗೌಡರಮಗಳ
ಇರದೆ ಚೋರತ್ವದಿ ಮರೆಮೋಸದಿಂದಲಿ
ಬರದಿಂದ ಕದ್ದು ಪುರದೊಳು ಸತ್ಯವ
ನೆರಸಲಿಲ್ಲವೆ ನೀ ನೋಡು ಸುಜನರಿಗೆ
ವರವ ಪಾಲಿಸು ನೀನೆಂದುದಿಂದು ಮಂಗಳಸೂತ್ರ
ಧರಿಸಿದೆ ಕೊರಲೊಳಂದು
ಬಸವರಾಜ ಭಳಿ ಭಳಿರೆ ಭಾಪು ॥ ೪ ॥

ಪೊಡವಿ ಜನರು ತಾವು ಎಡೆದೆರಪಿಲ್ಲದೆ ನಡದು
ಮಠಕೆ ಬಂದು ಒಡಲೊಳಗಿನ ಸುಖದುಃಖವ
ಕೇಳುತ ಬಿಡದೆ ನಿಂದಿರಲು ಅಂದು ಸತ್ಯದ ವಾಕ್ಯ
ನಡಸಿ ಕೊಡುವಳು ಎಂದು ಮುಡುಪು ಕಾಯಿ
ಹುಡುಗರುತ್ಸಾಹ[ದಿ] ತಂದು ಈ ಪರಿಯಿಂದ
ನಡಸಲಿಲ್ಲವೆ ನೀ[ನಂ]ದು
ಬಸವರಾಜ ಭಳಿ ಭಳಿರೆ ಭಾಪು ॥ ೫ ॥

ಚಿತ್ರ ವಿಚಿತ್ರ ಗುಡಿಯ ಗೋಪುರ ದ್ವಾರ
ಸುತ್ತ ಮಂಟಪಸಾಲು ಸುಣ್ಣದ ಗಚ್ಚುಗಳಿಂದ

ರತ್ನದಕಳಸವು ರಾಜಿಸುತಿದೆ ಮೇಲೆ
ಕರ್ತುಹರನ ನೋಡುವ ಜನರು ತಾವು
ಮತ್ತೆ ಶರಣು ಶರಣು ಮಾಡುತ
ತಮ್ಮಯ ಮನದಭೀಷ್ಟಗಳನು ಬೇಡುತ
ಪೃಥುವಿ ದೃಷ್ಟಾಂಗಳನೀಡಾಡುತ
ಬಸವರಾಜ ಭಳಿ ಭಳಿರೆ ಭಾಪು || ೬ ||

ಕೆಲವು ಕಾಲವು ಹೀಗೆ ಸತ್ಯವ ನಡಸುತ
ಕಲಿ ಹೆಚ್ಚಿತಿನ್ನಿರಲಾಗದೆಂದೆನುತ
ಬಲು ಪ್ರೀತಿಯಿಂದ ನೀಲಾಂಬೆಯ ನೋಡುತ
ನೆಲದೊಳಡಗಿಸುತ ಏಕಾಂತದಿ
ಒಲಿದು ಒಂದುಗೂಡುತ ಸಂಭ್ರಮದಿಂದ
ಲೆತ್ತ ಪಗಡೆಯ ಆಡುತ ಸೆಜ್ಜೆಯದಿ
ಪುಷ್ಪಂಗಳೀಡಾಡುತ
ಬಸವರಾಜ ಭಳಿ ಭಳಿರೆ ಭಾಪು || ೭ ||

ಶಿಲೆಯೊಳಗಡಗಿ ಸಿದ್ಧಾಂತವ ತೋರುತ
ಬಲುಜನರೊಳು ಮತ್ತೆ ಪೂಜೆಗೊಳುತ
ಒಲಿದವರಿಗೆ ಬೇಗ ವರವ ನೀಡುತ
ಕರುಣದಿಂದಲಿ ನೋಡಿದೆ ಜನರ ಪಾಪ
ಪರಿಹಾರವನು ಮಾಡಿದೆ ನಂಬಿದ
ವರಿಗೆ ಒಲಿದು ಮಾತನಾಡಿದೆ ಸಾಮ್ರಾಜ್ಯವ
ಕೊಟ್ಟು ಮುಡುಪು ಬೇಡಿದೆ
ಬಸವರಾಜ ಭಳಿ ಭಳಿರೆ ಭಾಪು || ೮ ||

ಎತ್ತಿನ್ನಟ್ಟಿಯ ಈಶಗೆ ಸಮನಾದಂಥ
ಪೃಥ್ವಿಯೊಳು ಕುರುಗೋಡ ದಿಟ್ಟಸುತ ನಿಮ್ಮ
ಭೃತ್ಯನು ಮಲ್ಲಿಕಾರ್ಜುನ ತಾನು ಪೇಳಿದ
ಚಿತ್ತವಿಟ್ಟಾಲಿಪುದು ಅವಗೆ ವರ
ವಿತ್ತು ನೀ ಪಾಲಿಪುದು ಸತ್ಯದ ಮಾರ್ಗ
ಗೊತ್ತಿನಿಂ ಚಾಳಿಪುದು ಕರವ ಹಿಡಿ

ದೆತ್ತಿಲೋಲ್ಯಾಡಿಪುದು
ಬಸವರಾಜ ಭಳಿ ಭಳಿರೆ ಭಾಪು ॥ ೯ ॥

೧೬

ಮಲ್ಲಿಕಾರ್ಜುನನೆಂಬೊ ಮದ್ದಾನೆ ಬರುತದಿ
ನ್ನೆಲ್ಲೆಲ್ಲಿ ನಿಲ್ಲದಿರೆಡೆಯಾಗಿರೊ
ಸೊಲ್ಲಿಸುವೆ ನಾನು ಕೊಲುವದಿದುದಿಟ
ಅಲ್ಲಮನಾಣೆ ನೀವರಿತುಕೊಳ್ಳಿ ॥ ಪಲ್ಲ ॥

ಅಡವಿ ಆರಣ್ಯದಿ ಬಿಡದೆ ಬೇಂಟೆಯನಾಡಿ
ಗಿಡ ಮರಗಳ ಕಿತ್ತು ಈಡ್ಯಾಡುತೆ
ಘುಡಿಘುಡಿಸುತ ಹೋಗಿ ಮಡುಹ ನೀರ ಹೊಕ್ಕು
ಕೊಡಹಿ ಬಿಟ್ಟಿತು ಕಮಲಗಳೆಲ್ಲವ ॥ ೧ ॥

ಝುಡಿದು ರಾಹುತರಾರ್ದು ಹಿಡಿಯ ಹೋದರೆ ಕೋಪ
ಕಿಡಿ ಕಿಡಿ ಮಸಗುತಿನ್ನೆಡೆಯಾಡುತೆ
ಬಿಡದೊಬ್ಬರೊಬ್ಬರ ಹೊಡೆದು ಅಪ್ಪಳಿಸುತೆ ತ
ನ್ನಡಿಯೊಳಗಿಟ್ಟು ತಾ ತುಳಿವುತಿದೆ ॥ ೨ ॥

ಮೂರು ಮಾವಿದರನು ಮುರಿದು ಮೂಲೆಗೆ ಒತ್ತಿ
ಆರೆರಡಧಿಕಾರಿಗಳ ಕೊಂದಿತು
ಪಾರುಮಾಡುತಲಿದೆ ಪಂಚವಿಂಶತಿಯರ
ಆರು ಇದಕೆ ಅಡ್ಡ ಬಾಹೋರಿನ್ನು ॥ ೩ ॥

ಒಂಬತ್ತು ಬಾಗಿಲವುಳ್ಳಪಟ್ಟಣವನು
ಕುಂಭದಿಂದಿತ್ತಿ ತಾ ಕುಕಿಲಿರಿದು
ಭೋಂ ಭೋಂ ಭೋಂ ಎಂದು ಭೋರಿಡುತಲಿ ಬರುತಿದೆ
ಡಾಂಬಿಕ ಬಲವ ಸಂಹರಿಸುತಲಿದೆಕೊ ॥ ೪ ॥

ಆರುದುರ್ಗಂಗಳ[ನು]ಅಡವಿ ಪಾಲನುಮಾಡಿ
ಸೇರಿದ ಜನರ ಸಂಹರಿಸುತಿದೆ
ಈರೇಳು ಲೋಕದೊಳಿದಿರಿಲ್ಲವದಕಿನ್ನು
ಮಾರಾರಿ ಬಲ್ಲನ್ನೈ ಮದಗಜದಿರವ ॥ ೫ ॥

ಅಂತು ಮೂರುಮನಿಯ ಹೊಕ್ಕು
ಚೋರನಲ್ಲಿ ಕುಳಿತು ಕೊಂಡು
ಸೇರಿ ನಿಜದಕುರುಹ ಕಂಡಡಾತ ವಿರತನು ॥ ೨ ॥

ಮೀರಿದಂಥ ಲಿಂಗದೊಳಗೆ
ಸೇರಿಸೂವ ಸಪ್ತಜಗದ
ಘೋರಪಾತಕರಿಗೆ ನಿಲುಕದಾತ ವಿರತನು ॥ ೩ ॥

ತನ್ನ ತನುವ ತಾನೆ ತಿಳಿದು
ತನ್ನ ನಿಜವ ತಾನೆ ಅರಿದು
ಶೂನ್ಯಲಿಂಗದೊಳಗೆ ಬೆರದಡಾತ ವಿರತನು ॥ ೪ ॥

ನಿತ್ಯ ನಿರುಪಮಾನು ಆದ
ಎತ್ತಿನ್ಸಟ್ಟಿ ಈಶನೊಳಗೆ
ಮತ್ತೆ ಲೀಯ್ಯವಾಗಿಯಿರುವಡಾತ ವಿರತನು ॥ ೫ ॥

೧೯

ವಿರತಿ ವಿರತಿಯೆಂದು ನೀವು
ಬರಿಯಬ್ರಹ್ಮವಾಡಬೇಡ
ವಿರತಿಗುಣವು ಬೇರೆವುಂಟು ಅರಿತು ನೋಡಿರ್ರೈ ॥ ಪಲ್ಲ ॥

ಬಣ್ಣಬಿಳಿದುವೊದೆದು ಬದಿಯ
ಸಣ್ಣಗೌರಿಯ ಹೊನ್ನು ಕಟ್ಟಿ
ಮಣ್ಣು ಮನಿಗಳೆಮ್ಮವೆಂಬಡಾತ ವಿರತಿಯೆ ? ॥ ೧ ॥

ಉ[ಣ್ಣ]ಲಿಕ್ಕೆ ಹೋಗಿ ಪರರ
ಹೆಣ್ಣುಮಕ್ಕಳುಗಳ ನೋಡಿ
ಸನ್ನೆ ಸೌಜ್ಞೆಯಿಂದ ಕರದಡಾತ ವಿರತಿಯೆ ? ॥ ೨ ॥

ಅಂಗಜಾನ ಬಾಹ ದೆಶಿಗೆ
ಮಂಗನಂತೆ ಕುಣಿದು ಕುಣಿದು
ಅಂಗನಿಯರವೊಳಗೆ ತಂಗಲಾತ ವಿರತಿಯೆ ? ॥ ೩ ॥

ರೂಪು ರುಚಿಯ ಬಯಸಿ ಬಯಸಿ
ವ್ಯಾಪಿಸಿಕೊಂಡಿನ್ನು ಭವದಿ
ಘಾಸಿಯಾಗುವಡೇ ಮತ್ತೆ ವಿರತಿಯೆ ? ॥ ೪ ॥

ಜನನ ಮರಣದೊಳಗೆ ಬಿದ್ದು
ತನುವ ನೆಚ್ಚಿ ತನ್ನದೆಂದು
ಬಿನುಗು ಬುದ್ಧಿಯಿಂದ ಬಾಳ್ವ ತಾ [ನು] ವಿರತಿಯೆ ? ॥ ೫ ॥

ತನ್ನ ತನುವ ತಾನೆ ತಿಳಿಯ
ದನ್ಯರುಗಳ ನೋಡಿ ಮಾಡಿ
ಬನ್ನಬಡುವ ಕುನ್ನಿ ಮನುಜ ತಾ [ನು] ವಿರತಿಯೆ ? ॥ ೬ ॥

ಎತ್ತಿನ್ಹಟ್ಟಿ ಈಶನನ್ನು
ಚಿತ್ತದೊಳಗೆ ನಿಲಿಸಿ ಭವದ
ಕತ್ತಲೀಯ ಕಳೆಯದಾತನಾತ ವಿರತಿಯೆ ? ॥ ೭ ॥

೨೦

ಶರಣು ಶರಣು ಗುರುರಾಯ ಪರಾಕು
ಮರಣ ವಿರಹಿತ ಮಂದಾರ ಪರಾಕು
ಶರಣು ಶರಣು ಗುರುರಾಯ ಪರಾಕು ॥ ಪಲ್ಲ ॥

ಅಂ[ಗಜನ] ನುರುಹಿದ ಹರನೆ ಪರಾಕು
ಕಂಗಳ ಮೂರುಳ್ಳ ಕರುಣಿ ಪರಾಕು
ಗಂಗೆ ಜೊತೆಯೊಳಂಗದೊಳಿಟ್ಟ ಪರಾಕು
ತುಂಗಕೊಟದಿ ಬೆರದ್ದ ಲಿಂಗ ಪರಾಕು ॥ ೧ ॥

ಸಂಗನ ಶರಣರ ಸಲಹು ಪರಾಕು
ಜಂಗಮ ಜಗಭರಿತಾಂಗ ಪರಾಕು

ಕುಂಭಿನಿಶರಣರಿಗೊಲಿದೆ ಪರಾಕು
ಶಂಭು ಸದಾಶಿವ ಸಲಹೆನ್ನ ಪರಾಕು ॥ ೨ ॥

ನಂದಿವಾಹನ ಗಣವಂದ್ಯ ಪರಾಕು
ನಂಬಿದ ಜನರಿಗೆ ಪ್ರತಿಬಿಂಬ ಪರಾಕು
ಇಂದುಧರನೆ ಮನದಾನಂದ ಪರಾಕು
ಶಾಂಭವಿಪತಿ ಸಲಹೆನ್ನ ಪರಾಕು ॥ ೩ ॥

ವಿಷಗೊರಳಭವ ವಿಶ್ವೇಶ ಪರಾಕು
ಭಸಿತ ಭೂಷಿತ ಹಾರದಸಮ ಪರಾಕು
ನೊಸಲಲ್ಲಿ ಬಿಸಿಗಣ್ಣನಿಟ್ಟ ಪರಾಕು
ಕುಶಲದಿಂದಲಿ ಸಲಹಯ್ಯ ಪರಾಕು ॥ ೪ ॥

ಫಲ ಖಡ್ಗಾಂಕುಶ ಬಹು ಶೀಲ ಪರಾಕು
ಲೀಲೆಯೊಳಾಡಿಪ ಮೋಹಮೂಲ ಪರಾಕು
ಕಾಲಕಂಧರ ನಿಗಮಾತೀತ ಪರಾಕು
ಬಾಲರಿಗೊಲಿದಂಥ ತ್ರಿಶೂಲಿ ಪರಾಕು ॥ ೫ ॥

ಪಂಚಮುಖದ ಪರಶಿವನೆ ಪರಾಕು
ಚಂಚಲ ಮನೋಹರ ಪ್ರಪಂಚ ಪರಾಕು
ವಂಚಿಸಿ ಶರಣರಿಗೊಲಿದೆ ಪರಾಕು
ವಂಚನಿಲ್ಲದೆ ಎನ್ನ ನೋಡಯ್ಯ ಪರಾಕು ॥ ೬ ॥

ಮತ್ತನ್ಯ ವಡಾನ್ಯೆರದಂಥಾ ಪರಾಕು
ಕರ್ತುರ್ ಎತ್ತಿನ್ನಷ್ಟ್ಟಿ ಈಶ ಪರಾಕು
ಸೂತ್ರಧಾರಕ ನಿನ್ನ ಪುತ್ರ ಪರಾಕು
ಚಿತ್ತವಿಟ್ಟೆನ್ನ ಸಲಹೊ ಶಿವನೆ ಪರಾಕು ॥ ೭ ॥

೨೧

ಶರಣು ಶರಣು ಶಾಂಭವಿಯೆ ಪರಾಕು
ಪರಮಭಕ್ತರನೆಲ್ಲ ಪೊರವೆ ಪರಾಕು ॥ ಪಲ್ಲ ॥

ಗಿರಿಸುತೆಯಾದಂಥ ಕರುಣಿ ಪರಾಕು
ಸ್ಮರಿಸಿದವರ ಮನದಿ[ರ]ವೆ ಪರಾಕು
ಉರಗಭೂಷಣ ಶಿವನರಸಿ ಪರಾಕು
ಹರಸಿ ಎನಗೆ ವರವಿತ್ತೆ ಪರಾಕು ॥ ೧ ॥

ಮಂದಾಕಿನಿಯೆ ಮನದಂಬೆ ಪರಾಕು
ಚಂದಾಗಿ ಶರಣರ ಬೇಡುಂಬೆ ಪರಾಕು
ನಂದಿವಾಹನ ಶಿವನರಸಿ ಪರಾಕು
ಇಂದು ಎಮ್ಮನು ಸಲಹಮ್ಮ ಪರಾಕು ॥ ೨ ॥

ನಾಲ್ಕು ವೇದಕ್ಕೆ ನೀನು ಅತೀತೆ ಪರಾಕು
ಬೇಕಾದ ಭಕ್ತರಿಗೊಲಿವೆ ಪರಾಕು
ಏಕೋದೇವನ ಸತಿ ಗಿರಿಜಾತೆ ಪರಾಕು
ಪ್ರೀತಿಯಿಂದಲಿ ಸಲಹಮ್ಮ ಪರಾಕು ॥ ೩ ॥

ಮರಣ ವಿರಹಿತ ಮಹದೇವಿ ಪರಾಕು
ಕರುಣ ದೃಷ್ಟಿಗಳುಳ್ಳ ಕಾಳಿಂದಿ ಪರಾಕು
ಹರನ ಸತಿಯೆ ಪಾರ್ವತಿಯೆ ಪರಾಕು
ಹರುಷದಿಂದಲಿ ಸಲಹಮ್ಮ ಪರಾಕು ॥ ೪ ॥

ಮತ್ತೆನ್ನವೊಡವೆರದಂಥಾಕೆ ಪರಾಕು
ಎತ್ತಿನ್ಹಟ್ಟಿಯು ಈಶನರಸಿ ಪರಾಕು
ನಿತ್ಯ ನಿರ್ಮಲ ನಿಗಮಾತೀತೆ ಪರಾಕು
ಕರ್ತುವೆ ಸಲಹಮ್ಮ ಕರುಣಿ ಪರಾಕು ॥ ೫ ॥

## ೨೨

ಶೀಲವ ಮಾಡಬ್ಯಾಡಣ್ಣ ನೀ
ಮ್ಯಾಲೆ ಮಾಡುವದೆಲ್ಲ ಸೂಳಿಯ ಬಣ್ಣ ॥ ಪಲ್ಲ ॥

ಹುಟ್ಟಿದ ಸ್ಥಲ ಕುಲ ನೋಡಿ
ಮುಟ್ಟು ರಕ್ತದೊಳು ಮುಣಿ ಮುಣಿಗ್ಯಾಡಿ

ಬಟ್ಟ ಬಯಲಿನಾಚಾರವೆ ಮಾಡಿ ಹೀಗೆ
ಭ್ರಷ್ಟಾಗಬ್ಯಾಡಣ್ಣ ಗರುದೆ ನೀ ಮಾಡಿ
ಶೀಲವ ಮಾಡಬ್ಯಾಡಣ್ಣ ॥ ೧ ॥

ಉದರದೊಳಿದ್ದಂಥ ಹೊಲಸು ನಿಸದೆ
ಬಡಿದೆಲ್ಲವ xxxx ಕಲಿಸು
ಒದಗಿ ಬಂದುದನನುಭವಿಸು ನಿನ್ನ
ಹೃದಯದೊಳ್ಯಾವಾಗ ಗುರುವಿನ ಭಜಿಸು
ಶೀಲವ ಮಾಡಬ್ಯಾಡಣ್ಣ ॥ ೨ ॥

ಒಂಬತ್ತು ವೆಜ್ಜದಿ ರಸವು ಅದು
ತುಂಬಿ ಸೂಸುತಿದೆ ಹೇಳಲೇ[ನೆ]ನ್ನೊಸವು
ಕುಂಭಿನಿನರಕದ ರಸವು ಇದ
ನಿಂಬಾಗಿ ಹೂಡೀಯಣ್ಣ ಶಂಭುನಿನ್ನೊಶವು
ಶೀಲವ ಮಾಡಬ್ಯಾಡಣ್ಣ ॥ ೩ ॥

ಕಳೆಯಬಾರದ ಕರ್ಮಬಂಧ
ವಳಿಯಬೇಕಾದರೆ ಗುರುಕೀಲಿನಿಂದ
ತಿಳಿಯಬಲ್ಲರೆ ಸೌಜ್ಞ್ಯಯಿಂದ ನಿ–
ನ್ನೊಳಿಹ ನೋಡೆಲೊ ಪರಮಾನಂದ
ಶೀಲವ ಮಾಡಬ್ಯಾಡಣ್ಣ ॥ ೪ ॥

ಸತ್ಯ ಸತ್ಯವೆಂದು ನೋಡುವ ನಿಜ
ವಸ್ತು ಬೇಕಾದರೆ ಇದು ಪಾಠ ಮಾಡು
ಚಿತ್ತ ಬುದ್ಧಿಯನೊಡಗೂಡು
ಎತ್ತಿನ್ಹಟ್ಟೇಶನೆಡಬಿಡದಾಡು ॥ ೫ ॥

೨೩

ಸಯ್ಯನೆಯಿಂದ ಬೈಯ್ಯನೆ
ಗಯ್ಯಾಳಿಯೆಂದೆನ್ನ ಗಂಡ ದೂರುವನಕ್ಕ
ಸಯ್ಯನೆಯಿಂದ ಬೈಯ್ಯನೆ ॥ ಪಲ್ಲ ॥

ಉದಯದೊಳೆದ್ದು ನಾವುಡುಗಿ ಕಸವನೆಲ್ಲ
ಗಡಿಗೆ ಮಡಿಕಿಯೆಲ್ಲ ತೊಳದಿಟ್ಟೆನೆ
ಅಡಿಗಾಗಲಿಲ್ಲವೆಂದು ಬಡಿಯ ಬಂದರೆ ನಾನು
ಬಡಿಗಿಯ ಕಸಕೊಂಡು [ಬೈ]ಚಿಟ್ಟೆನಕ್ಕ ॥ ೧ ॥

ಕಡುಬು ಕಜ್ಜಾಯವು ಎಲ್ಲವು ಹದಮಾಡಿ
ಕೊಡವೆತ್ತಿ ಕೊಂಡು ನಾ ನೀರಿ[ಗೆ] ಹೋದೆ
ತುಡುಗು ತ್ಡೊತ್ತು ಬಹಳ ತಡವಾಯಿತೆನುತಲಿ
ಬಡಿಯ ಬಂದರೆ ಕೈಯ್ಯ ಹಿಡಿಕೊಂಡೆನಕ್ಕ ॥ ೨ ॥

ಹಾಲು ಹಯನ ಮಾಡಿ ಹದವಾಗಿ ಕಾಸಿಟ್ಟು
ಮ್ಯಾಲೆ ಅಗ್ಗಣಿಯನು ಬೆರಸಿಟ್ಟೆನು
ಬಹಳ ಹೊತ್ತಾಯಿತೆಂದು ಕಾಲಲಿ ಒದ್ದರೆ
ನಾಲ್ವರ ಮುಂದಕ್ಕೆ ನಡಿಯೆಂದೆನಕ್ಕ ॥ ೩ ॥

ಅಡಿಗಿಯನೆಲ್ಲವ ಬಡಿಸಿ ಮುಂದಕೆಯಿಟ್ಟು
ಕುಡಿಯಲಿಕ್ಕೆ ನೀರ ತುಂಬಿಟ್ಟೆನೆ
ಅಡಿಕೆ ಎಲೆಯ ತಂದು ಕೊಡಲಿಲ್ಲವೆನುತಲಿ
ಬಡಿಯ ಬಂದರೆ ಬಾಯಿ ಹೊಡೆಕೊಂಡೆನಕ್ಕ ॥ ೪ ॥

ಹಾಸುಮಂಚದ ಮ್ಯಾಲೆ ಅರಳುಮಲ್ಲಿಗೆ ಹಾಸಿ
ಕಾಚು ಕರ್ಪೂರ ವೀಳ್ಯ ಮಡಿಸಿಟ್ಟೆನೆ
ಊಚು ನೀಚು ಬೈದು ಬಡಿಯ ಬಂದರೆ ಒಂದು
ಕಾಸಿಗೆ ಕಡೆಮಾಡಿಬಿಟ್ಟೆ ಕಾಣಕ್ಕ ॥ ೫ ॥

ನಿತ್ಯಕಾಲದಲೀಗೆ ಕಷ್ಟವನಿಟ್ಟರೆ ಎ
ಷ್ಟಂತ ತಡೆಯಲೆ ಇವನ ಬಾಧೆ
ಎತ್ತಿನ್ಹಟ್ಟೆಯ ಈಶ ಎಮ್ಮ ತಂದಿಗೆ ಹೇಳಿ ಇವ
ಗೆ ತಕ್ಕ ಶಿಕ್ಷವ ಕಲಿಸಿಬಿಟ್ಟೆ ಕಾಣಕ್ಕ ॥ ೬ ॥

೨೪

ಸಾಕ್ಷಿ ಹೇಳುವೆನೆಲ್ಲೊ ಬುದ್ಧಿ
ಮೀಱಬ್ಯಾಡೆಲೊ ಕೇಳೋ ನೀ ಕೆಡುತಿದ್ದಿ ॥ ಪಲ್ಲ ॥

ದುಡ್ಡು ದುಡ್ಡಿಗೆ ಆಸೆ ಮಾಡಿ ಹೀಗೆ
ದೊಡ್ಡವನಾಗುವೆನೆಂದು ಓಡ್ಯಾಡಿ
ಮಡ್ಡ ಮನುಜರೊಳಗಾಡಿ ನೀನು
ಹೆಡ್ಡಾಗಿ ಹೋಗಲಿಬ್ಯಾಡವೊ ಖೋಡಿ ॥ ೧ ॥

ಪರಸತಿಯರಿಗಾಸೆಯಿಟ್ಟು ನಿನ್ನ
ಲ್ಲಿರುವ ದ್ರವ್ಯವನ್ನೆಲ್ಲ ಅವಳಿಗೆ ಕೊಟ್ಟು
ಗುರು ಹಿರಿಯರ ಭಾವ ಬಿಟ್ಟು ಹೀಗೆ
ನರಕಕ್ಕೀಡಾಗುವೆ ನೀ ಹೊಲೆಗೆಟ್ಟು ॥ ೨ ॥

ಎಷ್ಟು ಹೇಳುವೆನಲೊ ನೀತಿ ನಿನ
ಗಿಷ್ಟಾದರು ಬುದ್ಧಿ ಬಾರದು ಕೋತಿ
ಇಷ್ಟು ಮಾಡುವರೆ ದುರ್ನೀತಿ ಹೀಗೆ
ಕೆಟ್ಟು ಹೋಗಲಿಬ್ಯಾಡ ಕೇಳು ನೀಚ ಜಾತಿ ॥ ೩ ॥

ಎಂಬತ್ತುನಾಲ್ಕುಲಕ್ಷದಯೋನಿ ಕಂಡಿ ನೀ
ಬೆಂಬಿಡದದರೊಳು ಹುಟ್ಟಿ ಶಿಖಂಡಿ
ಮುಂಬರಿಯಲುಗಾಣದಿಂದಿ ಇದ
ನಂಬಿರಬ್ಯಾಡವೊ ಏ ರಂಡಿ ಮುಂಡಿ ॥ ೪ ॥

ಮರ್ತ್ಯದೊಳಗೆ ಹುಟ್ಟಿ ಇಂದು ನೀ
ವ್ಯರ್ಥವಾಗಿ ಕೆಟ್ಟು ಹೋಗುವನೆಂದು
ಎತ್ತಿನ್ನಟ್ಟಿಯು ಈಶ ಬಂದು ನಿನ
ಗಿಷ್ಟು ಬುದ್ಧಿಯ ಪೇಳ್ದ ಸದ್ಗತಿ ಹೊಂದು
ಸಾಕ್ಷಿ ಹೇಳುವೆನೆಲ್ಲೊ ಬುದ್ಧಿ ॥ ೫ ॥

೨೫

ಸುಮ್ಮನಹುದೆ ಮುಕ್ತಿ ಸುಮ್ಮನಹುದೆ
ಧರ್ಮಗುರುವ ಹೊಂದಿ ತನ್ನ
ಮರ್ಮವನ್ನು ತಿಳಿಯದನಕ ‖ ಪಲ್ಲ ‖

ನಿತ್ಯ ಕಾಲದಲ್ಲಿ ಅವರ ತೊತ್ತು ಸೇವೆಯನ್ನು ಮಾಡಿ
ಹಸ್ತ ಪಾದಗಳನು ಬಿಡದೆ ಒತ್ತುತಿರುತಲಿ
ಹತ್ತು ಎಂಟು ವರುಷ ಹೀಗೆ ಚಿತ್ತ ಸುದ್ಧವಾಗಿ ಇರಲು
ಮತ್ತೆ ಅವರ ಮನವು ಕರಗಿ ತತ್ತ್ವವನ್ನು ತಿಳುಹದನಕ ‖ ೧ ‖

ಪರಮಗುರುವಿನಿಂದಲದರ ತೆರವನೀಗ ತಿಳಿದು ತನ್ನ
ಕರಣಗುಣದ ಚಾಷ್ಟೆಯನ್ನು ಉರುಹಿ ಸುಡುತಲಿ
ನಿರುತ ನಿತ್ಯದಿಂದ ಅವರ ಇರಹು ಹಿಂಗದಂತೆ ಇರ್ದು
ದುರಿತ ದುರ್ಗಣಗಳ ಬಿಟ್ಟು ಸ್ಥಿರವಗೊಳಿಸದನಕ ಮನವ ‖ ೨ ‖

ಕರುಣಮೂರ್ತಿ ತನಗೆ ಮೆಚ್ಚಿ ಧರಿಸಿ ಫಣೆಗೆ ಭಸಿತವನ್ನು
ಹರುಷದಿಂದ[ಲ]ಮೃತಕ[ರ]ವ ಶಿರದೊಳಿಡುತಲಿ
ಅರುಹಿ ಆದರ ಕೀಲಿನಲ್ಲಿ ಪೊರದು ಕರ್ಣದಲ್ಲಿ ಮಂತ್ರ
ಸುರಿದು ಹೇಳುವನಕ ಮುಕ್ತಿ ‖ ೩ ‖

ಆಸನವನು ಬಲಿದು ದೇಹವಾಸನೆಗಳನೆಲ್ಲ ತ್ಯಜಿಸಿ
ಸೂಸದಂತೆ ಮನವನೀಗ ಸೂಕ್ಷ್ಮದಿಂದಲಿ
ನಾಸಿಕಾದ ದೃಷ್ಟಿಯಿಟ್ಟು ನಾದ ಕರ್ಣದಲ್ಲಿ ಕೇಳಿ
ಭಾಸಮಾನದಿಂದ ತೇಜೋರಾಸಿಯನ್ನು ಕಾಣದನಕ ‖ ೪ ‖

ತೋರುತಿಹವು ನಾನಾ ವಾದ್ಯ ಭೇರಿ ಮೃದಂಗ ತಾಳ
ಚೇರುವಂಥ ಕಹಳೆ ಹೆಗ್ಗಾಳೆ ರಭಸದಿ
ಭೋರುಗರವುತಿಹವು ವಾದ್ಯ ಆರುಯೆಸಳದಳವು
ಪೂರಿಸಿದನು ಕೇಳಿ ಸುಖದ ಸೂರೆಯನ್ನುಗೊಳ್ಳದನಕ ‖ ೫ ‖

ಆರುಚಕ್ರವೆಂಬವರಿದು ಮೀರಿದವರ ಹಮ್ಮು ಮುರಿದು
ಸೂರ್ಯತೀತವೆಂಬೊ ತ್ರಿಕೋಣೆ ಮಧ್ಯದಿ

ಸೇರಿ ನೋಡಲಿಕ್ಕೆ ಕೋಟಿ ಸೂರ್ಯ ಚಂದ್ರರುಗಳ ಕಂಡು
ಸಾರಿ ಅದರ ಬೈಳಗಿನಿಂದ ಸಹಸ್ರದಳವು ಕಾಣದನಕ ॥ ೬ ॥

ನಿತ್ಯ ಮಂಗಳಾವು ಎಂಬೋ ಎತ್ತಿನ್ಹಟ್ಟೆಯಿಹುದು ಅದರ
ಸುತ್ತಮುತ್ತ ಅಮೃತ ತುಂಬಿ ತುಳುಕುತಿಹುದು
ಮತ್ತೆ ಅದನು ಪಾನಮಾಡಿ ತೃಪಿಯನ್ನುಗೊಂಡು ಸುಖದಿ
ಕರ್ತು ಈಶನೊಳಗೆ ಬೈರದ ನಿತ್ಯವಸ್ತುವಾಗದನಕ ॥ ೭ ॥

೨೬

ಹರಿವದೆ ಭವ ಹರಿವದೆ ?
ಗುರು ಹಿರಿಯರ ನಿಂದಿಸಿ ಜರಿವ ದುರ್ಜನರಿಗೆ
ಹರಿವದೆ ಭವ ಹರಿವದೆ ? ॥ ಪಲ್ಲ ॥

ಅರಿತು ಈ ದೇಹ ಅಸ್ಥಿರವೆಂಬುದನು ಕಂಡು
ಬರುದೆ ಸಂಸಾರದ ಭ್ರಮೆಗಳಿಗೆ
ಪರ ವಂಚಿಸಿ ತನ್ನ ಒಡಲ ಹೊರದು ಮಿಗೆ
ದುರಿತಕಂಜದ ಮಹ ಪರಮಪಾತಕರಿಗೆ
ಹರಿವದೆ ಭವ ಹದಿವದೆ ? ॥ ೧ ॥

ಪರಧನ ಪರವಧು ಪರಹಿಂಸೆಗಳ ಮಾಡಿ
ಪರಸತಿಯರ ರತಿಸುಖಗಳಿಗೆ
ಪರಿಪರಿ ಪಾಪವನೆಸಗಿ ಮುಂದರಿಯದೆ ಯಮ
ನರಕದೊಳಗೆ ಬೀಳ್ವ ಮರುಳು ಮಾನವರಿಗೆ
ಹರಿವಧೆ ಭವ ಹರಿವದೆ ? ॥ ೨ ॥

ಧರೆಯೊಳಧಿಕ ಎತ್ತಿನ್ಹಟ್ಟಿ ಈಶನೆಂಬೊ ದೊರಿಯ
ಸ್ಮರಣೆ ಸುಖಕರವೆನ್ನದೆ
ಸಿರಿಯಿದ್ದರೆಮಗ್ಯಾರು ಸರಿಯಿಲ್ಲ ಎಂಬಂಥ
ಗರುವತನದಿ ಬಾಳ್ವ ಮೂಢರಿಗೆಲ್ಲ
ಹರಿವದೆ ಭವ ಹರಿವದೆ ? ॥ ೩ ॥

## ೨೭

ಹೇಳು ಹೇಳು ಎಂದು ಹೈಬಗ ಸೊಳೆಮಕ್ಕಳಿರ
ಹೇಳಿನದರ ಭೇದ ನಿಮಗೆ ಹ್ಯಾಗೆ ತಿಳಿವುದೆ ? ಪಲ್ಲ

ಕೋಣನ ಮುಂದಿನ್ನು ಮತ್ತೆ ವೇಣುವನ್ನು ಬಾರಿಸಾಲು
ಜ್ಞಾನೇಂದುಮಚ್ಚಿ ಅವಗೆ ಏನು ಕೊಡುವದು ? ‖ ೧ ‖

ಮರ್ಕಟಕ್ಕೆ ಮತ್ತೆವೊಲಿದು ರತ್ನದಹಾರ ಹಾಕಿದಂತೆ
ವ್ಯರ್ಥ ನಿಮ್ಮ ಕೂಡ ವಚನವೇನು ಭಾಗ್ಯವು ? ‖ ೨ ‖

ಕರ್ತುವಾದ ಎತ್ತಿನ್ಹಟ್ಟಿ ಚಿತ್ತವಲ್ಲಭನ ಕೂಡ
ಹೊತ್ತುಗಳೆಯಲದುವೆ ನಮಗೆ ಮತ್ತೆ ಭಾಗ್ಯವು ‖ ೩ ‖

## ೨೮

ಹೊತ್ತುಗಳೆಯಲಿ ಬ್ಯಾಡಿರೊ ಈ ತನುವೀಗ
ನಿತ್ಯವೆಂದೆನಬ್ಯಾಡಿರೊ
ಭಕ್ತಿ ಮನದೊಳು ತಾಳಿರೊ ನಿಜ
ಮುಕ್ತಿ ಅಲ್ಲಿಹದಿನ್ನು ಕೇಳಿರೊ
ವ್ಯಕ್ತವಾಗಿಯೆ ತಿಳಿದು ಘನಕಳೆ
ಮುಕ್ತಿಯೊಳು ಲೋಲಾಡಿರೊ
ಹೊತ್ತುಗಳೆಯಲಿ ಬ್ಯಾಡಿರೊ ‖ ಪಲ್ಲ ‖

ಚಿತ್ತ ಬುದ್ಧಿಗಳ ಬಿಟ್ಟು ಚೇತನವೆಂಬ
ಕೆಟ್ಟಗುಣಗಳ ಸುಟ್ಟು
ಸತ್ಯದಿಂದಲಿ ಬಾಳಿರೊ ನಿಜ
ವಸ್ತುವಲ್ಲಿಹದಿನ್ನು ಕೇಳಿರೊ
ಮತ್ತಮತಿಗಳು ಆಗದೆ ಶಿವ
ನಿತ್ಯದೊಳು ಸುಖ ಬಾಳಿರೊ ‖ ೧ ‖

ಪಂಚೇಂದ್ರಿಯಂಗಳಳಿದು ಈ ತನುವಿನ ಪ್ರಾ
ಪಂಚಗಳನೆ ಕಳೆದು

ಪಂಚಬಾಣನ ಉರುಹಿರೊ ತನು
ಸಂಚಲವನೆಲ್ಲನ ತರಿಹಿರೊ
ಪಂಚಮುಖನೊಳು ಏಕವಾಗಿ [ಯೆ]
ವಂಚನಿಲ್ಲದೆ ಬೆರಿಯಿರೊ ॥ ೨ ॥

ವ್ಯರ್ಥವಾಗುವ ತನುವ ನೆಚ್ಚೀಗಳೆ
ಹುಚ್ಚರಾಗುವರೆ ಇಂತು
ಸಪ್ತವ್ಯಸನವನಳಿಯಿರೊ ಭವ
ಮೃತ್ಯುವಿನ ಕಳೆದುಳಿಯಿರೊ
ಎತ್ತಿನ್ಹಟ್ಟಿ ಈಶನೊಳೇ
ಕಾರ್ಥವಾಗಿ[ಯೆ] ಬೆಳೆಯಿರೊ
ಹೊತ್ತುಗಳೆಯಲಿ ಬ್ಯಾಡಿರೊ ॥ ೩ ॥

❑ ❑

೨೯

ಜಾಣನಹುದೊ ಜಾತಿ ಪ್ರವೀಣನಹುದೊ ಸುರತದಲಿ ನಾ
ಕಾಣೆ ನಿನ್ನಂಥವನ ಎನ್ನಾಣೆ ರಮಣ ॥ ಪಲ್ಲ ॥

ಕರದಲೆರಡು ಕುಚವಿರುತ ಕಲೆಯ ವೀಕ್ಷಣ ತೋರುತ
ನಲ್ಲ ಪ್ರಹುಡಿತನವೀರುತ ನಲ್ಲ ನಗುತ ಸರಸ ಸವಿಮಾತನಾಡುತ
ಸರಿ ಹುಯ್ಯಲನೇರುತ್ತ ಮೈಮರಸಿ ಜಮ್ಮಿಟ್ಟಿಸಿ ಮೆಚ್ಚಿ
ಮನ ಮೆಚ್ಚಿಸಿದೆ ಸೈಯಿ ರಮಣ ॥ ೧ ॥

ತೊಡೆಗಳಿಂದಪ್ಪುತ್ತ ತೋಳತೆಕ್ಕೆ ಬಿಗಿಯೂರಿ
ಮುಡಿವಿಡಿದು ಮುದ್ದು ಮುದ್ದಾಡುತ್ತ
ಕಡಿದು ಚೆಂದುಟಿಯ ಕಾತುರದಿ ಹ ಹಯೆನುತ್ತ
ಬಿಡದೆ ಬೆಳಗನಕ ನೀ ಭೋಗಿಸಿದೆ ಸೈಯಿ ರಮಣ ॥ ೨ ॥

ಮುಖರಸವು ಬೆಮರಿಡುತ್ತ ಮೋಹವರಿತು ಕೊಡುತ್ತ
ನಖದಿಂದ ಒತ್ತಿ ಚಂದ್ರನ ಹೊಯ್ಯುತ
ಸಕಲ ಸಜ್ಜನಗುಣಾರ್ಜುನಪುರನೆಲೆವಾಸ
ಸುಖದಿಂದ ಎನ್ನೊಡನೆ ನೆರದು ಭೋಗಿಸಿದ ॥ ೩ ॥

❑ ❑

೩೦

ರಾಗಃ ಭೈರವಿ

ಜಯ ಜಯ ನಿರಂಜನಗೆ ಜಯ ಮಂಗಳಂ
ಜಯ ಜಯತು ಅಲ್ಲಮಪ್ರಭುಸ್ವಾಮಿಗೆ ॥ ಪಲ್ಲ ॥

ಕರ[ವೂರ]ಸುಜ್ಞಾನಿ ನಿರಹಂಕಾರರ ತಪಕೆ
ಹರುಷದಿಂ ಮೆಚ್ಚಿ ಶಿಶುವಾದಭವಗೆ
ಗುರುವೆ ಮಾಯೆಯ ಜರಿದು ಭಂಗಿಸಿದ ಮಹಿಮರಿಗೆ
ಕರುಣನಿಧಿ ಗೊಗ್ಗಯ್ಯಗೊಲಿದಾತಗೆ ॥ ೧ ॥

ನಿರುಪಮ ನಿರಾಲಂಬ ಅನುಮಿಷನ ಲಿಂಗಸಹ
ಕರದೊಳಗೆ ಧರಿಸಿ ಭುವನದಿ ಮೆರವಗೆ
ಶರಣೆ ಮುಕ್ತಾಯಕ್ಕಗುಪದೇಶವನು ಮಾಡಿ
ವರ ಯೋಗವನು ಸಿದ್ಧರಾಮಗೊರೆದಾತಗೆ ॥ ೨ ॥

ಕಲ್ಯಾಣಪುರವರಾಧಿಪ ಬಸವ ಮೊದಲಾದ
ಎಲ್ಲ ಪ್ರಮಥರು ಭಜಿಪ ಭಕ್ತಿಗೊಲಿದು
ಅಲ್ಲಿಗೈತಂದು ಲಿಂಗಾಂಗಸಾಧಕಮನರುಹಿ
ಬಲ್ಲಿದಳು ಮಹದೇವಿ ಬರೆ ಮೋಕ್ಷವಿತ್ತನಿಗೆ ॥ ೩ ॥

ಶ್ರೀಶೈಲಕೈದಿ ಗೋರಕ್ಷಮುನಿ ಋಷಿಜನಕೆ ವಿ
ಶೇಷವಹ ಫಲ ಪದವಿಗಳನುಯಿತ್ತು
ಭಾಸುರತೆಯಿಂ ರಚಿಪ ಶೂನ್ಯಸಿಂಹಾಸನವ
ಈಶ ನೀನೇರೆ ಅರ್ಚಿಸಿ[ದ] ರೆಂಬ ದೇವನಿಗೆ ॥ ೪ ॥

ಗುರು ಇಷ್ಟಲಿಂಗನಿಗೆ ಬಸವ ತೃಪ್ತಿಯವಡಿಸೆ
ಚರಗುರುಲಿಂಗ ಜ[ಗ]ದ ಸಚರಾಚರಕೆ
ನೆರೆತೃಪ್ತಿವಡಿಸಿ ಭಕ್ತರಿಗೆ ಮೋಕ್ಷವ ಕೊಟ್ಟ
ಪರಕೆ ಪರ ಅಲ್ಲಮಪ್ರಭು ಗೊಹೇಶ್ವರಗೆ ॥ ೫ ॥

❑ ❑

೩೧

ಆದಿ ಮಲ್ಲನಮೂಲೆ....... ಬಸವೇಶ
ಪರಮಗುರುವಿನ ಚರಣಕಮಲವ ಬಿಡ[ದೆ] ನೀ ಪಿಡಿದಾಡೆಲೋ
ಪರಮ ಭಕ್ತನಾಗಿ ಸುಖದೊಳಿರುತಿರೆ ನೀ ನೋಡೆಲೋ ॥ ಪಲ್ಲ ॥

ಗಂಗೆ ಗೌರಿ ಯಮುನಾತೀರದ ಸಂಗಮೇಶ್ವರ ನೋಡೆಲೋ
ಅಂಗಸಂಗಭವಾಂಗವಾದ ಘನಲಿಂಗಪೂಜೆಯ ಮಾಡೆಲೋ ॥ ೧ ॥

ಆರುನೆಲೆಗಳು ಮೂರುಮಂತ್ರದ ಕಾರುಣಿಕ ನೋಡೆಲೋ
ಕಾರಣೀಕದ ಗುರುವಿನಂಘ್ರಿಯನೇರಿ ಸುಖದೊಳ್ಪಾಡೆಲೋ ॥ ೨ ॥

ವೇದನಾಲ್ಕನು ಪಾದವನು ಮಾಡಿ ಆದಿಮಲ್ಲನಮೂಲೆಲೋ
ಸೋಜಿಗದ ಬಸವೇಶನಾಂಘ್ರಿಯ ಪೂ[ಜಿಪ] ಭಕ್ತನಾಗೆಲೋ ॥ ೩ ॥

❑ ❑

೩೨

ರಾಗ : ದೇಶಿ

ಎಂತು ತಿಳಿವರೊ ಶರಣರಿಂತು ಮನುಜರಿಗರಿದು
ಕಂತುಹರನೆ ಬಲ್ಲ ನಿಜಶರಣರ ॥ ಪಲ್ಲ ॥

ಮರುಳನಂದದಿ ನುಡಿದು ದುರುಳನಂದದಿ ನಡದು
ಬರುಬನಂದದಿ ಕರೆಯಲೋಯೆನುತಿಹ
ಕರಮೆ ಬಾಳಕನಂತೆ ಪರಿಪರಿ ಭಾವದೊಳು
ಪರಮನೊಳ್ಪುವೆರೆದಳಿದ ನಿಜಶರಣರ ॥ ೧ ॥

ಸಕಲ ಭೋಗಕ್ಕೆ ಸಲ್ಲನಿಖಿಳ ಜಾತಿಯೊಳೆಲ್ಲ
ಸುಕೃತಾದಪೇಕ್ಷೆಯೊಳಿನಿತುಯಿಲ್ಲ
ಸಕಲ ನಿಷ್ಕಳನಾಗಿ ಸುಖದ ಸೀಮೆಯನಾಳ್ದು
ಅಕಳಂಕನೊಳ್ಬೆರದ ನಿಜಶರಣರ ॥ ೨ ॥

ಉರಿ ಕಪ್ಪುರದ ಯೋಗ ಜಲಸಿಲೆಯ ಸಿಲೆ ಬಲಿದು
ಸ್ಫುರಿಸುವುದು ನೋಡನೋಡಲ್ಕ[ಡಲೆ]ಯಾದ

ತೆರನಂತೆ ಆರೂಢಗುರುಮಲ್ಲನಂಘ್ರಿಯುಗ
ದಿ ರಾಜಯೋಗದೊಳಿಪ್ಪ ನಿಜಶರಣರ ॥ ೩ ॥

೩೩

ಜಾತಿಯನರಿತು ಕೂಡುವ ಪರಂಜ್ಯೋತಿಯರಿತು
ಜಾತ ಸಂಕರಯಿನಿತಿಲ್ಲವಾರೂಢಮಲ್ಲ
ಜಾತ ನಿರ್ಮಲ ಪುಣ್ಯ ಪೂತ ಸರ್ವಾಂಗನವ್ವ ॥ ಪಲ್ಲ ॥

ಮೊದಲಿನಜಾವು ಚಿತ್ರಸಾಲೆ ನಿಡುಬಿಂಬ ಠಾವು
ಮೃದುಲಜ್ಜೆಯಿಟ್ಟು ಸ್ವಯಿಚ್ಛೆ ಸನ್ಮಾನದೊದವಿದ
ರತಿನಗರಾಕಜದಿ(?) ಚಿತ್ತಿನಿ ॥ ೧ ॥

ಎರಡನೆಜಾವು ಜೊನ್ನವಾಯು ಸ್ಫುರಿಸುವ ಠಾವು
ವರ ನಖ ಹತಿ ಕುಚವಸವ ಬಾಹ್ಯಾಂ
ತರ [ದೇರಿ] ನ ಧಿಕ್ಕಾರಣದಿಂದಲ್ಲಿ ಶಂಖಿನಿ ॥ ೨ ॥

ಮೂರನೆಜಾವು ಗಹ್ವರದುದಿ ಸೇರುವ ಠಾವು
ಸ್ಮರ ತರ್ಜನ ಪಂಚಾಂಗಗಳ ತಾಡಂಗಳ
ತೋರಿ ಕಂದರ್ಪದಿ ನಿಷ್ಠುರ ಹಸ್ತಿನಿ ॥ ೩ ॥

ನಾಲ್ಕನೆಜಾವು ರತಿಯ ಸೊಂಪು ಸೊಕ್ಕುವ ಠಾವು
ಚಳ್ಕನೆ ಗರಗರಿಕೆಯು ದಂತಹತ ನಖ
ತಳ್ಕೆ ಚುಂಬನ ಪದ್ಮಾಸನದಿಂದ ಪದ್ಮಿನಿ ॥ ೪ ॥

ಶೃಂಗಾರಸದನ ಸುವೇಣಿ ಪ್ರಸಂಗಿತ್ತ ವದನ
ಅಂಗನೆಯರ ಮನದಾಣ್ಮ ಆರೂಢಮಲ್ಲ
ಹಿಂಗದೆ ನೆರದೆನ್ನ ಪ್ರೀಯದಿ ಪದ್ಮಿನಿ ॥ ೫ ॥

೩೪,

ದೇವ ನೀನಱಿತು ಕೂಡೋ ಕಾವ ಕಲೆಯ ನೆಲೆಯ ಬಲ್ಲ
ಭಾವೆಯನೊಲಿದು ಮನವೊಲಿದು ಕೃಪೆವೆರೆದು ॥ ಪಲ್ಲ ॥

ತಳಿರಡಿ ಭ್ರಮರಕುಂತಳೆ ಪೆರೆನೊಸಲಿನ
ಸುಳಿನಾಭಿ ಚೆಲ್ವೆ ಕೋಕಿಲಸ್ವರದ
ನಳಿತೋಳ್ಸುಳಿಪಲ್ಲ ಗಳರವ ಬಳಲ್ಮುಡಿ
ಗಳಹಂಸೆ ಗಮನೆ ನಲಿನಭಾತ್ನ(?) ರತಿಯಳ ॥ ೧ ॥

ನಸುದೋರ್ಪ ಬಲ್ಮೊಲೆ ಲಾವಣ್ಯ ಮುದ್ದುಮುಖ
ಪಸರಿಪ ಕಡೆಗಣ್ಣು ಕಾಂತಿ
ಪೊಸ ನಖಹತಿ ಉಲ್ಲಾಸದಾಲಿಂಗನ
ನಸೆ ಮಾರನ ರತಿ ಕುಶಲನೆ ಪೇಳು ॥ ೨ ॥

ಸಮಯೋಗ ಸಮಭೋಗ ಸಮಜಾತಿಬಂಧ
ಸಮನಹ ರತಿಯ ಗುಣವತಿಯ ಸದ್ವ್ರತೆಯ
ಶಮದಿನೆರದ ಚಿದಾರಮಣಾರೂಢಮಲ್ಲ
ಭ್ರಮೆಯಲ್ಲದ ಸುಖಸಮಸಿದ್ಧಿಗಳು ॥ ೩ ॥

❑ ❑

## ೩೫

## ರಾಗ : ನಾದರಾಮಕ್ರಿ

ನೋಡು ನೋಡಲೆ ಆತ್ಮ ನಿಜವಾಗಿ ಮುಕ್ತಿ
ಬೇಡಿಕೊ ನಿನ್ನೊಳು ಸ್ಥಿರವಾಗಿ ॥ ಪಲ್ಲ ॥

ತುಂಬು ಸದ್ಗುರು ಕರುಣಾಂಬುವ ಆತ್ಮ
ಲಿಂಗನೋಟಕೆ ನೀಡು ಮಜ್ಜನವ
ನಂಬುಗೆಯಿಂ ತುಂಬೆ ಕುಸುಮವ ತಂದು
ಶಂಭುವ ಪೂಜಿಸುವ ॥ ೧ ॥

ಆದಿಮಧ್ಯಾಂತ ರಹಿತನಾಗಿ ತತ್ತ್ವ
ಸುಧೆಯೊಳಗೆ ದಿವ್ಯಮೂರ್ತಿಯಾಗಿ
ವೇದ ವೇದಾಂತ ವಿಗ್ರಹನಾಗಿ ಇದ
ಸಾಧಿಸಿದರೆ ನೀನೆ ಯೋಗಿ ॥ ೨ ॥

ಚತುರ್ವಿಧ ಫಲ ಪ್ರಾಪ್ತಿಗಳು ಬೇಡ
ಸತತದಿಂದ ಜೀವನ್ಮುಕ್ತಿಗೆ ನೋಡ
ಗತಿಯೊಳುತ್ತಮ ಪರಮಾರೂಢಶಾಂತ ॥ ೩ ॥

❑ ❑

೩೬

ಓದಿ ಮರುಳಾದರೆಲ್ಲರು ಕೂಚಿಭಟ್ಟರು
ಓದಿನೊಡಲ ತಿಳಿಯದವರೆಲ್ಲ ಕೆಟ್ಟರು
ಓದಿ ಮರುಳಾದರೆಲ್ಲರು ಕೂಚಿಭಟ್ಟರು ॥ ಪಲ್ಲ ॥

ಪರತತ್ವ ವಿಚಾರವನರಿಯದ ಪಾಪದವೋದು
ವರ ನಿಗಮಾರ್ಥತಿಳಿಯದ ವಾಙ್ಮಯದವೋದು
ಬರಿಯ ಮರವೇರಿ ಬಿದ್ದೆವೆಂಬ ಭ್ರಾಂತಿನವೋದು
ಗುರುಮುಖದಿಂದ ಸಾಧ್ಯವಿಲ್ಲದ ಸಂಶಯದವೋದು ॥ ೧ ॥

ತನ್ನೊಡಲ ತಾ ತಿಳಿಯದಿಪ್ಪ ಭಿನ್ನದವೋದು
ಮುನ್ನಿವವರ ಮಾರ್ಗವನರಿಯದ ಮೂರ್ಖನವೋದು
ಕುನ್ನಿಯಂತೆ ಹಲವು ತೆರದಿ ಕೂಗುವವೋದು
[ಜ್ಞಾನ] ಮರವೆಯನ್ನು ನೀಗದಿಪ್ಪ ಅನ್ಯಾಯದವೋದು ॥ ೨ ॥

ಅಂತರ ಅಭ್ಯಂತರವರಿಯದ ಭ್ರಾಂತಿನವೋದು ಶಿವನ
ಚಿಂತೆಯಿನಿಸು ಮಾಣದಿಪ್ಪ ಚೇಷ್ಟೆಯವೋದು
ಕಂತು ಕಾಲನ ಗೆಲಲು ಕ್ರಿಯದ ಕಪಟವೋದು ಆರೂಢ
ಶಾಂತಲಿಂಗನಂತರವರಿಯದ ಸಟೆಗಳವೋದು ॥ ೩ ॥

❑ ❑

೩೭

ಬರಿದೆ ಮುನಿಸು ಸಲ್ಲ ಬಾರೊ ಮನಿಗೆ ನಲ್ಲ
ನೆರೆ ನಂಬಿದೆ ನಿನ್ನ ಸೊಲ್ಲ ಪಲ್ಲ

ಮದನಬಾಣಕೆ ಎನ್ನ ಮನವು ಬೆದರುತಿದೆ
ಒದಗಿ ತಂಬಿಸೊ ತಾಪವ

ಚದುರ ಅರಸ ಎನ್ನ ಚೆಂದುಟಿಯ ಚುಂಬಿಸೊ
ಮುದದಿ ಗಾನವ ಪಾಡೊ ॥ ೧ ॥

ಅಗಿಲು ಕುಂಕುಮ ಗಂಧ ಅಂಗಕ್ಕೆ ಲೇಪಿಸೊ
ಬಾಗುತ ಫಲವ ಸಲಿಸೊ
ಮಿಗೆಪರಿಮಳಿಸುವ ಮಲ್ಲಿಗೆಸರವನು
ಸೊಗಸಿನಿಂದಲಿ ಮುಡಿಸೊ ॥ ೨ ॥

ರತಿಕಲೆಗಳ ಬಲ್ಲರಸಿಕನಾಯಕನೆ ಚೌ
ಶಿತಿಬಂಧದಿಂದ ಕೂಡೊ
ಪತಿ ಇಮ್ಮಡಿ ಮುರಿಗೆಯ ಪರಮ ಗುರುಸಿದ್ಧೇಶ
ಹಿತದಿಂದ ನೆರೆಯೊ ಬೇಗ ॥ ೩ ॥

❑ ❑

## ೩೮

ಧವಳಾರ
ನೆಲೆನೆಲೆಗನುಪಮವೆನಿಸುವ ಕುಲಗಿರಿಗಳನೊಳಗೊಂಡಿಹ
ಚೆಲುವ ಸಹ್ಯಾದ್ರಿ ನಡುವಣ
ಚೆಲುವ ಸಹ್ಯಾದ್ರಿ ನಡುವಣ ವೃಷಭಾ
ಚಲದ ಕಲಿ ಚೆನ್ನಬಸವ ಜಯ ಜಯ ಶೋಭನವೆ ॥ ೧ ॥

ಪರತರ ಭಸಿತದ ಪರ್ವತದುರುವ ಗವಿಯಲಿ ಮೆರವ
ಗುರುಸಿದ್ಧೇಶ್ವರನ ಮಹಿಮೆಗೆ
ಗುರುಸಿದ್ಧೇಶ್ವರ ಮಹಿಮೆಗೆ ನೆಲೆವನೆಯಾದ
ವರ ಚೆನ್ನಬಸವ ಜಯ ಜಯ ॥ ೨ ॥

ನಿಗಮನುತ ರುದ್ರಾಕ್ಷಿಯನಗದೊಳು ಮಂಜುಳವಾದ
ಸೊಗಯಿಪ ರುದ್ರಾಕ್ಷಿಯ ಸದನದೊಳು
ಸೊಗಯಿಪ ರುದ್ರಾಕ್ಷಿಯ ಸದನದೊಳಿರುತಿಹ ರುದ್ರನ
ಋಗ ಚೆನ್ನಬಸವ ಜಯ ಜಯ ॥ ೩ ॥

ನುತ ಭೂತೇಶ್ವರಗಿರಿಯ ವಿತತ ಧರಣಿಯೊಳಿಹ ಮಹ
ರಥ ಸುಪ್ರಸಾದಾಮೃತವದು
ರಥ ಸುಪ್ರಸಾದಾಮೃತವದು ನೆಲಸಿರೆಯದರೊಳು
ಹಿತ ಚೆನ್ನಬಸವ ಜಯ ಜಯ ॥ ೪ ॥

ಘನವಹ ಹೊನ್ನರಳಿಯಮರದನುವಿನ ಕೊನೆಯೊಲು ಮಿಸುನಿಯ
ವಿನುತ ತೊಟ್ಟಿಲೊಳು ಚರವನು
ವಿನುತ ತೊಟ್ಟಿಲೊಳು ಚರವನು ನೆರೆತೂಗಿದ ನಂಟ
ಘನನಿಧಿ ಚೆನ್ನಬಸವೇಶ [ಜಯ ಜಯ] ॥ ೫ ॥

ನಿರುಪಮ ಕೈಲಾಸಾದ್ರಿಯ ಪುರದ ಬಾಗಿಲ ಹೊಕ್ಕು
ಪರಮ ಶ್ರೀಕಂಠನೊಡವೆರದ
ಪರಮ ಶ್ರೀಕಂಠನೊಡವೆರದ ಶರಣರ
ಗುರು ನೀನೆ ಚೆನ್ನಬಸವೇಶ [ಜಯ ಜಯ] ॥ ೬ ॥

ಪಟು ಚೋಳೇಶ್ವರ ಚಪ್ಪರದಟವಿಯೊಳೆಡೆಯಾಡುತ ಬಹ
ನಿಟಿಲಾಕ್ಷ ಶರಣರನುದಿನ
ನಿಟಿಲಾಕ್ಷ ಶರಣರನುದಿನ ಕಾಂಬರು ನಿಮ್ಮ
ದಿಟವಿದು ಚೆನ್ನಬಸವೇಶ [ಜಯ ಜಯ] ॥ ೭ ॥

ಹರಳೇಶ್ವರ ಕಿನ್ನರೇಶ್ವರತೀರ್ಥ ಏಕಾಂತ
ಪರರಾಯತೀರ್ಥ ಶಿವತೀರ್ಥ
ಪರರಾಯತೀರ್ಥ ಶಿವತೀರ್ಥ ಮುಖ್ಯಕ್ಕೆ
ದೊರೆ ನೀನೆ ಚೆನ್ನಬಸವೇಶ [ಜಯ ಜಯ] ॥ ೮ ॥

ನುತ ಸದಾಶಿವ ಸಂಗಮೇಶ ಮಲ್ಲೇಶ ವಿ
ಶ್ರುತ ವೀರಭದ್ರ ಮುಖದಾದಿ
ಶ್ರುತ ವೀರಭದ್ರ ಮುಖದಾದೀಶ್ವರ ನಿಚಯ
ಯುತ ಚೆನ್ನಬಸವೇಶ [ಜಯ ಜಯ] ॥ ೯ ॥

ಬಳಿಕುಳಿದ ದೈವತ್ತರ ಕುಳವು ಸಕಲ ತೀರ್ಥ
ವಿಳಸ ಮೃಗಪಕ್ಷಿ ನಿಕರವು
ವಿಳಸ ಮೃಗಪಕ್ಷಿ ನಿಕರವು ನಿಮ್ಮಯ ಪಾದ
ನಳಿನದರ್ಚಕರು ಬಸವೇಶ [ಜಯ ಜಯ] ॥ ೧೦ ॥

ಸಲೆ ಭೂತ ಸಮುದಯವು ನೆಲೆಯ ಬಾವಲಿಯಾಗಿ
ಚೆಲುವ ಮಾಮನೆಯ ಬಾಗಿಲನು

ಚೆಲುವ ಮಾಮನೆಯ ಬಾಗಿಲನು ಕಾಯ್ದಿಹವು
ನೆಲೆ[ಯಳಿದ] ನಿಮ್ಮ ಶರಣರ ॥ ೧೧ ॥

ನರರೆಡೆಯಾಡದ ಹಂಗೆ ವರ ಕಿನ್ನರೇಶ್ವರನು
ಸುರನದಿಯ ತನ್ನ ಚರಣದ
ಸುರನದಿಯ ತನ್ನ ಚರಣದ ಗೆರೆಯಿಂ ತಂದು
ಹರಿಸಿದ ಮಾಮನೆ ಇದಿರೊಳು ॥ ೧೨ ॥

ಮರವೆಲ್ಲ ಸುರಕುಜವು ಗಿರಿಯೆಲ್ಲ ಲಿಂಗವೀ
ನರರೆಲ್ಲ ಸುರರು ನಿಜವಿದು
ನರರೆಲ್ಲ ಸುರರು ನಿಜವಿದು ಉಳುಮೇಶ
ವರ ಬಸವಲಿಂಗ ವರದಾತ ಶೋಭನವೆ ॥ ೧೩ ॥

❑ ❑

೩೯

ಅಂಗಜಮದಕೃತಾಂತ ಅಧಿಕ ಶರಣರಂತ
ರಂಗನೆ ಸಿದ್ಧಲಿಂಗನೆ ॥ ಪಲ್ಲ ॥

ಭಸಿತಭೂಷಣವಿಟ್ಟ ಭವಮಾಲೆಗಳ ಸುಟ್ಟ
ನೆ ಶಿವನೆ ದಯವೆಸವನೆ
ದೆಸೆಭರಿತಯುದಾರ ಜನನ ಮರಣ ದೂರ
ಅಸಮನೆ ಮುಕ್ತಿಕುಸುಮನೆ ॥ ೧ ॥

ವೀರಶೈವದಿ ಸಂಪನ್ನ ವಿಮಲ ಸದ್ಗುಣ ರನ್ನ
ಹರನೆ ದಯಗಾರನೆ
ಸಾರ ಷಟ್ಸ್ಥಲಮೂರ್ತಿ ಸಕಲಲೋಕದಿ ಕೀರ್ತಿ
ಸೂರನೆ ಗಂಭೀರನೆ ॥ ೨ ॥

ಪೊಡವಿಗಧಿಕವಾದ ಪೊಸತು ದಿವ್ಯಾನಂದ
ಒಡೆಯನೆ ಘನದೊಡೆಯನೆ
ಎಡೆಯೂರಪುರದಿ ನಿಂದೆನಗತಿಲೇಸ
ಕೊಡುವನೆ [ಮೋ]ಕ್ಷವಿಡುವನೆ ॥ ೩ ॥

❑ ❑

೪೦

ರಾಜಲಪನೆ ನೀ ತೋರೆ
ಮಾಜಾತನ ತಾಪಕಾರೆ ॥ ಪಲ್ಲ ॥

ಕಿರುವಯದವಳೊಳು ಕಿನಿಸು ಮಾಡುವುದು
ತರವೇನೆ ತನಗಿದು ॥ ೧ ॥

ಸಣ್ಣವಳಿಂದು ನಾ ಸೈರಿಸಲಾರೆ
ಪುಣ್ಯವಾದೀತೆ ಕರೆತಾರೆ ॥ ೨ ॥

ಬಂಧುರ್ಯೆನೆಲೆಪುರ ಬಸವಲಿಂಗನೊಳು
ಒಂದುಗೂಡುವ ಬಗಿ ಪೇಳೊ ॥ ೩ ॥

❑ ❑

೪೧

ಆಡುವ ಬಾರೆ ಪಗಡೆ ಹೂಡೆಲೆ ನೀರೆ
ಗಾಢ ಹಾಸಂಗಿ ಹಾಸಿಗೆ ತೊಡದಿರು ತಂಗಿ ॥ ಪಲ್ಲ ॥

ಶಶಿ ಸೂರ್ಯ ಲೆತ್ತ ಮೂರು ದಶ ನಾಲ್ಕನಿಟ್ಟು
ಶಶಿಮುಖಿಯಳು ಪಗಡೆ ಜುಗವ ಗೆದ್ದಾಳು
ಮಸುಕು ಹಸುರು ಹಳದಿ ಕೆಂಪು ಕಾಯಿಗಳ
ಸುಸುಂಪಿಗಳ ಈಡೆ ಕುಶಲ ಚಿಟ್ಟಿಗಳ ॥ ೧ ॥

ಬಾರದ ಕಾಯ ಅದನೇರಗೊಡದೆ
ಪೋರಿ ಕಡಿದರೆ ನೀನು ಜಾಣೆ ಆಹುದೆಲೆ
ಆರು ಹತ್ತಕ್ಕೆ ಕಾಯಿ ಮೀರಿ ಹೋಗುವದ
ಆರನಿಟ್ಟರೆ ಮನವ ಸೂರೆಗೊಟ್ಟೆನು ॥ ೨ ॥

ಏಳು ಎಂಟಕೆ ಕಾಯ ಮೀರಿ ಹೋಗುವದು
ಕೋಳು ಹೋದೆಲ್ಲಿ ಕಾಯ ವೃಥಾ ಕಳೆ
ಆದೆಲ್ಲ ನಳಿನಮುಖಿಯಳೆ ಆಟ ತಿಳಿಯದಾಡುವರೆ
ಕೇಳು ಹೇಳುವೆನು ಮೂಲ ತಿಳಿದು ಆಡುವುದು ॥ ೩ ॥

ಒಂದೊಂಬತ್ತಕ್ಕೆ ಕಾಯ ಮುಂದಾದೆ ಜಾಣೆ
ಹೊಂದಿಸಿ ಲೆತ್ತಹಾಕಿ ಮುಂದೆ ಗೆದ್ದಳು
ಇಂದು ಸೋತರೆ ನೀನು ಹಿಂದಾದೆ ಜಾಣೆ
ಚಂದ್ರಮುಖಿಯಳು ನಲ್ಲನ ಕೊಂದೆ ಹೋದಳು ॥ ೪ ॥

ಮತ್ತೆ ಹೂಡಲೆ ನಾನು ಸೋತು ಹೋಗಲೆ
ಹೊತ್ತು ಮುಳುಗಿತು ಬಹಳ ಕತ್ತಲಾಯಿತು
ಚಿತ್ತೈಸುವ ಸುಶಿರ [ದೈ] ಪುರದ ಸೋಮೇಶ
ಜ್ಯೋತಿರ್ಮಂಟಪದಿ ॥ ೫ ॥

೪೨

ರಾಗ : ಶಂಕರಾಭರಣ

ಲಿಂಗದ ಸದ್ಭುಭಾವವ ತಿಳಿದ
ಸಂಗವೆ ಲಿಂಗೈಕ್ಯದ ನಿಜವು ॥ ಪಲ್ಲ ॥

ಮಾಯಾವೈಭವವಳಿದ ಬಳಿಕ ಮುಂ
ದಾಯಾಸಬಟ್ಟರಸಲಿಕಿಲ್ಲ
ಬೀಯವಾಗದಿರ್ದಡೆ ತಾನೀಗಪ್ರ
ಮೇಯ ಮಹಾಘನತರ ಲಿಂಗ ॥ ೧ ॥

ಆದಿ ಮಧ್ಯಾವಸಾನರಹಿತ ಗುಣಭೇದ ವಿ
ವಾದ ಸಮಯದೂರಾ
ನಾದ ಬಿಂದು ಕಳಾತೀತ ಪರಾನಂ–
ದೋದಿತ ತಾನೆ ಮೂಲಲಿಂಗ ॥ ೨ ॥

ದಾಸೋಹಂ ಸೋಹಂ ಸಯಂಬೀ ಸಂ–
ಧಾನಕೆ ತೆರಹಿಲ್ಲ
ಸೂಸದೆ ಬೀಸರವಾಗದೆ ಪರಮ ಮ–
ಹಾಸುಖಸಾರವದೆ ಲಿಂಗ ॥ ೩ ॥

ಭಾವಾಭಾವದ ಭಾವನೆಗೆಟ್ಟು
ಭಾವಾಭಾವ ವಿವರವಳಿದು
ಕೇವಲ ಚಿನ್ಮಾತ್ರವಳರೂಪನಿ-
ಜಾವರಣಾಭಿಧವದು ಲಿಂಗ ॥ ೪ ॥

ಧ್ಯಾನಿಸಲಿಲ್ಲದ ಮರೆಯಲಿಲ್ಲದ ಸು-
ಜ್ಞಾನವ ದೆಶೆಯಲರಿಯಲಿಲ್ಲದ
ಮಾನಸ ಕರ್ತ ಸಂಶಯವಿಲ್ಲದ ನಿಜ-
ದಾನಿ ನೀವುವೈಪುರ[ದ] ಸೋಮೇಶ ॥ ೫ ॥

೪೩

ರಾಗ : ಬವುಳಿ

ಲಿಂಗಾಂಗಿ ಅಂಗಸಹಭೋಗಿ ಲಿಂಗಪ್ರಾಣಿ
ಲಿಂಗತತ್ತ್ವಗ್ರಾಹಿ ಲಿಂಗವಂತ ॥ ಪಲ್ಲ ॥

ಅಂಗದ ಲಿಂಗದ ವೇದೆಯಿಂದ ಪೂರ್ವಪ್ರಾಣ
ಸಂಗಗುಣವಳಿದು ನಿಜಲಿಂಗವಾದ
ಅಂಗ ಸಂಗ ಪ್ರಭಾವದೊಳು ಸರ್ವೇಂದ್ರಿಯ ಮು
ಖಂಗಳಿಗೆ ಲಿಂಗತತ್ತ್ವ ಘಟಿಸಿದ ॥ ೧ ॥

ಬಳಿಕೇಂದ್ರಿಯಂಗಳ ಸಮೂಹವಗ್ನಿಯ ಸಂಗ
ದೊಳಗಾದ ಕಬ್ಬುನದ ಘಟ್ಟಿಯಂತೆ
ಉಳುಮೆಯಿಂ ಸಕಲ ವಿಷಯಂಗಳೊಳು ವರ್ತಿಪುದು
ತಿಳಿಯೆ ತಾ ಲಿಂಗಸ್ವಭಾವ ತಾನಾಗಿ ॥ ೨ ॥

ಲೌಕಿಕಾಚಾರವನು ಕಳೆದು ಲಿಂಗಾಚಾರ
ವೇಕಾರ್ಥವಾದ ಮಾರ್ಗದಲಿ ನಿಮ್ಮ
ನೂಕಿ ಸಂಶಯ ಸೂತಕ ಭ್ರಮೆಯಳಿದು ಲಿಂಗ
ಲೋಕವೆ ಲೋಕವಾಗಿರ್ದನ ॥ ೩ ॥

ನೋಡಿದಡೆ ನೋಡಿ ಮುಟ್ಟುವಡೆ ಮುಟ್ಟುವ ಮಾತ-
ನಾಡಲಾಡುವ ಉಂಡರುಂಬ ಗಮನ

ಮಾಡಿದರೆ ಮಾಡಿ ನಿಂದರೆ ನಿಂದು ಸರ್ವವನು
ಕೂಡಿ ವರ್ತಿಸುವ ಸಹವರ್ತಿಯಾಗಿ ॥ ೪ ॥

ರೂಪು ರುಚಿ ವಿಜ್ಞಾನದೊಳಗಮ್ಮಮ್ಮ ಭಾವ
ಲೇಪವಳಿದರ್ಪಿತಾನರ್ಪಿತ ಗುಣ
ಲೋಪವಾದನುಪಮ ಚಿದಾನಂದ ಮಹಿಮನ–
ಮ್ಮೈಪುರದ ಸೋಮನಾಥನ ಶರಣನು ॥ ೫ ॥

□ □

೪೪

ನಂಜುಂಡೇಶ್ವರ ನಿಮಗೆ ನಮೋ ದಯ
ನಂಜನಗೂಡಪರಂಜಿ ನಮೋ ॥ ಪಲ್ಲ ॥

ನೀಲಕಂಧರ ನಮೋ ನಿಗಮಗೋಚರ ನಮೋ
ಫಾಲಾಂಬಕ ನಮೋ ಪರಮ ನಮೋ
ಶೂಲಾಂಕಿತ ನಮೋ ಸುರರವಂದಿತ ನಮೋ
ಲೀಲಾತ್ಮಕ ನಮೋ ಲಲಿತಾತ್ಮಕ ನಮೋ ॥ ೧ ॥

ಗಂಗಾಧರ ನಮೋ ಗಜಮುಖಪಿತ ನಮೋ
ಮಂಗಳ ನಮೋ ಮಹಿಮಾಂಗ ನಮೋ
ತಿಂಗಳಧರ ನಮೋ ತ್ರಿಪುರಸಂಹರ ನಮೋ
ವರ ಕವಿಲಿಂಗನೊಡೆಯ ನಮೋ ॥ ೨ ॥

ಉರಗಭೂಷಣ ನಮೋ ಉದರಕೇಶವ ನಮೋ
ಗಿರಿಧರ ನಮೋ ಗಿರಿಜೇಶ ನಮೋ
ಕರುಣಾಕರ ನಮೋ ಕಪ್ಪಿನಿಪತಿ ನಮೋ
ವರ ಕವಿಲಿಂಗನೊಡೆಯ ನಮೋ ॥ ೩ ॥

೪೫

ನೀ ಪೇಳೆ ರಮಣಿ ನಿನಗಿನಿತು ವಂಚನೆ ಬೇಡ
ಆಪಧಾರನ(?) ಮೇಲೆ ಅರ್ಧಚಂದ್ರಮನ
ನೀಪೇಳೆ ರಮಣಿ ನಿನಗಿನಿತು ವಂಚನೆ ಬೇಡ ॥ ಪಲ್ಲ ॥

ಕುಂಭರಾಸಿಗೆ ಬಂದು ನಿಂದನು ಕುಮುದಾಪ್ತ
ಶಂಬರಾರಿಯ ಕಲೆಯ ಲೆಕ್ಕದಿಂದಲಿ
ಜಂಭಾರಿಯನು ತಂದು ಹೊಂಗೊಡದೊಳಮೃತವ
ತುಂಬಿ ಅರಗಿನಮುದ್ರೆಯೊಳಿಟ್ಟ ಪರಿಯ ॥ ೧ ॥

ಕಾವನಿನೋರ್ಮಿಗಳು(?) ತೀವಿದ ಕಲ್ಲರಾಯ (?)
ತೀವಿದ ಕಡಲೊಳಗೆ ಸಸಿ ಜನಿಸಿತು
ತಾವರೆಯ ಮೊಗ್ಗೆ ಅರಳುವದೆಂದು ಹಿಮಕರನು
ಕಾವಲಾಗಿಸಿದನು ಕಮಲಸಂಭವನ ॥ ೨ ॥

ಮದಗಜದ ಕುಂಭಮಸ್ತಕದ ಮ್ಯಾಲಂಕು-
ಶದ ಮದನಚಕ್ರೇಶ ಹಾಕಿದ ವಂಕಿಯು
ಹದಗಾರ ಕವಿಲಿಂಗ ಎನ್ನೊಡೆಯ ಕಪ್ಪಿನಿಪತಿ
ಚದುರತನದಲ್ಲಿ ಗುರಿಯಿಕ್ಕುವನು ರಮಣಿ ॥ ೩ ॥

೪೬.

ಎಂತು ತಾಳಿದಳಾ ಎಡೆವಿಡಿದು ತನ್ನವನನ್ಯ
ಕಾಂತೆಯೊಳ್ಸನ್ನೆಗೈದುದ ಸಖಿಯುಸುರೆ ॥ ಪಲ್ಲ ॥

ಸೆರಗ ಬೀಸಲು ಸೇವಂತಿಗೆಯ ಮಾಲೆಯು ತೋರೆ
ತುರುಬ ತೋರಿಸ(ಸೆ?) ಪೆರೆನೊಸಲ ತೋರೆ
ಶಿರವ ಬಾಗಿಸಲು ಶಿರವಲುಗಿ ಸೂಚಿಸೆ ತಾ-
ವರೆಯ ತೋರಿಸಲು ತನ್ನುರವ ತೋರಿಸಿದ ॥ ೧ ॥

ಕಿರುನಗೆಯಿಂದ ಕಿತ್ತಳಿ (ಳೆ?) ಗಾವಿ ಮುಸುಕಿಟ್ಟು
ಮುರಿದು ನಿಟ್ಟಿಸಲು ತಾನೆಯುಗುರ ತೋರೆ
ಕುರುಳ ನೇವರಿಸಿ ಕರ್ಪುರದುರಳಿ(?) ವರ್ತಿಸಿದ[ನೀ]
ಪರಿವಿಧದೊಳು ಸಖಿಯುಸುರೆ ಕೋಪಿಸದೆ ॥ ೨ ॥

ಮುಂಗಯ್ಯ ಗಿಳಿಯ ಮುದ್ದಿಸಿ ಕರೆಯಲು ಬೆರಳ-
ನುಂಗುರವ ತೋರಿ ಮೌನವತಾಳಿದ
ಶೃಂಗಾರಹಾರ ಕಪ್ಪಿನಿಪತಿ ನಂಜುಂಡ
ಲಿಂಗನೊಳ್ಸನ್ನೆಗೈದುದ ಸಖಿಯುಸುರೆ ॥ ೩ ॥

೪೭

ನೀನವನಿಗೊಳಗಾಗದಿರಲು ನಿನ್ನಯ ರೂಪು
ನಾನಾ ವಿಚಿತ್ರವಾಗಿಹುದೇನೆ ರಮಣಿ ॥ ಪಲ್ಲ ॥

ಸ್ಮರನ ಬಾಣದ ಕಡೆಗೆ ಸರಸಿಜೋದ್ಭವ ಬಹನೆ
ಸುರರ ಸಂಜೀವನಕೆ (?) ವಿಷ್ಣು ಬಹನೆ
ಹರಚಾಪದೆಡೆಗೆ ಹರಿಣಾಂಕ ನಡೆಗೊಂಬುವನೆ ಈ
ಧರೆಯೊಳಗೆ ಕಡು ಚಿತ್ರವಹುದೇನೆ ರಮಣಿ ॥ ೧ ॥

ಅಂಬುಜಾರಿಗೆ ಅಳಿಗಳು ಎರಗುವವೆ ರವಿಸಸಿಗ–
ಳೆಂಬುವರು ಮೇರೊ[ಳ]ಲ್ಲದೆ ಚರಿಪರೆ
ತಂಬೆಲರ ಭಯಕೆ ತಿರಿದ ಹೂ ಸುಮ್ಮನಿರಲು
ಅಂಬರದ ಕಡೆ ಮೊದಲು ಉಂಟೇನೆ ರಮಣಿ ॥ ೨ ॥

ನೋಡೆ ಬಯಸೆಂದರೆ ಮಾಡಿದವರುಂಟೆ
ಆಡಲೇನೆ ನಿನ್ನ ಅವ[ಸ] ಗುಣಗಳ
ನಾಡಾಡಿಯಲ್ಲ ಕಪ್ಪಿನಪತಿ ನಂಜುಂಡ
ಕೂಡದಿದ್ದರೆ ಚೋದ್ಯವಹುದೇನೆ ರಮಣಿ ॥ ೩ ॥

❑ ❑

೪೮

ಎಂದಿಗೆ ಕಾಣ್ಬೆನೊ ಎಳೆಹರೆಯದ
ಮುದ್ದು ಚಂದಿರವದನೆಯಳ ಚಲ್ವ
ಕಂದರ್ಪನರಸಿಯ ಪೋಲ್ವಳ ಕಾಣದೆ
ಕಂದಿತೆನ್ನಯಮನಸು ॥ ಪಲ್ಲ ॥

ಮದಗಜನಡೆಯಳ ಮೃದುನುಡಿ ಸವಿ ಚೊಕ್ಕ
ಪದಗಳ ಪಾಡುವಳ
ಇದಿರುತ್ತರಗಳ ನಡಸದೆ ನಯದೊಳು
ಹದಿಗಿ ಮಾತಾಡುವಳ
ಹೃದಯದೊಳೊಂಚನೆಯಿಲ್ಲದೆ ಅನ್ನವ
ಒದಗಿಸಿ ನೀಡುವಳಿಂತ

ಚದುರೆವೆಣ್ಣುಗಳರಸಿಯ ಕಾಣದೆ
ಬೆದರಿತೆನ್ನಯ ಮನಸು ॥ ೧ ॥

ಬಟ್ಟ ಜವ್ವನೆಯಳ ಪೊಟ್ಟಪಿಂಗಾಳಿಂತ
ತಟ್ಟಿಗಳ (?) ಪೋಲುವಳ
ಇಟ್ಟೆಡೆ ಮೊಲೆಗಂಧವಟ್ಟಲ ಮೊಳೆಯಂತೆ
ತೊಟ್ಟು ಸಣ್ಣಾಗ್ರದವಳ
ಹುಟ್ಟಿದ ಮೊದಲು ಹುಸಿ ಕೊಲೆ ಕೋಪವೊಂ
ದಿಷ್ಟು ಮುಟ್ಟದಿಹಳ ಇಂಥ
ಕಟ್ಟಾಣಿವೆಣ್ಣುಗಳರಸಿಯ ಕಾಣದೆ ಕಂ
ಗೆಟ್ಟಿತೆನ್ನಯ ಮನಸು ॥ ೨ ॥

ಬಳಲುಮುಡಿಯು ಬಡನಡುವಿನ ಬಾಳೆಯ
ಎಳೆಯ ಕಂಬದ ತೊಡೆಯ
ತಳಿರ ಪಳಿವ ಹಸ್ತ ಪಾದವೆ ಚೆನ್ನದ
ತೆಳುಪಿನ ಮಯ್ಯವಳ
ತೆಳರ್ವಸು ಎಳೆನಗೆ ಸುಳಿನಾಭಿ ಶೋಭಿಪ
ಹೊಳವ ಜಘನದವಳ ಇಂಥ
ಎಳೆವೆಣ್ಣುಗಳರಸಿಯ ಕಾಣದೆ
ಕಳವಳಿಸಿತೆನ್ನಯ ಮನಸು ॥ ೩ ॥

ಜಾಣೆಯು ಜಾತಿಪ್ರವೀಣೆಯು ಒಂದಿಷ್ಟು
ಊಣೆಯವಿಲ್ಲದಹಳ
ವೀಣೆ ಕಿನ್ನರಿಯಿಂದ ಸಂಗೀತರಸಗಳ
ಮಾಣದೆ ಪಾಡುವಳ
ಏಣಲೋಚನೆ ಎಳೆವೆಜೆಯ ನೊಸಲ ಸು-
ಪ್ರಾಣಿಮುತ್ತಿನ ಮಣಿಯ ಪಂಚ
ಬಾಣನ ಕೈಯರಗಿಳಿಯನು ಕಾಣದೆ
ತ್ರಾಣಗುಂದಿತು ಮನಸು ॥ ೪ ॥

ಎಂತು ಪೇಳಲಿ ಬಹುದೀ ವರಹದ ಪುರುಷನ
ಕಾಂತೆ ಕಾಣುತೆ ಬಂದು

ಮುಂತೆ ಗಲ್ಲವ ಪಿಡಿದಲುಗಿ ಮುಂಡಾಡಿ ಸ
ನ್ನಂತಸ್ಥಪುರಕೆ ತಂದು
ಸಂತೋಷದಿಂದಲಿ ಷಡುರಸ ಅನ್ನವೇ
ಕಾಂತದೊಳಗೆ ಸವಿದು ಪ್ರಾಣ
ಕಾಂತನು ಕರಕಂಜಪುರದರಸನ
ಶಾಂತೇಶನ ಕೂಡುವಳ ॥ ೫ ॥

❑ ❑

೪೯

ಕರದರೆ ಮಾತನಾಡದೆ ಹೀಗೆ ಸುಮ್ಮ
ನಿರುವುದು ನಿಪುಣವೆ ರಾಜಚೂಡ ॥ ಪಲ್ಲ ॥

ಜೀವಿಪೆನೆಂತು ಮರದೊಮ್ಮೆ ನಿನ್ನ ಎನ್ನ
ಜೀವದರೆಯ ಬಲು ನೆಚ್ಚಿದೆ ಚದುರ
ಭಾವಿಸೆ ಭಾವಭರಿತನು ನೀನು ಕಾಯೋ
ಗೋವಿಂದಲೋಚನ ಚರಣ ಪಂಕಜನೆ ॥ ೧ ॥

ಮುದದಿಂದೆ ಮೊಗದೋರಿಸಿ ಬೇಗ ಎನ್ನ
ಹೃದಯುದ ರಾಜೀವದ ನೆಲೆಗೆ ನೀ ಬಾರೋ
ಪದುಳವೆ ಪಂಥಗಾರಿಕೆ ಸ್ವಾಮಿ ಧೀರ
ಮದನಕೋಲಾಹಳ ಮನ್ನಿಸೊ ರಮಣ ॥ ೨ ॥

ಗರುವನೆ ಜ್ಞಾನಲೋಲ ಮಹೇಶ ನಿತ್ಯ
ನಿರುಪಮ ನಿಜಭಕ್ತಮಾನಸವಾಸ
ಕರುಣಿಸೊ ಕಾಲಭಂಗ ನಿರಂಗ ಕಾಂತ
ಕರಕಂಜಪುರದಿಷ್ಟಲಿಂಗರಾಜೇಂದ್ರ ॥ ೩ ॥

❑ ❑

೫೦

ಮಂಗಳ ಜಯ ಶುಭಮಂಗಳ ಅಂಗ
ಸಂಗದೊಳಿಹವಿಷ್ಟಲಿಂಗನಿಗೆ ॥ ಪಲ್ಲ ॥

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ
ಮುಕ್ತ ಶರಣ ಐಕ್ಯರೆಂಬುವರ
ಭಕ್ತಿ ಸವಿದು ಎನ್ನ ಕರಕಮಲಕೆ ಬಂದು
ಮುಕ್ತಿ ತೋರಿದವಿಷ್ಟಲಿಂಗನಿಗೆ ॥ ೧ ॥

ಲಿಂಗದೊಳಗೆ ಆರು ಮಠಗಳ ನಿರ್ಮಿಸಿ
ಹಿಂಗದೆ ಅನುದಿನದೊಳಿರ್ದು
ಕಂಗಳಾಲಯದೊಳು ಲಿಂಗರೂಪದಿ ಎನ್ನ
ಸಂಗದೊಳಿಹ ಪ್ರಾಣಲಿಂಗನಿಗೆ ॥ ೨ ॥

ಮೆರವ ಬ್ರಹ್ಮಚಕ್ರಸರಸಿಜಮಧ್ಯದಿ
ವರ ಭಾವಲಿಂಗ ಬಾಗಿರೆ ನೋಡಿ
ಗುರು ವಿರಕ್ತನು ಎನ್ನ ಕರಕಮಲಕೆ ತಂದು
ಇರಿಸಿದ ಕರದಿಷ್ಟಲಿಂಗನಿಗೆ ॥ ೩ ॥

❑ ❑

೫೧

ಪಾಲಿನೆನ್ನನು ಭಾಮಿನಿ ಪರಮಭಕ್ತ
ಗಾಲಯವಹ ಭಾಮಿನಿ
ಕಾಲಕೃತಕದ ಜಾಲದ ಮೂಲದ
ಕೀಲನು ಖಂಡಿಸಿ ಕಾಲಿಂದೊದೆದಳೆ ॥ ಪಲ್ಲ ॥

ಪರ್ಬಿದ ಜಸವಾಂತಳೆ ಪಲವು ಕಾಂತೆ
ಯೊರ್ಬುಳಿರೂಪನಾಂತಳೆ
ಕೊರ್ಬಿನ ಕರ್ಬಿನ ಉರ್ಬಿನ ಮರ್ಬಿನ
ನಿರ್ಬಟುವ ಚೆಲ್ವ ಮರ್ಬಿನ ಚದುರೆ ॥ ೧ ॥

ಬಡನಡುವಿನ ಭಾವಕಿ ಭಜಿಪರ ಬೆಂ
ಬಿಡದಿಷ್ಟವೀವ ನಾಯಕಿ
ಕಿಡದೆಡೆಗಡರಿದ ನಿಡುಜಡೆ ಸೊಗಯಿಪ
ಕಡುರಮ್ಯದ ಬಹುಬೆಡಗಿನ ಜಾಣೆ ॥ ೨ ॥

ಭಕ್ತಜನರ ಬಂಧುವೆ ಅಭವನ ಪಾದಾ
ಸಕ್ತರ ದಯಾಸಿಂಧುವೆ
ಯುಕ್ತಿಯ ಭಕ್ತಿಯ ಶಕ್ತಿಯ ಮುಕ್ತಿಯ
ವ್ಯಕ್ತರಿಗೀವ ವಿರಕ್ತರ ಸಿರಿಯೆ ॥ ೩ ॥

ರಂಗುದುಟಿಯ ರಾಜಳೆ ರಾಜೀವರಿಪುವನು
ಭಂಗಿಪ ಶುಭತೇಜಳೆ
ಪೊಂಗಳಸಂಗಳ ಪಿಂಗಿಸಿ ಮೆರವ ಕುಚಂಗಳ
ಮಂಗಳ ಪೆಂಗಳರಸೆ ॥ ೪ ॥

ಗುರುಬಸವೇಶನರಸಿ ನೀಲಾಂಬಿಕೆ
ಸರಸಿ ಪೆಱದಲೆಯನ ಬಾಂ
ದೊಱದಲೆಯನ ಕರಪುರದೆರೆಯನ
ನೆಱವರಿಸಿದ ಮಹಿಮೆ ॥ ೫ ॥

❑ ❑

೫೨

ಅರಿಯದಲೆ ಎನ್ನನೊಪ್ಪಿಸಲೆನ್ನ
[ವರ] ಮೂರುಮುಖದಲ್ಲಿ ತಿಂದು ತೇಗುವೆನು ॥ ಪಲ್ಲ ॥

ರುದ್ರನ ಶಕ್ತಿಯೆ ನಾನು ಮುದ್ರೆ ಮೂದೇವಿ ನಾನು
ಕ್ಷುದ್ರದ ಕುಟಿಲೆ ಎಂದರಿಯ ಕಂಡ್ಯ ಹೊ
ನಿರ್ಧರಿಸಿ ಮುನ್ನೆ ವಿದ[ಗ್ಧ]ರ ಭಾಸುರವನೆ
ಪೊದ್ದಿದವರ ಹೀರಿ ತಿ[ಂ]ಬೆ ಕಂಡ್ಯ ಹೊ ॥ ೧ ॥

ಜನನಿ ಸೋದರಿಯಾಗಿ ನಿನಗೆತ್ತೆ ಸೊಸೆಯಾಗಿ
ತನುಜೆ ನಾದುನಿಯಾಗಿಯುಂಟೆ ಕಂಡ್ಯ ಹೊ
ಗಣನೆಗೊಳ್ಳದೆ ಸವಿನಯಕ್ಕೆಳಸಿದರೆ
ನಿನಗೆ ಹೆಮ್ಮಾರಿ ನಾನೆ ಕಂಡ್ಯ ಹೊ ॥ ೨ ॥

ವೇದಪುರಾಣಂಗಳಾದಿಯನಾದಿಯ
ಸಾಧಿಸುವವರಿಗೆ ನಾನೆ ಶಕ್ತಿ ಕಂಡ್ಯ ಹೊ

ಮೇದಿನಿವೊಳಗೆ ಮುಂತಾದ ವಿದ್ಯದ ರತಿ
ಆದಿಬ್ರಹ್ಮನರಾಣಿ ನಾನೆ ಕಂಡ್ಯ ಹೊ ॥ ೩ ॥

ಹೊನ್ನು ಹೆಣ್ಣು ಮಣ್ಣು ಎನ್ನ ತ್ರೈಮ[ಲ] ಕವಿದು
ಕಣ್ಣುಗಾಣದೆ ಸುನಿಯಂತೆ ಕಂಡ್ಯ ಹೊ
ಬಣ್ಣದ ಛಾಯಕ್ಕೆ ನೀಯೆನ್ನ[ನ]ವ[ಗವಿ]ಸಿದರೆ
ನಿನ್ನ ಶಿರವ ಛೇದಿಸುವೆ ಕಂಡ್ಯ ಹೊ ॥ ೪ ॥

ಹರಿಯಜಸುರರೆಲ್ಲರ ಹರಿದಾಸರ ಮಾಡಿ
ವರ ಸಿದ್ಧ ಸಾಧಕರ ಲೆಕ್ಕಿಸೆ ನಾ ಹೊ
ಕರರುಹ[ದ]ಭವ ಸದ್ಗುರುಶಾಂತನೊಳಗಾದ
ಶರಣ ಷಟ್ಸ್ಥಲಬ್ರಹ್ಮಿಗೆ ಅಂಜುವೆ ನಾ ಹೊ ॥ ೫ ॥

೫೩

ಬಸವದಂಡೇಶನೆ ಗುರುವೆನಗೆ ಅಸ
ದೃಶ ಪ್ರಭುರಾಯನೆ ಪರವೆನಗೆ ॥ ಪಲ್ಲ ॥

ಸಂಚಿತಾಗಾಮಿ ಪ್ರಾರಬ್ಧ ದುರ್ಲಿಖಿತದ
ಸಂಚಲವಳಿದನು ಗುರುವೆನಗೆ
ಪಂಚ [ಲಪ] ನ ವರ ಭಸಿತ ರುದ್ರಾಕ್ಷಿಯ
ಪಂಚಬ್ರಹ್ಮವನಿತ್ತ ಗುರುವೆನಗೆ ॥ ೧ ॥

ತತ್ತ್ವಭೂತಂಗಳ ತೊಲಗಿಸಿ ಮೂರೇಳು
ವ್ಯಕ್ತ ದೀಕ್ಷೆಯನಿತ್ತ ಗುರುವೆನಗೆ
ಕರ್ತುರ್ ಸಾದಾಖ್ಯವ ಕರುಣಿಸಿ ಶಿರದೊಳು
ಹಸ್ತವನೊಲಿದಿತ್ತ ಗುರುವೆನಗೆ ॥ ೨ ॥

ಒಸೆದೊಂದು ಮೂರಾರು ಆರಾರಿಂದತ್ತತ್ತ
ಮಿಸರದೋರಿಸಿದನು ಗುರುವೆನಗೆ
ಪಸರಿಸಿ ದ್ವಿಶತಷೋಡಶವಡರಿಪ
ಕುಶಲವನರುಹಿದ ಗುರುವೆನಗೆ ॥ ೩ ॥

ಮೀರಿದ ಘನಮೂವತ್ತಾರರೊಳಗೆ ನಿಂದು
ಆರು ಮೂರುಗಳಿಂದ ಗುರುವೆನಗೆ
ಮೂರೊಂದರೊಳು ನಿಂದು ನೀರೀನ (?) ಕರದೊಳು
ತೋರಿ ಬೋಧಿಸಿದನು ಗುರುವೆನಗೆ ॥ ೪ ॥

ಅಂಗ ಮನವು ಪ್ರಾಣ ಸಂಗ ಷಡುಸ್ಥಲಯೋಗ
ದಿಂಗಿತವರುಹಿದ ಗುರುವೆನಗೆ
ಹಿಂಗದೆ ಕರರುಹದಭವ ಸದ್ಗುರುಶಾಂತ
ಲಿಂಗವ ಧರಿಸಿದ ಗುರುವೆನಗೆ ॥ ೫ ॥

❑ ❑

೫೪

ರಾಗ : ಭೈರವಿ

ನಲಿವುತಿದೆ ಘನದುಯ್ಯಲೆ ಲಿಂಗಾಂಗ
ಸಲಿಗೆ ಸಮರಸವನಱಿದು ಮಱಿದು ॥ ಪಲ್ಲ ॥

ಉರಿಯಮಂಟಪದ ಮೇಲೆ ಕರ್ಪೂರದ
ಎರಡು ಕಂಭಗಳ ಜ್ವಾಲೆ
ಮರುತನತಿ ಸೂತ್ರಮಾಲೆ
ಕರುಣಮಣಿನಿವನಾಡಿದನುಯ್ಯಲೆ ॥ ೧ ॥

ಉಟ್ಟ ಸೀರೆಯನೆ ಸೆಳದು ತಾ ಮುಂದೆ
ತೊಟ್ಟ ತೊಡಿಗೆಯನು ಕಳದು
ಕಟ್ಟಿರ್ದ ಮುಡಿಯನಳಿದು ತತ್ತ್ವ ಮೇರುಗಿರಿಗಳ
ಮೆಟ್ಟಿಯಾಡಿದನುಯ್ಯಲೆ ॥ ೨ ॥

ಇಂದೀ ಕಳಿಯಾಲಿ ಮಿಂದು ಮೇರುಗಿರಿ
ಯಂತರದೊಳೊಲಿದು ನಿಂದು
ಮಂತ್ರಯುಕ್ತದಲಿ ಬಂದು ಕರರುಹದ
ಶಾಂತನಾಡಿದನುಯ್ಯಲೆ ॥ ೩ ॥

೭೫

ಚಿತ್ತೈಸಿ ಜೀಯ್ಯ ಕರಪೀಠಮಂಟಪದಿಂದ
ರತ್ನಖಚಿತದ ಸೆಜ್ಜೆಗೃಹದಮಂದಿರಕೆ ॥ ಪಲ್ಲ ॥

ಹರಿಯಜರು ಗರುಡ ಗಂಧರ್ವ ವಿದ್ಯಾಧರರು
ಸುರರು ಕಿನ್ನರರು ವೇದವು ಪೊಗಳುತೆ
ಉರು 'ಲಿಂಗಚಕಿತಮಭಿದತ್ತೆ' ಶ್ರುತಿಗೋಚರನೆ
ಪುರಹರನೆ ಪ್ರಮಥಾಲಯಕೆವೊಲವಿಂದ ॥ ೧ ॥

ಮನು ಮುನಿಗಳು ಕೇಳ ದೇವಾದಿ ದಿಕ್ಪಾಲಕರು
ದನುಜದಲ್ಲಣರು ಭೈರವ ರುದ್ರರು
ಘನ ಸಿದ್ಧ ಸಾಧ್ಯ ಯಕ್ಷರು ನಾಗಾಸುರರುಗಳು
ಇನಯೇಂದು ಕೋಟಿ ಸಂದಣಿಸಿದೋಲಗ[ದೊಳು] ॥ ೨ ॥

ಸರಸಿಜೋದ್ಭವನು ಸ್ಮರಪಿತನಿಂದ್ರ ನಿರ್ಜರರು
ವರ ನಂದಿ ಭೃಂಗಿಗಭಯವ ಪಾಲಿಸಿ
ಅರುಣಶಿಖಿನೇತ್ರ ಅಸ್ಥಿಮಾಲಾಸೂತ್ರ
ಶರಭೇಂದ್ರ ಗಣಪ ಷಣ್ಮುಖರನೊಡಗೊಂಡು ॥ ೩ ॥

ಪ್ರಮಥಗಣ ರುದ್ರಗಣ ಶಿವಗಣಂಗಳ
ಸ್ತೋತ್ರಮ ತಮತಮಗೆ ನಮಿಸಿ ಬಿಜಯಂಗೈಸಲು
ಉಮೆಯರಸ ಕರಪೀಠಸಿಂಹಾಸನವನುಳಿದು
ಗಮಿಸುತಿರ್ದನು ಸೆಜ್ಜೆಗೃಹದ ನೆಲೆವನೆಗೆ ॥ ೪ ॥

ನೆರದ ಓಲಗ ಹರಿಯೆ ಗಿರಿಸುತೆಯನಮರ್ದಪ್ಪಿ
ತ್ವರಿತದಿಂ ವೃಷಭವಾಹನವನೇರಿ
ಧಿರುರೆ ಭಲರೆಂಬ ಸೆಜ್ಜೆಯರಮನೆಗೆ ಕೃಪೆಯಿಂದ
ಕರರುಹದ ಶಾಂತಗುರುರಾಯನೆಯಿತಂದ ॥ ೫ ॥

೭೬

ಇನ್ನೇಕೆ ಪರಲೋಕ ಪಡುವ ಬಯಸುವ ಭ್ರಮೆಯು
ಎನ್ನ ಸರ್ವಾಂಗವೆ ಲಿಂಗಮಯವಾಗಿರಲು ॥ ಪಲ್ಲ ॥

ವದನವೆ ಓಂಕಾರಪ್ರಣಮ ದ್ವಿಭುಜನಾಮ
ಮುದದಿ ಶಿಕಾರಪ್ರಣಮುವೆ ನಾಭಿಯು
ಪದದ್ವಯುವೆ ವ ಯಕಾರವಾಗಿ ಷಟ್ಪ್ರಣಮಂಗ
ಸದಮಲಾನಂದ ಬೆಳಗಿನ ಬೆಳಗುದೋಱುತಿದೆ ॥ ೧ ॥

ನಾದ ಬಿಂದು ಕಳೆಗಳವುಮಾಕ್ಷರ ರುಧಿರ
ಮೇದಸ್ಸುವಸ್ಥಿ ಮಾಂಸವು ಮಜ್ಜೆಗೆ
ವೇದಿಸಿರೆ ಪಂಚಪ್ರಣಮೋಂಕಾರಮಯವಾಗಿ
ಆದಿಗುರುವಿನ ತ್ರಯಾಕ್ಷರ ಪ್ರಣಮವಿರುತಿರಲು ॥ ೨ ॥

ಆಧಾರದಲ್ಲಿ ಆಚಾರಲಿಂಗವೆಯಾಗಿ
ಸ್ವಾಧಿಷ್ಠಾನದಲಿ ಗುರುಲಿಂಗವಾಗಿ
ಐದೆ ಮಣಿಪೂರಕದಿ ಶಿವಲಿಂಗರೂಪು ನಿಜ
ವಾದುದನಾಹತದಿ ಜಂಗಮಲಿಂಗವು ॥ ೩ ॥

ಎನ್ನ ವಿಶುದ್ಧಿ ಪ್ರಸಾದಲಿಂಗವೆಯಾಗಿ
ಎನ್ನಾಜ್ಞೇಯದಲಿ ಮಹಲಿಂಗವಾಗಿ
ಎನ್ನಬ್ರಹ್ಮೇಂದ್ರಿ ನಿಃಕಲ ಶಿಖಾಗ್ರವೆ ಶೂನ್ಯ
ಎನ್ನ ಪಶ್ಚಿಮ ನಿರಂಜನಬ್ರಹ್ಮ ಬೆಳಗುತಿದೆ ॥ ೪ ॥

ಶ್ರೋತ್ರ ಪ್ರಸಾದಲಿಂಗವು ಘ್ರಾಣವಾಚಾರ
ನೇತ್ರ ಶಿವಲಿಂಗ ದೃಕ್ಕೆ ಜಂಗಮ
ಓತು ಗುರುಲಿಂಗ ಜಿಹ್ವೆಗೆ ಹೃದಯ ಮಹಲಿಂಗ
ಈ ತನುವೆ ಲಿಂಗಮಯವಾಗಿ ಬೆಳಗುತಿರಲು ॥ ೫ ॥

ಸುಮನ ಸುಚಿತ್ತ ಸುಬುದ್ಧಿ ನಿರಹಂಕಾರ
ವಿಮಲ ಸುಜ್ಞಾನ ಸದ್ಭಾವ ಕರಕೆ
ಗಮಿಸಿಯಾಚಾರ ಗುರು ಶಿವಚರವು ಶೇಷ ಮಹ
ಚಿನ್ಮಯನು ತಾನೆತಾನಾಗಿ ಬೆಳಗುತಿರಲು ॥ ೬ ॥

ಇಂತಪ್ಪ ಸರ್ವಸಂಪತ್ತು ಸಮ್ಯಜ್ಞಾನ
ಶಾಂತಿ ಸಾದಾಖ್ಯವಂಕುರದೋಱಲು

ಅಂತರಾಮಿಯು ತಾನುತಾನಾಗಿ ಕರರುಹದ
ಶಾಂತ ಸದ್ಗುರುವರನ ಕಳೆಯ ಬೆಳಗಿನೊಳಿರಲು || ೭ ||

೫೭

ಬಸವಣ್ಣನೆ ಗುರು ಚೆನ್ನಬಸವಣ್ಣನೆ ಲಿಂಗ
ವಸಮಾಕ್ಷನಲ್ಲಮಾಪ್ರಭುವೆ ಜಂಗಮನಾಗಿ
ವಸುಧೆಗವತರಿಸಿ ಷಡುಸ್ಥಲವನುದ್ಧರಿಸಿದರ ಚರಣ
ಸ್ಮರಣೆಯ ಮಾಡಿರೊ || ಪಲ್ಲ ||

ಬಾಯೆಂಬ ಪ್ರಣವ ಭವವಾರಿಧಿಯ ದಾಂಟಿಪುದು
ಸಾಯೆಂಬ ಪ್ರಣವ ಸರ್ವಜ್ಞನೆಂದೆನಿಸುವದು
ವಾಯೆಂಬ ಪ್ರಣವ ವಾಚಾತೀತ ನಿಗಮಕ್ಕೆ ನಿಲುಕದಪ್ರಮಾಣ
ಶಾಯೆಂಬ ಪ್ರಣವ ಸದ್ಭಕ್ತಿಯನು ತೋಱುವದು
ರಾಯೆಂಬ ಪ್ರಣವ ನಿಜ [ಗುರು] ಪದದೊಳೊಂದಿಪುದು
ದಾಯದಿಂ ಬಸವೇಶ್ವರಮೃತನಾಮವನು ಸ್ಮರಿಸಿ ಕೃತಕೃತ್ಯರಹರು || ೧ ||

ಚ ಕ ನಕಾರಗಳೆಂಬ ದ್ವಿಪ್ರಣವ ವಿಧಿಸವೆದ
ಲಿಖಿತವನು ತೊಡೆದು ಗುರುಲಿಖಿತವೆಂದೆನಿಸುವದು
ಬ ಸಕಾರಗಳೆಂಬ ದ್ವಿಪ್ರಣವ ನಿತ್ಯ ಗುರುಲಿಂಗ ಜಂಗಮವೆನಿಪುದು
ನ ಕ ಗಕಾರಗಳೆಂಬ ದ್ವಿಪ್ರಣವ ಪಾ [ದು]ದಕ
ಸುಖಪ್ರಸಾದವನಿತ್ತು ಸಲಹುವದು ನಂಬಿರಲು
ಮುಕುರವೇತಕೆ ಕರದ ಕಂಕಣ ನೋಡೆ ಚೆನ್ನಬಸವಣ್ಣ
ಪರಬ್ರಹ್ಮದೊಡಲು || ೨ ||

ಆಯೆಂಬ ಪ್ರಣವದನವರತ ಭಕ್ತಿಯ ಬೀಜ
ಊಯೆಂಬ ಪ್ರಣವ ಜ್ಞಾನದವೃಕ್ಷದಂಕುರವು
ಮಾಯೆಂಬ ಪ್ರಣವ ವೈರಾಗ್ಯ ಮುಕ್ತಿಯ ಬೆಳೆಯ ಫಳರಸವ
ತೊಟ್ಟಿಡುವುದು
ಪ್ರಾಯೆಂಬ ಪ್ರಣವ ಪರಲೋಕ ಸೋಪಾನವದು
ಭೂಯೆಂಬ ಪ್ರಣವ ಭೂತೇಶನೊಡಗೂಡುವುದು
ಮಾಯಮದಲತೆ ಲವಿತ್ರನಲ್ಲಮಪ್ರಭುನಾಮಸ್ಮರಣೆ
ನಿಜಪದವೀವುದು || ೩ ||

ಚೆನ್ನಬಸವೇಶ ದಂಡಾಧೀಶ ಪ್ರಭುರಾಯ
ಉನ್ನತದ ರೇಣುಕಾಚಾರ್ಯ ಮಡಿವಾಳಯ್ಯ
ಕಿನ್ನರಯ್ಯನು ಸಿದ್ಧರಾಮೇಶ ಹಡಪದಪ್ಪಣ್ಣ ಸೊಡ್ಡಳದೇವರು
ಇನ್ನಿವರು ಮುಖ್ಯರಾದೇಳುನೂರೆಪ್ಪತ್ತು
ಸನ್ನುತರ ಚರಣಮಂ ನೆನಹಿನಲಿ ನೆಲೆಗೊಂಡು
ಜನ್ಮ ಜರೆ ಮರಣ ಭವ ಕಾಲ ಕಾಮರ ಗೆಲಿದ ಶರಣರಿಗೆ
ಶರಣೆನ್ನಿರೊ ॥ ೪ ॥

ಇಂತಪ್ಪ ಷೋಡಶರು ತೇರಸರು ದಶಗಣರು
ಮುಂತಾಗಿ ಅಱುವತ್ತುಮೂವರಂಘ್ರಿಯ ಕರುಣ
ಸಂತತ ಸಲಿಲದೊಳಗಾಳುತ್ತ ಪಂಚಾಕ್ಷರೋಂಕಾರ ಪ್ರಣವ ಮಂತ್ರ[ವ]
ಮಂತ್ರಸ್ಮರಣೆಗಳಿಂದ ಭಸ್ಮಾಕ್ಷಮಾಲೆಗಳ
ನಾಂತು ಸರ್ವಾಂಗದೊಳು ಧರಿಸುತ್ತ ಕರರುಹದ
ಶಾಂತ ಸದ್ಗುರುವರನ ತ್ರಿಕಾಲದೊಳು ಭಜಿಸೆ
ಶಾಂತಮುಕ್ತಿಯನೀವನು ॥ ೫ ॥



೫೮

ಏತರ ಸಂಸಾರ ಸುಡು ಸುಡು [ಏ] ತರ ಮಮಕಾರ
ಮಾತೆ ಪಿತರುಂ ಮಕ್ಕಳು ಜೊತೆಗೆ ಬಂದ ರೀತಿಯ ತಿಳಿ
ಏತರ ಸಂಸಾರ... ॥ ಪಲ್ಲ ॥

ಅನುದಿನದಲಿ ನೀ ಧನದಾಸೆಗೆ ಬಂದು
ನೆನಸಿ ನೆನಸಿ ನೀ ಬಡವಾಗುವೆ ಮನುಜ
ವನಿತೆ[ಯ] ರ ಸುಖವನು ಮಿಗೆ ಮರೆಯದೆ
ಕನಸಿನೊಳಗೆ ಕಳವಳಿಸುವೆ ಮನುಜ
ಕನಸಿನಂತೆ ಒಮ್ಮೆ ಖಂಡಿಸಿ ಧ್ಯಾನದಿ
ಚಿನ್ಮಯಪ್ರಿಯ ನಿಜವೆಂದು ತಿಳಿಯೈ
ಏತರ ಸಂಸಾರ...... ॥ ೧ ॥

ತತ್ತ್ವಜ್ಞಾನವನರಿಯದೆ [ಮ] ರದು
ಸುತ್ತಿ ಬರುವೆ ಭವಭವದಲ್ಲಿ

ಮರ್ತ್ಯಭೋಗವನರಿಯದಿರ್ದಡೆ
ವಿರಕ್ತನಾಗು ನೀನರ್ಥಿಯಲಿ
ಕರ್ತು ಗುರುವನು ಚಿತ್ತದಿ ಧ್ಯಾನಿಸಿ
ನಿತ್ಯನಾಗು ನೀ ಮುಕ್ತಿಯ ಪಡೆಯುತ ॥ ೨ ॥

ಜಾತಿ ಗೋತ್ರವೆಂಬ ಜಂಜಾಟಕ್ಕೆ ಸಿಲ್ಕಿ
ಸುತ ತನುಜೆಯೆಂದು ವಾದಿಸುವೆ
ಕಾತರವೆಂಬ ಕರ್ಮದೊಳಗೆ ನೀ
ಕೋತಿಯಂತೆ ಕುಣಿಕುಣಿದಾಡುವೆ
ಭೂತಳದೊಳು ನಮ್ಮ ಕರಸ್ಥಲದೈಯ್ಯನ
ರೀತಿಯ ತಿಳಿಯದೆ ನಿತ್ಯತ್ವನಾಗದೆ
ಏತರ ಸಂಸಾರ....... ॥ ೩ ॥

೩೯

ಬಸವ [ಬಸವ]ಯೆನ್ನಿರೊ
ಬಸವ ಬಸವಯೆನ್ನಿರೊ
ಬಸವಯೆನಲು ಬಂದಮಾರಿ ದೆಸೆಗೆ ಬಿಟ್ಟು ಓಡುವಾಗಲು ॥ ಪಲ್ಲ ॥

ಶರಧಿಯಲ್ಲಿ ಮುಳುಗುವಾಗ
ಶರಿರಕುರಗ ಸುತ್ತುವಾಗ
ಹರಿಯು ಕರಿಯು ಬೆನ್ನನಟ್ಟಿ ಕಾಡುವಾಗಲು
ದೊರೆಯು ಜುಲುಮೆ ಮಾಡುವಾಗ
ಮರತು ಮಾರ್ಗ ತಪ್ಪುವಾಗ
ದುರುಳ ಚೋರರುಗಳು ಕೊರಳ ಕೊಯ್ಯುವಾಗಲು ॥ ೧ ॥

ಸಾಲ ಬಾರದೊತ್ತಿದಾಗ
ಕಾಲದೂತರೆಳೆಯುವಾಗ
[ಬಾ] ಳ ಬಗೆಯ ರೋಗ ಹತ್ತಿ ಕಾಡುವಾಗಲು
ಕಾಲು ಜಾರಿ ಬೀಳುವಾಗ
ಕೋಳು ಸಿಲ್ಕಿ ಹೋಗುವಾಗ
ಮಾಳಿಗೇಯು ಮುರಿದು ಮೇಲೆ ಬೀಳುವಾಗಲು ॥ ೨ ॥

ಅರ್ಥಪ್ರಾಣವಾಭಿಮಾನ
ವ್ಯರ್ಥವಾಗಿ ಹೋಗುವಾಗ
ಕೊರ್ತೆಕುಂದು ನಿಂದೆ ಬಂದು ಕಾಡುವಾಗಲು
ಕರ್ತುಗುರುವು ಕರುಣಿಸಿದ್ದ
ಕರಸ್ಥಲದ ಈಶ್ವರನ್ನ
ಮರದು ವ್ಯರ್ಥವಾಗಿ ಭವದಿ ತೊಳಲಿ ಬಳಲಬ್ಯಾಡಿರೂ
[ಬಸವ] ಬಸವಯೆನ್ನಿರೊ ॥ ೩ ॥

□ □

೬೦

ಕಂಡೆ ಕಂಡೆ ಮಾಜಬೇಡ ಹೇಳು ಹೇಳು ಎನ್ನಕೊಡೆ
ಪುಂಡರೀಕ ಪೊಸಬಾಣ ಕಲೆದೋರುತಿದೇಕೋ ? ॥ ಪಲ್ಲ ॥

ಅಧರದೊಳು ಪೊಸರನ್ನ ಹದದೋರುತಿದೆ ನಿನ್ನ
ಎದೆ ಕುರುಳು ನಳಿತೋಳು ಚಂದಳಿ [ದಿ]ದೇನಮ್ಮ ?
ಚದುರೆ ವನಕೆ ಪೋಗಲಾಗ ತರುಳೆಯೆ ತಾಗಿ
ಅಧರಪಣ್ಣೆಂದೆ ಗಿಳಿ ಸವಿನೋಡಿತಮ್ಮ ॥ ೧ ॥

ಮಂದಗಮನೆ ರಾಜದುಡಿಗೆ ಸಡಿಲಿದವೇ[ಕೆ]ನಿನ್ನ ನೊಸಲು
ಚಂದನದ ಸೃತ ಕಲಕಿದ ಪರಿಯಿದೇನಮ್ಮ?
ಕಂದ ಬಂದು ನೆರಿವಿಡಿದು ಸೀರೆ ಸೆಳೆದು
ಕಂದನು [ರೆ] ಮುಂಡಾಡಿತಿನಿಸಿದನು ಕಂದ ಕಲಕಿತಮ್ಮ ॥ ೨ ॥

ನಡೆಮುಡಿಯು ಸಡಲಿದವು ಉಗುರುತಿದೆ ಪಚ್ಚೋಲೆ
ಕಡೆಗಣ್ಣಳಲಿ ಕೆಂಪುವಿದು ಛೋದ್ಯಯಾಕಮ್ಮಿ ?
ನಡೆವ  ಮಾರ್ಬ[ಲ]ಕಂಜಿ ಮುಡಿಸಡಲಿ ಮುಖ ಕಂದಿ
ಕಡುಬಿಸಿಲಿನೊಳ್ಕಣ್ಣು ಕೆಂಪಾದವಮ್ಮ ॥ ೩ ॥

ಕುಂಭಕುಚಗಳ ಮೇಲೆ ಬಾಲಚಂದ್ರನೇ[ತ]ಕೆ ಬಂದ
ಅಂಬುಜಾಕ್ಷಿ ನಿನ್ನೆದೆಯ ಕಿರುಬೆವರಿದೇನಮ್ಮಿ ?
ಮುಂಬರಿವ ರವಿಗಂಜಿ ಇಂಬುಗೊಡೆ ಚಂದ್ರಮನ
ಅಂಬುಜಸಖನ ಸೆಕೆಗೆ ಪನ್ನೀರ್ಮಿಂದೆನಮ್ಮ ॥ ೪ ॥

ನನ್ನ ಪುಣ್ಯ ನನ್ನ ಕೈಯ್ಯ ನಿನ್ನ ಪುಣ್ಯ ನಿನ್ನ ಕೈಯ್ಯ
ನನ್ನ ನೆನೆದು ನಿನ್ನ ನೆರದನವ ಮೋಹನಾಂಗಿ
ಕನ್ನಡ ಸುಜಾಣ ಕರಿಬಸವ ಹೊಸಹಳ್ಳಿ ವೀರ
ನಿನ್ನ ಕಂಡರವ ಬಿಡ ನಾ ಬಲ್ಲೆನಮ್ಮಿ ॥ ೫ ॥



೬೧

ಶುಭ್ರವರ್ಣದ ಹೂವು ಸೂಕ್ಷ್ಮದ ಹೂವು
ಅರಳಳಿಯದ ಹೂವು ಅಳಿ ತುಡುಕದ ಹೂವು ॥ ಪಲ್ಲ ॥

ಬೆಟ್ಟದೊಳಗೆ ಹುಟ್ಟಿ ಮುಕ್ತಿವಡೆದಿಹ ಹೂವು
ಬಟ್ಟ ಚಂದ್ರನ ಕಿರಣದಂತಾದ ಹೂವು
ಸೃಷ್ಟಿಪತಿ ಕೀರ್ತಿಸುವ ಪೂರ್ಣದ ಹೂವು
ಪಟ್ಟಗಟ್ಟಿರಲು ರುದ್ರಪದವಾದ ಹೂವು ॥ ೧ ॥

ತಾವರೆವರ್ಣದ ಹೂವು ತಣ್ಣೀರ ಮುಟ್ಟದ ಹೂವು
ಕಾಮನಬಾಣಕ್ಕೆ ಗುರಿಯಾಗದ ಹೂವು
ದೇವಿಯರ ಮುಡಿಯ ಭೋಗಕ್ಕೆ ಸುಖಕ್ಕೆ ಬಾರದ ಹೂವು
ಕೋವಿದರ ಕೊನಬಿಗೆ ಬಾರದ ಹೂವು ॥ ೨ ॥

ಹಸ್ತಸೋಂಕಲು ಹತ್ತೆಂಟುವರ್ನದ ಹೂವು
ಹೊತ್ತಾರೆ ಬೈಗೆ ಶಿವಗೆ ಅರ್ಪಿಸುವ ಹೂವು
ಮೃತ್ಯು ಮಾರಿಯ ಶನಿಯನೊತ್ತರಿಸುತಿಹ ಹೂವು
ಸತ್ಯ ಶರಣರ ಸೌಭಾಗ್ಯದ ಹೂವು ॥ ೩ ॥

ಉರಿಗಂಜದ ಹೂವು ಅರದುತೀಡುವ ಹೂವು
ಸಿರಿಯಾಳಸೆಟ್ಟಿಯ ಪೆಸರಿನ ಹೂವು
ಗುರುದ್ರೋಹಿಗಳ ತಿಕ್ಕಿ ತಿರುಗಿಸುತಿಹ ಹೂವು
ಪುರಮೂರಗೆದ್ದಗರ್ಪಿತವಾದ ಹೂವು ॥ ೪ ॥

ರಜತಾದ್ರಿಕಿರಣದಂತೆ ತೇಜಕುಂದದ ಹೂವು
ಭಜಕರ ಬೀಜ ವೃಕ್ಷದ ಹೂವು
ತ್ರಿಜಗಕಧಿಕ ಕಲ್ಕೋಡಮಲ್ಲೇಶನಂ-
ಬುಜುಪಾದಕರ್ಪಿತವಾದಂಥ ಹೂವು ॥ ೫ ॥



೬೨

ಮುನ್ನ ಮಾಡಿದ ಪಾದಪೂಜಾಫಲದಿಂದ [ತಾ] ಪಾದಪೂಜಾಫಲದಿಂದ
ಚೆನ್ನ ಕಂಬಳಿದೇವ ಗುರು ಬಂದ ಮನಿಗೆ ॥ ಪಲ್ಲ ॥
[ಶರೀರದೊಳೆಸೆ]ವ ಭೂತಿ ಧರಿಸಿ ರುದ್ರಾಕ್ಷಿ ತಾ
ಧರಿಸಿ ರುದ್ರಾಕ್ಷಿಸರವ ಕೊರಲೊಳು ತಾವು
ಮೆರಸುತಲಿರಿಸಿ ಸಿರದಲ್ಲಿ ಕಿರುಜೆಡೆಯು
ಪರಿಶೋಭಿಸುತ [ಲಿ] ತಾ ಪರಿಶೋಭಿಸುತಲಿ
ಪರಮಾತ್ಮ ಕಂಬಳೀಶ ಬಂದ ಮನಿಗೆ ॥ ೧ ॥

ಪಾವಿಗೆಯ ಮೆಟ್ಟಿ ನೀರ್ಗಾವಿ ವಸ್ತ್ರವನು ನೀ-
ರ್ಗಾವಿ ವಸ್ತ್ರವನುಟ್ಟ[ನು]ವಿನಿಂ ಪೊದೆದು ಪ್ರಣ
ಮಾನು ಕಂಬಳಿಯ ವಿವರಿಸಿ ಪ್ರಣಮಾನು
ಭಾವ ಮಾಡುತಲಿ ಅನುಭಾವ ಮಾಡುತಲಿ
ಭಾವಬ್ರಹ್ಮದ ಕಂಬಳೀಶ್ವರ ಬಂದ ಮನಿಗೆ ॥ ೨ ॥

ಬಸವಲಿಂಗನ [ತಾನು] ಉಸುರುತ ನಿತ್ಯ ತಾ-
ನುಸುರುತ ನಿತ್ಯ ಷ[ಡಕ್ಷರ] ದ ಜಪಮಾಲೆ [ವಿ]-
ಲಸಿತದಿ ಪಿಡಿದು ಅಸಮಾಕ್ಷ ಮಂತ್ರವ
ವಶವಾಗಿ ನಿಲಿಸಿ ತನ್ನೊಶವಾಗಿ ನಿಲಿಸಿ
ವಸುಧೆಪಾಲನು ಕಂಬಳೀಶ್ವರ ಬಂದ ಮನಿಗೆ ॥ ೩ ॥

ಅಡಿಗಡಿಗೆ ಶಿವತತ್ವ ಬೆಡಗ ಪೇಳುತಲಿ
ಬೆಡಗ ಪೇಳುತಲಿ ನುಡಿನುಡಿಗಹಂಕಾರದೊಡಲ ಬೆಟ್ಟುತಲಿ
ನಡೆ ನುಡಿಯು ಒಂದಾಗಿ ದೃಢ ವೀರಶೈವ ತಾ ದೃಢ ವೀರಶೈವದೆ
ನ್ನೊಡೆಯ [ಕಂ] ಬಳಿದೇವ ಮೃಡ ಬಂದ ಮನಿಗೆ ॥ ೪ ॥

ಇಂದು ನಾಳಿಗೆಯೆಂಬ ಸಂದೇಹವಳಿದು ಶಿವ
ಸಂದೇಹವಳಿದು ಬಂದುದೆಲ್ಲವ ಭಕ್ತ
ವೃಂದಕರ್ಪಿಸುತ ಬಂದ ಸೋಮಾರಾಧ್ಯ
ರಿಂದ ಪೂಜೆಗೊಳುತ ಅವರಿಂದ ಪೂಜೆಗೊಳುವ
ಕಂದ ಕಂಬಳಿದೇ[ವ] ಬಂದ ಮನಿಗೆ ॥ ೫ ॥

☐ ☐

## ೬೩

ಕೋಣೆಯೊಳಗಿರುತಿರ್ಪ ಕಾಣಬಾರದ ಮುತ್ತ
ಪೋಣಿಸಾದರದಿ ಜಾಣ [ನೀ] ಮುತ್ತ
ಕೋಣೆಯೊಳಗಿರುತಿರ್ಪ... ‖ ಪಲ್ಲ ‖

ನಿರ್ಜರದ ಬಾಗಿಲೊಂಬತ್ತ ಮುದ್ರೆಯ ಮಾಡಿ
ಪ್ರಜ್ವಲಿತ ಹೊಳವ ಮಹಬೆಳಗಿನೊಳಗೆ
ಉಜ್ವಲಿಸಿ ಉರವಣಿಸಿ ರಾಜ್ಯದೊಳು ಥಳಥಳಿಸಿ
ವೆಜ್ಜವಿಲ್ಲದ ಮುತ್ತು ಹೆಜ್ಜೆಯೊಳಗಿಹುದು ‖ ೧ ‖

ಧರೆ ಜಲ ನೆಲ ವಾಯು ಆಕಾಶಗಳು ಬಲಿದು
ಪುರಮೂರು ಮಂಟಪಗಳೆರಡರ ನಡುವೆ
ಮೆರೆವ ಪ್ರಣಮದ ಪೀಠ ಪುಂಡರಿಕಾಗ್ರದೊಳ
ಗಿರುವ ಚಿನ್ಮಯಮೂರ್ತಿ ಉನ್ಮನಿಯ ಕೊನೆಯ ‖ ೨ ‖

ಇರುವೆಕಾಲಿನ ಪರಿಯೊಳಿರುವ ಐಕ್ಯ ಸ್ಥಲವ
ನರಿದು ಮೈಮರೆದು ತಾನಲ್ಲವೆನಿಸಿ
ಚರಮೂರ್ತಿ ಕೆಂಪುಗಂಬಳಿ ಬಸವಲಿಂಗೇಶ
ಒರೆದು ಗುರು ಗುಪ್ತದಿಂ ತೋರಿಸಿದ ಪರಿಯ ‖ ೩ ‖

## ೬೪

ಗುರುಕರುಣವಾದವರ ಪರಿಯ ಕೇಳೆಲೆ ಕಾಂತೆ
ಇರುವರವರವರಂತೆ ಗುರುತರಿಯದಂತೆ ‖ ಪಲ್ಲ ‖

ಮೀಸಲಳಿಯದ ಮುಂಚೆ ನಿಂದು ಸುಜ್ಞಾನದಿಂ
ಸೂಸಲೀಯದ ಮನದ ಸುಳಿಗಾಳಿಯ
ತ್ರಾಸಿನೊಳು ತೂಗಿದರೆ ವಾಸನೆನಿತಿರದಂತೆ
ಸೋಸಿ ನೋಡಿದರವ[ರೊ]ಳಹೊರಗೇಕವಂತೆ ‖ ೧ ‖

ಆವಕುಲದವರಾದಡೇನು ಅನುಮಾನಿಸದೆ
ಭಾವ ದೃಢಮದಾಗೆ ಬೇಗದಿಂದ
ತಾವೆ ದಯಮಾಡಿ ಮಹಬೆಳಗದೋರುವರಂತೆ
ಕಾವಳದ ಮನೆಗೆ ದೀವಿಗೆಯನಿಟ್ಟಂತೆ ‖ ೨ ‖

ಜಪ ತಪ ಧ್ಯಾನ ಮೌನಾದಿಗಳು ಮೊದಲಾದ
ವಿಪರೀತದಾ ನೇಮ ನಿತ್ಯಗಳೆಂಬುವ
ಉಪವಾಸ ವನವಾಸವೆಲ್ಲ ನಿಷ್ಫಲವಂತೆ
ಗುಪಿತ ಮುಕ್ತಿಯ ಪಡೆವರಪರೂಪವಂತೆ ॥ ೩ ॥

ಇಹ ಪರಗಳೆಂಬುಭಯ ಸಂದೋಹ ಸಂಧಿಯೊಳ–
ಗಿಹ ಬಹಿರಂಗವೇ ಬರಿಯ ತರ್ಕ
ಸ್ಪೃಹೆಗಳನುಗ್ಗೈವಲ್ಲಿ ಸುಳುಹುದೋರರಂತೆ
ಸಹಜವಾದಲ್ಲಿ ಸೋಜಾಗಿರುವರಂತೆ ॥ ೪ ॥

ಶುದ್ಧ ವಿಶುದ್ಧಿಯಲ್ಲಿ ಶರಣ ತಾನಾಗಿರ್ದು
ಗದ್ದಲಿಸಿ ಸಿದ್ಧಾಗ್ನಿಗಾಗಲಡರ್ದು
ಸದ್ಯ ಷಡಾಂಗುಲವನೊತ್ತೈಕ್ಯವಾದಂತೆ
ಶಬ್ದಮುಗ್ಧರಾಗೈದಿರುವರಂತೆ ॥ ೫ ॥

ಆಧಾರದಲ್ಲಿ ಭಕ್ತಿ ಸ್ಥಲವನಂಕುರಿಸಿ
ಸ್ವಾಧಿಷ್ಠಾನದಲ್ಲಿ ಮಾಹೇಶನೆನಿಸಿ
ಯ್ಯೆದೆ ಮಣಿಪೂರಕದಿ ಸು ಪ್ರಸಾದಿಯಂತೆ
ಭೇದವಿಲ್ಲದೆ ಅನಾಹತ ಪ್ರಾಣ [ಲಿಂಗಿ]ಯಂತೆ ॥ ೬ ॥

ಅಪ್ರತಿಮವಾದ ಹದಿನಾರು ಅಂಗುಲಿಯೊಳಗೆ
ಸುಪ್ರಕಾಶದ ಪ್ರಣಮ ಘೋಷ ಕುಗ್ಗಿ
ಸೊಪ್ಪಡಗಿ ಸೊಂಪಳಿದು ತೆಪ್ಪಗಾಗುವ[ರ]ಂತೆ
ತಪ್ಪದಾಕ್ಷಣದಿ ಎಚ್ಚರಾಗುವರಂತೆ ॥ ೭ ॥

ಸರ್ವ ಸುಖ ಸಂಪತ್ತು ಸಂದೋಹದೊಳಗಿರ್ದು
ಗರ್ವವನು ಪರಿಹರಿಸಿ ಘನಮಾರ್ಗದಿ
ಪೂರ್ವಾಶ್ರಯವಳಿದು ಪುನರ್ಜಾತರೆನಿಸುವರಂತೆ
ಓರ್ವರರಿಯದ ಹಾಗೆ ಇರುತಿರುವರಂತೆ ॥ ೮ ॥

ಕಂಪಸೆವ ಕರುಣರಸ ಪೂರ್ತಿ ಚರಗುರುಮೂರ್ತಿ
ಕೆಂಪುಗಂಬಳಿ ಬಸವಲಿಂಗೇಶನ

ಕೆಂಪುಪಾದಕೆ ಪದಕದಂತೆ ಒಪ್ಪುವರಂತೆ
ಗುಂಪಾಗಿ ಗುರುಪುತ್ರರೊಂದಾಗಿ ಮತ್ತೆ
ಗುರುಕರುಣವಾದವರ...... ॥ ೪ ॥

೬೫

ನೋಡ ನೋಡಲು ಬಯುಲಾಯ್ತು ಆ–
ರೂಢ ಬಸವಲಿಂಗ ಅಂಗದೊಳಾಯ್ತು
ನೋಡ ನೋಡಲು ಬಯಲಾಯ್ತು ॥ ಪಲ್ಲ ॥

ಆರುವರ್ಣದ ವೃಕ್ಷ[ವ]ನೇರಿ ಆ
ರಾರು ಮೂವತ್ತಾರು ತತ್ವಮೀರಿ
ಆರುಮೂ[ರೊ]ಂಬತ್ತು ಸೇರಿ ಅಲ್ಲಿ
ಸಾರ ಸುಖವ ತೋರಿ ಮೇಲಕ್ಕೆ ಹಾರಿ
ನೋಡ ನೋಡಲು ಬಯಲಾಯ್ತು ॥ ೧ ॥

ಅರಿವೆಂಬ ಅರಮನೆಯೊಳಗೆ ಪಂಚ–
ಪುರುಷರ ಗಿರಿಯ ತೋರಿಸಿ ಸರ್ವರೊಳಗೆ
ಬೆರಗು ನಿಬ್ಬೆರಗು [ದೋರೀಗ] ನಿಜ
ಹರಣವಾಯಿತ್ತು ನಿಜ ಹರಪುರದೊಳಗೆ
ನೋಡ ನೋಡುಲು ಬಯಲಾಯ್ತು ॥ ೨ ॥

ಲೋಕದೊಳಧಿಕ ಬಾಗುಳಿಯ [ಸೋ] ಮ
ಶೇಖರ [ಭೂಪನ] ಭಕ್ತಿಯ ಸ[ವಿ]ಯ
ಸ್ವೀಕರಿಸಿ ಕೆಂಪುಗಂಬಳಿಯ ಪಿ
ನಾಕಿ ಬಸವಲಿಂಗನೆನಿಸಿದ ಪರಿಯ
ನೋಡ ನೋಡಲು ಬಯಲಾಯ್ತು ॥ ೩ ॥

೬೬

ಹ್ಯಾಂಗೆ ಹೋಗಲಪ್ಪ ಊರ ದಾರಿ ಎನಗೆ ತಿಳಿಯದಲ್ಲೇ
ಹೋಗ ದೂರ ದಾರಿಯೆತ್ತಲಾಗಿ ಇರುವುದೇ ? ॥ ಪಲ್ಲ ॥

ತಲೆಯ ತುಂಬ ಬಳಗವೈನಗೆ
ಹಲವು ಮಂದಿ ಇರಲಿಕವರು
ನೆಲೆಯದೋರರೊಬ್ಬರಾದರೇನ ಪೇಳ್ವೆನು
ಬಲೆಯ ಹರಿದು ಕೊಂಡು ಪಕ್ಷಿ
ಬಲೆಯ [ಸಾರದಂ] ತೆಯೆಂತು
ಕುಲವನಳಿದು ಛಲವನರಿದು ಹೋದೆನೂರಿಗೆ ॥ ೧ ॥

ಆರುಯಿಲ್ಲದೂರಿನೊಳಗೆ
ಧೀರನೊಬ್ಬ ನಾರಿ ಆವನ
ಸೇರಿ ಸುಖವ ಪಡೆದೆನೆಂದು ಹೊಂದಲಾತನ
ಆರು ಮೂರು ಊರಿಗೆಲ್ಲ
ತೋರಿ ಕಿಚ್ಚನಿಕ್ಕಿ ಮೀರಿ
ಸೂ [ರೆ] ಮಾಡಿ ಸುಮ್ಮನಾದ ಸುಳುಹುದೋರದೆ ॥ ೨ ॥

ಹೋದ ಬಳಿಕ ತಿರುಗಿ ಬಾರ–
ದಾದ ಊರಿನೊಳಗೆ ಇರಲು
ಸಾಧು ಕೆಂಪುಗಂಬಳೀಯ ಬಸವಲಿಂಗ[ನ]
ಪಾದವನ್ನು ಭಜಿಸಿ [ಜಪಿಸಿ]
ಭ[ವದ]ಬೇರ ಕಿತ್ತು ಸುತ್ತ
ಆದಿ ಮಧ್ಯದಂತ್ಯಗ[ಳೆದ ವ]ಸ್ತು ನಾನಾದೆ ॥ ೩ ॥

❑ ❑

೬೭

ನಾರಿರನ್ನಳೆ ನೀನೀಗ ಆತನ ಕರ–
ತಾರೆ ಕಾಮಿನಿ ನೀ ಬೇಗ
ವಾರಿಜಗಂಧಿ ವೈಯ್ಯಾರಿ ಬಸವೇಶನ
ತೋರಿಸೆನಗೆ ಮದನಾರಿ ಮೋಹನಕಾರಿ ॥ ಪಲ್ಲ ॥

ಪರಮಪಾವನಮೂರ್ತಿಯು ತಾನುತಾನಾದ
ವರ ವೃಷಭೇಂದ್ರ ತಾನೆ
ಹರನ ನಿರೂಪದಿ ಧರೆಯ ಪಾವನಕೆಂದು
ಇರದೆ ಪುಟ್ಟಿದ ಭಕ್ತತರುವೆನಿಸಿದಾತನ ॥ ೧ ॥

ಕಲ್ಯಾಣಪುರದಿ ನಿಂದು ಭಕ್ತಗಣಂಗ–
ಳೆಲ್ಲರು ನೆರದು ಬಂದು
ಬಲ್ಲಿದ ಗುರುಲಿಂಗಜಂಗಮಾರ್ಚನೆಯನು
ನಿಲ್ಲದೆ ಮಾಡುತವುಲ್ಲಾಸದಿಂದಿಹನ ‖ ೨ ‖

ಪೊಡವಿಪ ಬಿಜ್ಜಳಗೆ ಪವಾಡವ ಬಿಡದೆ ತೋರುತಲಿರ್ದು
ಮೃಡಶರಣರು ಕೂಡಿ ನಡದು ಸಂಗಮನೊಳು
ಅಡಗಿದವ[ರ]ನು ಭಕ್ತರೆಡೆಯ ನೋಡುವೆಂಬನ ? ‖ ೩ ‖

ಧರೆಯೊಳು ಚರಿಸುತಲಿ ಕೋಟನಕೇರಿ–
ಯಿರವ ನೋಡುವೆನೆಂದು
ಹಿರಿಯಮಠದೊಳಿಪ್ಪ ವರ ವೀರಭದ್ರನ
ಪರಮ ಭಕ್ತಿಯೊಳಿಪ್ಪ ಹರನನವತಾರನ ‖ ೪ ‖

ಹಿರಿದು ದೃಷ್ಟಾಂತರವ [ಕೊಟ್ಟೂರೊಳಂದು]
ಮೆರೆದು ತೋರುತಲಿರ್ದು [ದ]
ಧರೆಯ ಭಕ್ತರು ಕೇಳಿ ನೆರದು ಭಜಿಸುತಿರೆ
ವರ ಮುಕ್ತಿಯನೆ ಕೊಟ್ಟು ಮೆರೆವ ದೇವೇಶನ ‖ ೫ ‖

ಹಿಂದೆ ಯೋಗಾನಂದದಿ ಇರುವ ಎಡೆ–
ಗಂದನಿಮಿಷರು ಬೇಗ
ಬಂದು ಸ್ತುತಿಸೆ ಕೃಪೆಯಿಂದೆ ವರವನಿತ್ತು
ಮುಂದೆ ಹರಪುರದೊಳ್ನಿಂದರಸಾಗೆಂದನ ‖ ೬ ‖

ಹರಪುರದೊಳಗೀರ್ವರು ತಮಗೆ ಚೆಲ್ವ
ವರ ಸುತನ [ನು] ಬಯಸಿ
ಗುರು ನಿಮ್ಮಡಿಗೆ ಬಂದು ಕರುಣಿಸು ಬೆಸಸೆನೆ
ಪರಮ ಪುರುಷನಿಷ್ಟಪದವಿತ್ತು ಪೊರೆದನ ‖ ೭ ‖

ಅನುಮಿಷ ತಾ ಜನಿಸಿ ಗುರುಮುಖದೆ
ಘನಲಿಂಗವನೆ ಧರಿಸಿ
ವಿನಯದಿ ಜಂಗಮಾರ್ಚನೆ ನಿಮ್ಮ ಪೂಜಿಸೆ
ಘನ ಪದವಿಯೆನಿತ್ತ ಚಿನುಮಯರೂಪನ ‖ ೮ ‖

ಇಂತು ಮಹಿಮೆಗಳನು ಮೆರದು ಕ್ರೀಗ–
ಳಾಂತು ತನುವ ತಳೆದು
ಸಂತತ ಬಸವಂತರಾಜನ ಭಕ್ತಿಯ
ತಿಂತಿಣಿಯೊಳಗೆ ಮೈಯ್ಯಾಂತು ರಾಜಿಸುವನ ॥ ೯ ॥

ಎಡ ಬಲದೊಳಗೊಪ್ಪುವ ಮುತ್ತು ಮಾಣಿಕ್ಯ–
ದೊಡವೆ ಸರ್ಪನಾಭರಣ
ಪಿಡಿದ ಸತ್ತಿಗೆ ಇಡಿಕಿರದ ಪಾವುಗೆಯಿಂದ
ಬಿಡದೆ ಮಂಚದೊಳಿಹ ಮೃಡನವತಾರನ ॥ ೧೦ ॥

ಅಷ್ಟದಿಕ್ಕಿನ ಪರಿಸೆ ಎಡೆವಿಡದೆ
ಮುಟ್ಟಿ ಆರಾಧಿಸಲು
ದೃಷ್ಟಿ ಮೂರನು ದಯವಿಟ್ಟು ಕರುಣದೊಳ–
ಭೀಷ್ಟವ ಕೊಟ್ಟು ಸಂತುಷ್ಟರ ಮಾಳ್ಪನ ॥ ೧೧ ॥

ಧರೆಗೆ ಸುಕ್ಷೇತ್ರವೆಂದು ರಾಜಿಸುತಿಹ
ಮೆರೆವ ಶಿಖಾಪುರದಿ
ಹಿರಿಯಮಠಕೆ ಪಟ್ಟಗುರು ಚೆನ್ನಬಸವನ
ಕರಜಾತ ಮರಿ ಚೆನ್ನಬಸವಗೊರವನಿತ್ತ ॥ ೧೨ ॥

ಸೃಷ್ಟಿಯೊಳಧಿಕವೆಂದು ಶಿಖಾಪುರದ
ಪಟ್ಟಣದೊಳಗೆ ನಿಂದು
ಮುಟ್ಟಿ ಪೂಜಿಸುವರ್ಗೆ ಇಷ್ಟಾರ್ಥ ಪದವಿಯ
ಕೊಟ್ಟು ರಕ್ಷಿಸುವಂಥ ಕೊಟ್ಟೂರ ಬಸವನ ॥ ೧೩ ॥

೬೮

ರಾಗ : ಭೌಳಿ

ಕರಗಡ್ಡಕಿಟಕಿಣಜಕಕುದಿ
ತರಗಡ್ಡಕಿಟಕಿಣಜಕಕುದಿರ ಗಡ್ಡಂಧಿಮಿಟಗಣ
ತರಿತತ್ತ ಜಕಕುಜಗಧಿಮಿತೋಂಗಿಟ
ಪರಿಕುತಕಧಿಮ್ಮಿಯೆಂಬ ಶಬ್ದಕ್ಕರರೆ
ವಿರತ ಕೊಟ್ಟೂರ ಬಸವೇಶನಾಡಿದನು ॥ ಪಲ್ಲ ॥

ಅಂದು ಗುಂಡೈಯ್ಯನಿದಿರೊಳು ಕುಣಿದವೊಲು ದೇವ
ಚಂದದಿಂ ಚಾರಮಗೆ ಕುಣಿದ ತೆರದಿ
ಇಂದೆಮಗೆ ಕರುಣಿಸಿದ ಭಕ್ತರ ಮುಖವ ನೋಡಿ
ಎಂದು ಮಿಗೆ ನಾಟ್ಯವಾಡಿದನು ಬಸವೇಶ ॥ ೧ ॥

ವೀಣೆ ಸರಮಂಡಲ ಉಪಾಂಗ ದಂಡಿಗೆ ಚಂಗು
ವೇಣು ಕಿನ್ನರಿ ಉರುಮೆ ಶ್ರುತಿಗಳಿಂದ
ಜಾಣ ನಾರದ ತುಂಬುರರು ಪಾಡೆ ಸ್ವರವರಿದು
ಏಣಾಂಕಧರ ಬಸವಲಿಂಗನಾಡಿದನು ॥ ೨ ॥

ರಂಗ ಪ್ರದೀಪ ಪ್ರತ್ಯಂಗ ಶ್ರೀರಂಗ ಶ್ರೀ
ಭಂಗಿ ಕೋಕಿಲಪ್ರಿಯ ತಾಳ[ಂ]ಗಳಿಂ
ತೊಂಗಿತಕಿಟಜೆಗ್ರಣ ಜೆಂತಣಂಗತಕಿಟದಿ ಎಂದು
ಶೃಂಗಾರದಿಂದಬುಜಭವ ತಾಳವೊತ್ತೆ ॥ ೩ ॥

ನಂದೀಶ ಮದ್ದಳೆಯ ದಿಂಧಿಕು ತದ್ಧಿಮಿಕು
ದಂದತರಗಡಾಂದತರಗಡಾಂದಮೆನಲು
ಮುಂದೆ ಹರಿದಾವುಜವ ಝುಕಕು ಝೇಂದ್ರಕುಮೆನಲು
ದಂದೆ ಗಿದಿಗಿದಿಗಿದಿಗಿದಿಗಿಟಯೆಂದರುಹನೊತ್ತೆ ॥ ೪ ॥

ಅಷ್ಟಾಂಗಯೋಗದಿಂ ತುಷ್ಟನಾದಮಲ ಶಿವ
ಶಿಷ್ಟನೆಂದೆನಿಸಿ ಮಿಗೆಯೊಪ್ಪುತಿರ್ಪ
ಕೊಟ್ಟೂರ ಬಸವಲಿಂಗೇಶನಾಡಿದ ಶರಣ
ರಿಷ್ಟವೀವುತ ಕಟಾಕ್ಷದಿ ಜನರ ನೋಡಿ ॥ ೫ ॥

❑ ❑

೬೪

ವಸುಧೆಯೊಳಗೆ ಚೆಲ್ವ ಬಸವಂತರಾಯನು
ಶಶಿಮುಖಿಯರ ಸವಿಯ ಬಲ್ಲನು ಸುಗುಣಮೋಹನ್ನ ॥ ಪಲ್ಲ ॥

ಪಾದತೀರ್ಥವೆ ತನಗೆ ಪ್ರಾಣ [ದಾ] ಧಾರವಾಗಿದ್ದು
ಕ್ರೋಧ [ವ] ನತಿಗಳೆದ ನಿಮ್ಮ ಕರುಣೆ ದಯಾಳ ॥ ೧ ॥

ಅಂಗದಲ್ಲತಿ ಚೆಲ್ವ ಶೃಂಗಾರವಾಗಿದ್ದ
ಲಿಂಗ ಜಂಗಮ ಪ್ರೇಮಿ ನಿಜವುಳ್ಳ ಭಕ್ತ ॥ ೨ ॥

ಭಕ್ತಿಗೆ ಬಸವೇಶ ಯುಕ್ತಿಗೆ ವಿಕ್ರಮ
ಸತ್ಯದಲಿ ಹರಿಶ್ಚಂದ್ರ ಬಸವರಾಜೇಂದ್ರ ॥ ೩ ॥

ಅಷ್ಟದಿಕ್ಕಿಗೆ ಮೆರವ ಕೊಟ್ಟೂರಯ್ಯನು ವರವ
ಮುಟ್ಟಿ ಪಾಲಿಸುವನೆಂದು ಬಸವಂತನಿರುವ ॥ ೫ ॥

೭೦

ರಾಗ ಪದ : ಹಿಂದೂಸ್ಥಾನಿ

ಸೋಮಚೂಡ ಮಾಂ ಪಾಹಿ ಸಾಂಬ ॥ ಪಲ್ಲ ॥

ಸೋಮಚೂಡ ಮೂರ್ತಿಯೆ ಕಪಾಲಿಯೆ
ವ್ಯೋಮಕೇಶನೆ ಕಾಮಿತ ಫಲದಾ ॥ ೧ ॥

ಸುಜನ ಮನೋಹರ ಗಜಚರ್ಮಾಂಬರ
ಯಜನಾಧೀಶನೆ ಗಜಮುಖ ತಾತ ॥ ೨ ॥

ಫಾಲನೇತ್ರ ಹರ ಶೂಲಪಾಣಿ ವರ
ನೀಲಕಂಠನೆ ನಿರ್ಮಲರೂಪ ॥ ೩ ॥

ನಾಗಭೂಷಣ ನಾಗಾರಿಗಮ[ನ] ನುತ
ಯೋಗಿಜನ ನುತ ತ್ಯಾಗಿ ಮಹೇಶ ॥ ೪ ॥

ಸೃಷ್ಟಿಯೊಳಧಿಕನೆ ಕೊಟ್ಟೂರೇಶನೆ
ಧಿಟ್ಟ ಬಾಗುಳಿವಂಶ[ದಿ]ಷ್ಟ ದಾಯಕನೆ ॥ ೫ ॥

☐ ☐

೭೧

ನಿರುಪಮ ಮಹಾಮಹಿಮ ಜಯ ಜಯ ತೇ
ಪರಶಿವ ಶಾಂತವೀರಯೋಗಿಂದ್ರ ಗುರು
ವರ ಮಹಾಮಹಿಮ ಜಯ ಜಯ ತೇ ॥ ಪಲ್ಲ ॥

ಸುಜನನುಪಾಲ ಭಜಕಸುಶೀಲ
ಕುಜನ[ರ] ಮೂಲ ಸಂಹಾರ ಶಶಿಧರ
ಮಹಾಮಹಿಮ ಜಯ ಜಯ ತೇ ॥ ೧ ॥

ಸುಂದರ ನಿರ್ಜರ ವೃಂದ ಸುಖಂಕರ
ಚಂದಿರ ಸಂಗಮವಟುಸ್ತುತಿ ಪಾತ್ರ ಸು
ಮಹಾಮಹಿಮ ಜಯ ಜಯ ತೇ ॥ ೨ ॥

ದರ್ಪಕಹರಣ ಸರ್ಪವಿಧಾರಣ
ಕೊಪ್ಪಳಗವಿಮಠವಾಸ ಚರವರ
ಮಹಾಮಹಿಮ ಜಯ ಜಯ ತೇ ॥ ೩ ॥

❑ ❑

೬೨

ಕುದುರಿಯ ಕಂಡೀರೇನೆ ಮಾನಸವೆಂಬ
ಕುದುರಿಯ ಕಂಡಿರೇನೆ
ಸದಮಲಗುರುವಿನ ಸದನದೊಳಿರುವಂಥ
ಕುದುರಿಯ ಕಂಡಿರೇನೆ ॥ ಪಲ್ಲ ॥

ಜ್ಞಾನ ಕ್ರೀಗಳೆ ಪಾವಡ ಇತ್ತರವೆನಿ
ಪಾನಂದವೆನಿಪ ಝುಲ್ಲಿ
ಧ್ಯಾನವೆನಿಪ ಜೀನು ಮವುನಾದ ಕಡಿವಾಣ
ತಾನು ತಾನಲ್ಲದಿನ್ನೇನನೆಣಿಸದಿಕಹ ॥ ೧ ॥

ಭವನಾಶವೆನಿಪ ಪೆಂಡ್ಯೆ ಶಿವಕೃಪೆ ತುರಾಯಿ
ತವೆ ಭಕ್ತಿ ಮೊಗರಂಬವು
ಶಿವಪಥವೆನಿಪ ಮಾರ್ಗದೊಳು ತಾನಡಿಯಿಟ್ಟು
ಸುವಿಲಾಸ ಗಮಕದಿಂದಲಿ ಚೆಡಿಸಾಡುವ ॥ ೨ ॥

ತ್ರಿವಿಧಪ್ರಸಾದವೆಂಬೀ ಕವಳಗೊಂಡು
ಶಿವರಸಾಮೃತವನೀಂಟಿ
ಶಿವೋಹಮೆಂದೆನಿಸುವ ಸ್ವರವನಿಕ್ಕುತ ಬೇಗ
ಬುವಿಯೊಳು ಕೋರಾಣ್ಯ ಶಿವಲಿಂಗನಾಳುವ ॥ ೩ ॥

## ೭೩

ತನ್ನಂತೆ ಮಾಡಿದನೆ  ಚೆನ್ನ ಶ್ರೀಗುರು
ತನ್ನಂತೆ ಮಾಡಿದನೆ
ತನ್ನಂತೆ ಮಾಡಿದ ಎನ್ನನೊಲಿಸಿಬೇಗ
ಉನ್ನತ ಸುಖವನು ಚೆನ್ನಾಗಿ ತೋರಿಸಿ ॥ ಪಲ್ಲ ॥

ಭೂತವೆರಡರೊಳಗೆ  ತಾ ತೋರಿಸುವ
ಆತ್ಮನ ಒಳಹೊರಗೆ
ಸಾತ್ವಿಕಾತಿಶಯದೊಳಿರ್ಪ ಜ್ಯೋತಿಯ ಕೊನೆಯೊಳೆ
ಪ್ರೀತಿಯಿಂ ಮಿನುಗುವ ಜ್ಯೋತಿ ಮುತ್ತನೆ ತೋರಿ ॥ ೧ ॥

ಧಾರುಣಿವ್ಯೆಡಬಲದಿ ಚಂದಿರ ಸೂರ್ಯ
ನೀರಿಗಿಳಿವುತೆ ರವಿ
ಮೇರೆಯೆನಿಸಿ ಮನವೇರೀಗ ಘನದತ್ತ
ಸಾರಿ ಸತ್ಯಲೋಕ ಸೂರೆಗೊಂಬುದ ತೋರಿ ॥ ೨ ॥

ನೀನೆ ನಿನ್ನೊಳು ನೋಡೆಂದು ಪೇಳಲು ಕೇಳಿ
ನಾನೆ ನನ್ನೊಲು ನೋಡಲು
ಆನಂದವೆನಿಪ ಚಿದ್ಭಾನುವಿನಂದದಿ
ತಾನೆತಾನಾದನು ಕೋರಾಣ್ಯ ಶಿವಲಿಂಗ ॥ ೩ ॥

## ೭೪

ದೇವ ತೋರಿದನೆನಗೆ ಶ್ರೀ ಗುರುರಾಯ
ತೋರಿ ತೋರಿದನೆನಗೆ
ಜೀವನ ಬುದ್ಧಿಯನಳಿದು ತನ್ನಯ ಪಾದ
ಸೇವೆಯೊಳಿರುವ ಮಹಾಘನದಾದಿಯ ॥ ಪಲ್ಲ ॥

ಆಸನ ಸ್ಥಿರನಾಗಿ  ಸಸಿನದ ಲೇಸಿನ ತನುವಾಗಿ
ಸೂಸದನಿಲನಾಗಿ ಪರಮ ಉಲ್ಲಾಸದ ಮನವಾಗಿ
ನಾಸಿಕಾಗ್ರದ ಕಾಶಿಯ ಕ್ಷೇತ್ರದ
ವಾಸದೊಳಿರುವಂಥ ಈಶನ ನೋಡೆಂದು ॥ ೧ ॥

ಪಿಂಡದೊಳಿರುವಂಥ ಮರವೆಯ ಖಂಡಿಸಿ ಕಡೆಮಾಡುತ
ಕುಂಡಲಿ ವಕ್ರವನು ಊರ್ಧ್ವಕ್ಕೆ ದಂಡದಂದದಿ ಮಾಡುತ
ಪಿಂಡ ಬ್ರಹ್ಮಾಂಡವು ಯೆಲ್ಲರೊಳಿರುವ ಅ–
ಖಂಡ ಚಿದದ್ವಯ ರೂಪನೊಳಾಡೆಂದು ॥ ೨ ॥

ಆರುಚಕ್ರಗಳಿಂದ ಮೇಲಕೆ ತೋರುವ ಅಜರಂಧ್ರ
ಏರಿ ನಮಿಸುಯೆಂದ ಅದರೊಳು ತೋರುವ ಪ್ರಭೆ ಚಂದ
ಕೋರಾಣ್ಯದ ಶಿವಲಿಂಗೇಶನೊಲಿ–
ದಾರೈದನುಭವಸುಧೆಯೊಳಗಿರಿಸಿದ ॥ ೩ ॥

☐ ☐

೭೫

ಅಗಜಾವರನ ಪಾಡಿ ಅರ್ಚಿಸಲರಿಯದ
ವಿಗಡಮನದೊಳಾಡಿ ಬಡವಾದೆನೊ ॥ ಪಲ್ಲ ॥

ದೃಢಭಕ್ತಿ ಜ್ಞಾನ ವೈರಾಗ್ಯವನೊಲ್ಲದೆ
ಒಡಲ ಬೆಂಬಳಿಯೊಳು ಪರಿದಾಡುವ
ಮೃಡನಡಿಗಾಣದ ಜಡಭವದೊಳು ಬಂದು
ಕಡುಪಾಪಿ ಮನದಿಂದ ಬಡವಾದೆನೊ ॥ ೧ ॥

ಗುರುವಿನ ಸೇವೆಯ ಮರದು ಸಂಸ್ಕೃತಿಯೆಂಬ
ಶರಧಿಯೊಳಗೆ ಬಿದ್ದು ಮುಳುಗಾಡುತ
ಪರಮ ನಿರ್ವಾಣದ ಪದವ ಮರದು ಇಂಥ
ದುರುಳ ಮನದೊಳಾಡಿ ಬಡವಾದೆನೊ ॥ ೨ ॥

ಮೀಟು ಜವ್ವನೆಯರ ಕೂಟಕೆಳಸಿ ಶಶಿ
ಜೂಟನ ನೆನಹು ತನ್ನೊಳಗಿರದೆ
ಕೋಟಲೆಗೊಳಗಾಗಿ ಪಾಟಗೆಟ್ಟಾಡುತ
ಪೋಟಿ ಮನದೊಳಾಡಿ ಬಡವಾದೆನೊ ॥ ೩ ॥

ಮಚ್ಚರ ಮದವೆಂಬ ಕಿಚ್ಚಿದೆಯೊಳು ಮೂಡಿ
ನಿಚ್ಚ ಪಂಚೇಂದ್ರಿಯ ಬಳಿ ವಿಡಿದು

ಅಚ್ಚುಗವಿಲ್ಲದ ಪರಮನೊಳಾಡದ
ಹುಚ್ಚು ಮನವ ನೆಚ್ಚಿ ಬಡವಾದೆನೊ ॥ ೪ ॥

ಕರಣಗುಣಗಳ ತೊರದು ತನ್ನೊಳಗಿನ
ಅಱುಹಿನ ಜ್ಯೋತಿಯ ಬೆಳಗಿನೊಳು
ಗುರುಚೆನ್ನಬಸವನ ಚರಣವ ಬೆರಯದ
ಮರುಳಮನದೊಳಾಡಿ ಬಡವಾದೆನೊ ॥ ೫ ॥

೭೬

ರಾಗ : ಭೈರವಿ

ಏನೆಂಬೆ ಶಿವಯೋಗಿ ಮನುಜ ದೇಹವ ತಾಳ್ದ ಚಂದಮಾಮ ಪರ
ಮಾನಂದದೊಳಗಾಡಿ ಕಾಯ ವಿಜಯನಾದ ಚಂದಮಾಮ ॥ ಪಲ್ಲ ॥

ಮಲತ್ರಯಂಗಳನೊಲ್ಲದಂಗ ತ್ರಯವ ಗೆದ್ದ ಚಂದಮಾಮ
ತ್ರಯಮಱೆಯಿ ಲಿಂಗತ್ರಯವೆನಿಸಿದ ಚಂದಮಾಮ
ಸಲೆ ಶೇಷತ್ರಯ ಉಂಡು ತಾಪತ್ರಯವನೊದ್ದ ಚಂದಮಾಮ
ನಿಲಿಸಿದವನೇಕತ್ರಯವ ಮನತ್ರಯದೊಳು ಚಂದಮಾಮ ॥ ೧ ॥

ಆಱರಿಯನು ಹೊದ್ದ ಆಱು ಸ್ಥಲದಿ ನಿಂದ ಚಂದಮಾಮ
ಆಱು ಭ್ರಮೆಯ ಸುಟ್ಟು ಆಱೂಢನಾದನು ಚಂದಮಾಮ
ಸಾರ ಹೃದಯನಾಗಿ ಸಂಸಾರವನು ದಾಟಿ ಚಂದಮಾಮ
ತಾರಕಬ್ರಹ್ಮವ ತನ್ನೊಳಗಿಂಬಿಟ್ಟ ಚಂದಮಾಮ ॥ ೨ ॥

ಕಾಯ ಮಾಯೆಯ ಕೋಱಚಾಡಿ ನಿರ್ಮಳಾತ್ಮಕನಾದ ಚಂದಮಾಮ
ಸಾಯಸವಿಲ್ಲದೆ ತನ್ನ ಸಾಧಿಸಿಕೊಂಡ ಚಂದಮಾಮ
ದಾಯದಿಂದಾಗ ಉನ್ಮನಿದಾರಿಯ ಕಂಡ ಚಂದಮಾಮ ॥ ೩ ॥

ಹೀನ ಪಂಚೇಂದ್ರಿಯ ತೊಡರಿಗೆ ಸಿಲುಕದೆ ಚಂದಮಾಮ ಪರ
ಮಾನುಭಾವದ ರಸವನೆ ಸೆವಿಸಿಕೊಂಡು ಬಂದ
ನೀನಾನೆಂಬ ಹಮ್ಮನಳಿದು ನಿಜದೊಳು ನಿಂದ ಚಂದಮಾಮ ಅನು
ಮಾನವಿಲ್ಲದೆ ಸರ್ವಲಿಂಗಾಂಗಿಯೆನಿಸಿದ ಚಂದಮಾಮ ॥ ೪ ॥

ಕರಣಗಳನು ಲಿಂಗಕಿರಣಂಗಳನು ಮಾಡಿ ಚಂದಮಾಮ ಪ್ರಾಣ
ದರೆಯನಿರ್ದೇಡೆಗೆ ಮುಖವ ನೇಹಿದಿರುಹಿದ ಚಂದಮಾಮ
ಉರಿ ಸೋಂಕಿ ಕರ್ಪುರ ಬಯಲಾದ ತೆಱನಂತೆ ಚಂದಮಾಮ ನಮ್ಮ
ವರ ಯೋಗಿ ಗುರುಚೆನ್ನಬಸವನೆ ತಾನಾದ ಚಂದಮಾಮ ॥ ೫ ॥

೭೭

ಪಟುವಾಗು ಮನವೆ ಹೆದರದೆ ನಿನ್ನ ನೋಡುವಡೆ
ನಿಟಿಲಾಕ್ಷನೆಂಬ ಪಟುಭಟನು ಜಗಳಕೆ ಬಂದ ॥ ಪಲ್ಲ ॥

ಆದಿವ್ಯಾಧಿಗಳೆಂಬ ಸುರಗಿಯನು ಚಿಮ್ಮುತಲಿ
ವಾದವೆಂದೆಂಬ ವಂಕುಡಿಯ ಕಟ್ಟಿ
ಮೇದಿನಿಯ ಭೋಗವೆಂದೆಂಬ ಹರಿಗೆಯ ತೋಱು
ತಾದಿ ಶಿವನೆಂಬ ಮಾಸಾಳು ಬೆದರಿಸ ಬಂದ ॥ ೧ ॥

ಭಕ್ತಿಯೆಂದೆಂಬ ಸಾಧನೆಗಲಿತು ನೀನು ವಿ
ರಕ್ತಿಯೆಂದೆಂಬ ಕಣದೊಳಗೆ ನಿಂದು
ಮುಕ್ತಿಯೆಂದೆಂಬ ಕಾಸೆಯ ಕಟ್ಟಿ ನಿಲಲಾಗಿ
ಶಕ್ತಿಯವಗಿನಿತಿಲ್ಲವೆನ್ನ ಕೈವಶವಹನು ॥ ೨ ॥

ಕಡು ನಿರಾಸೆಗಳೆಂಬ ಹರಿಗೆಯನು ಪಿಡಿಕೊಂಡು
ದೃಢಚಿತ್ತವೆಂಬ ಖಡ್ಗವನು. ತಳೆದು
ಒಡನೆ ಭಕ್ತಿ ಜ್ಞಾನವೈರಾಗ್ಯವೆಂದೆಂಬ ಮೂ
ಅಡಿಯಿಟ್ಟು ನಡೆ ಮುಂದಕಾತ ನಿಮ್ಮೊಳು ಪೋ[ರು]ವ ॥ ೩ ॥

ಹಲವು ಕಂಟಕವೆಂಬ ಬಲು ಬಲ್ಲೆಗಳ ತೋಱಿ
ನೆಲದೊಳಗದಕಳುಕಿದರೆ ತೊಲಗೆಂಬನು
ಕಲಿಯಾಗಿ ಕಾದಿ ಕಲಿಕಾಮದೇವರಂತಿರ್ಪವರಿಗೆ
ಕಲಹಂಗಳುಳಿದು ಸುಖತನವ ನಡಸುವನಕ ॥ ೪ ॥

ಅಣುಮಾತ್ರ ಶಂಕೆ ನಿನ್ನಂತರಂಗದಿ ಪೊಗದೆ
ಅಣುಗವನಕೂಡೆ ಭೃತ್ಯತ್ವದೊಡನೆ
ಮಣಿದಡ್ಡಬಿದ್ದು ಬಿಗಿದಪ್ಪಿಕೊಂಡಿರು ಬಿಡದೆ
ತ್ರಿಣೆಯ ಮದ್ಗುರುಚೆನ್ನಬಸವ ನಿನ್ನೊಶವಹನು ॥ ೫ ॥

೭೮

ಮುಂದೆ ನಾ ಹೋಗುತಿಹೆನೆ ನೀ ಬಾ ಹಿಂದೆ
ಇಂದು ನಿರಾಕಾರ ಲಿಂಗದಿ ತನುವೆ ॥ ಪಲ್ಲ ॥

ನೀನು ನಿರಾಕಾರ ಲಿಂಗವನೊಡಗೂಡಿ
ಸಾನಂದದಿಂದ ನೀ ಪೋಗೆ
ನಾನಂತು ಬಹೆನು ಸ್ಥೂಲಾಂಗವನೊಡಗೂಡಿ
ಏನುಪಮೆಯ ಕಂಡೆ ಹೇಳೆನ್ನ ಮನವೆ ॥ ೧ ॥

ಪಂಚಮುಖನ ಪಂಚಮುಖದಿಂದ ಪುಟ್ಟಿದ
ಪಂಚಭೂತಂಗಳನಱಿದು ನಿನ್ನ
ಪಂಚಭೂತವ ಕೂಡಿ ಮೆಲ್ಲನೆ ಬಾ ಮುಂದೆ
ಪಂಚಬ್ರಹ್ಮವೆಯಹ ಪರದಲ್ಲಿ ತನುವೆ ॥ ೨ ॥

ಮುನ್ನ ಹೋದವರ ದಾರಿಯ ಹತ್ತಿ ಹರುಷದಿ
ಓಂನಮಃ ಶಿವಯೆಂಬ ವಚನವನು
ಎನ್ನ ಜಿಹ್ವೆಯೊಳು ನೆನವುತಲುಳ್ಳ
ಉನ್ಮನೆಯಹುದೆಂಬ ಊರನಱಿಸುತ ॥ ೩ ॥

ಉಮ್ಮಳವಿಲ್ಲ ನಿರ್ಮಳವೆಂದು ದಾರಿಗೆ
ನಮ್ಮಿಸಿ ನಮ್ಮಿಬ್ಬರುಗಳನೆ
ಪರ್ಮೆಯ ಸುಖದುಖಂಗಳ ತೋಱಿ ಪರ
ಬ್ರಹ್ಮದ ಹೊಲಬ ಕೇಳುತಲನುರಾಗದಿ ॥ ೪ ॥

ಹರಿಗಿರಿ ಸುರಪಗಿರಪನಜಗಿಜರೆಲ್ಲ
ಚಿರಕಾಲ ಸಾಧಸಿ ಕಾಣದಂತ
ಪರಮಪದವ ತೋಱಿ ನಿರಾಕಾರನೆನಿಸಿದ
ವರ ಗುರುಚೆನ್ನಬಸವನ ಬೆರಯಲಾನು
ಮುಂದೆ ನಾ ಹೋಗುತಿಹೆನೆ ॥ ೫ ॥

೭೯

ಸಾಕ್ಷಿ ಹೇಳಿದೆನೀ ಶರೀರ ಸ್ಥಿರವಲ್ಲ ಮದ–
ನಾರಿಯ ನೆನೆ ಕಂಡ್ಯ ಜೀಯ್ಯನೆ ॥ ಪಲ್ಲ ॥

ಮತ್ತ ಮಾನುಷನಾಗಿ ನಾನಾ ಯೋನಿಗಳೊಳು
ಸುತ್ತುತಲಿರಬೇಡ ಜೀಯ್ಯನೆ
ನೆತ್ತಿಗಣ್ಣಿನ ಶರಣಾಳಿಗೆಱಗಿ ಬಪ್ಪ
ಮೃತ್ಯುವ ನೀಗೆಲೊ ಜೀಯ್ಯನೆ ॥ ೧ ॥

ಮುಂದನೆಣಿಸಿ ಮುಂಡೆಯಂತೆ ಚಿಂತಿ ನೀನು
ಸಂದೇಹಗೊಳಬೇಡ ಜೀಯ್ಯನೆ
ಕಂಡ ಶರಣರ ಸಂಗವ ಮಾಡಿ ನೀ
ಹಿಂದೆ ಬಂದ ಭವವ ಗೆಲು ಜೀಯ್ಯನೆ ॥ ೨ ॥

ನಾರಿ ವಾಹನ ನಿನ್ನ ಕನಕ ಕಾಮಿನಿ ಚೆಲ್ವ
ಪುತ್ರ ಮಿತ್ರರುಗಳು ಜೀಯ್ಯನೆ
ವಸ್ತ್ರ ಭೂಷಣಗಳ ಅಸ್ಥಿರವೆಂದು ಕಂಡು
ತ್ರಿಣೇತ್ರನ ನೆನೆ ಕಂಡ್ಯ ಜೀಯ್ಯನೆ ॥ ೩ ॥

ನಿನ್ನವೆಂದೆನ್ನದೆ ತನುಮನಧನಗಳ
ಮಾನ್ಯರಿಗೆಡೆಮಾಡು ಜೀಯ್ಯನೆ
ಹೊನ್ನು ಹೆಣ್ಣು ಮಣ್ಣು ನೆಚ್ಚಿ ಮಚ್ಚಿರಬೇಡ
ಓಂ ನಮಃಶಿವಯೆನ್ನು ಜೀಯ್ಯನೆ ॥ ೪ ॥

ವಿಷಯದಿಚ್ಛೆಗೆ ಪರಸತಿಯಳಿಗೆಳಸಿ
ಮಣ್ಮತಿಯಾಗಿ ಕೆಡಬೇಡ ಜೀಯ್ಯನೆ
ಅಸುವಳಿಯಲು ದೇಹಿಯೆನಬೇಡ ಪರರಿಗೆ
ಅಸಮಾಕ್ಷನ ನೆನೆ ಕಂಡ ಜೀಯ್ಯನೆ ॥ ೫ ॥

ಕಾಳುಹದಿಂದ್ರಿಯ ಕಾಲಾಡಲೀಸದೆ
ತಾಳಿ ಸದ್ಭಕ್ತಿಯ ಜೀಯ್ಯನೆ
ಬಾಳುವ ಕಾಲದಿ ಶೂಲಿಯ ಪೂಜಿಸಿ
ಕಾಲನ ಗೆಲು ಕಂಡ ಜೀಯ್ಯನೆ ॥ ೬ ॥

ಕರಣಾದಿ ಗುಣಗಳ ಹರನೊಳು ನಿಲ್ಲಿಸಿ
ಸ್ಥಿರ ಚಿತ್ತು ಪರನಾಗು ಜೀಯ್ಯನೆ
ಗುರುಚೆನ್ನಬಸವನ ಸ್ಮರಣೆಯಿಂದಿರುತಿರ್ಪ
ಪರಮನೆ ನೀನಹೆ ಜೀಯ್ಯನೆ ಜೀಯ್ಯನೆ ॥ ೭ ॥

೮೦

ಅಂಗೈಯ್ಯ ಲಿಂಗ ನೀನೊ ನಾನೊ ನಿರಂಜನಯ್ಯ ನೀನೊ ನಾನೊ
ಜಂಗಮಲಿಂಗ ನೀನೊ ನಾನೊ ॥ ಪಲ್ಲ ॥

ಕುಲ ಚಲವನು ಸುಟ್ಟು ಹಲವು ದೈವವ ಬಿಟ್ಟು
ಸಲೆ ಸಂದು ಗುರುಕರುಣವನೆಲ್ಲರಿದವನು ॥ ೧ ॥

ಇಷ್ಟಲಿಂಗವ ತಿಳಿದು ಭ್ರಷ್ಟಮಾನವ ಬಿಟ್ಟು
ಕಷ್ಟಗೈವರನು ನಷ್ಟವ ಮಾಡಿದ ದೇವ ॥ ೨ ॥

ಅಂತರಂಗವ ತಿಳಿದು ಭ್ರಾಂತು ಮಾನವ ಬಿಟ್ಟು
ಸ್ವತಂತ್ರದಿ ಗುರು ಕರುಣ ನಿಶ್ಚಿಂತನಾಗಿದ್ದವ ॥ ೩ ॥

ವಿಷಯಯೆಂಬುದ ಸುಟ್ಟು ಕಸವೆಂಬ ಜ್ಞಾನವ ಬಿಟ್ಟು
ವಸವಲ್ಲದವಮೂರ ವರ್ಜಿಸಿದವನ ॥ ೪ ॥

ಕಾಮ ಕ್ರೋಧವ ಸುಟ್ಟು ಪ್ರೇಮದಷ್ಟಮದವ ಬಿಟ್ಟು
ಸಾಮ ಸಪ್ತವ್ಯಸನಗಳ ಕ್ರಮದಿಂದಲಳಿದವ ॥ ೫ ॥

ಜಾಗ್ರ ಸ್ವಪ್ನವ ಸುಟ್ಟುಗ್ರನೆಂಬಮನವ ಬಿಟ್ಟು
ಶೀಘ್ರದಿ ಶಿವಜ್ಞಾನಮಾರ್ಗವಿ[ಡಿ]ದವ ॥ ೬ ॥

ಪಂಚಶಕ್ತಿಮನದಿಂದ ಹಂಚಿ ದಶವಾಯುಗಳ
ಸಂಚಿತದಲ್ಲಿ ಕಟ್ಟಿ ವಂಚಿಸಲೀಯ್ಯದವ ॥ ೭ ॥

ಜಂಗಮವ ಕಂಡಲ್ಲಿ ಸಂಗನಂತೆ ನಂಬಿ
ಹಿಂಗದಂತರಂಗದೊಳು ಅಂಗೀಕರಿಸಿದವ ॥ ೮ ॥

ಪರಬ್ರಹ್ಮ ಗುರುಚೆನ್ನಬಸವರಾಜನ ಪಾದ
ಕರುಣವ ನೆಚ್ಚಿ ನಂಬಿ ಸ್ಥಿರವಾಗಿ ಬಾಳ್ವವ ॥ ೯ ॥

## ೮೧

### ರಾಗ : ಭೈರವಿ

ಇನಿತೇಕೆ ಕಡುಗೋಪ ವನಿತೆರನ್ನಳಗೂಡೆ
ಮನಸಿಜಾಂತಕನೆ ಬಾರೊ ಏ ಸಂಗಯ್ಯ ॥ ಪಲ್ಲ ॥

ಸೊಕ್ಕುಜವ್ವನೆ ನಡೆಯ ಸೋಲ್ಮುಡಿಯ ಭಾವಕಿರನ್ನೆ
ದುಃಖಬಟ್ಟಳು ಬಾರಯ್ಯ ಶಂಭು ಶಂಕರ ಪಾಲಿಸೊ ಏ ಸಂ
ಕರ್ತನ ಕುಚದ ಸೊಂಪೆಸೆವ ಮಾನಿನಿಯಳ
ಮುಕ್ಕಣ್ಣಹರ ಮನ್ನಿಸೊ ಏ ಸಂಗಯ್ಯ ॥ ೧ ॥

ತುಂಬೆಗುರುಳ ತರಳಾಕ್ಷಿ ತಲ್ಲಣಿಪಳು
ತಂಬಿಸೊ ಮನದ ನೋವ ಏ ಸಂಗಯ್ಯ
ತುಂಬು ಜೌವ್ವನದ ಮಾಂದಳಿರ ಪೋಲ್ವಡಿಯಳ
ಶಂಭು ಶಂಕರ ಪಾಲಿಸೊ ಏ ಸಂಗಯ್ಯ ॥ ೨ ॥

ಬಡನಡುವಿನ ಬಾಳೆಸುಳಿಯಸುವಿನ ಚೆಲ್ವ
ನುಡಿಗುಂದಿ ಬಡವಾದಳೊ ಏ ಸಂಗಯ್ಯ
ಮಡದಿರನ್ನಳೆಯೊಳು ಮನ ಮುನಿಸನು ಬಿಡೊ
ಮೃಡನೆ ಮುಪ್ಪುರಹರನೆ ಏ ಸಂಗಯ್ಯ ॥ ೩ ॥

ನೋಟ ಕೂಟದೊಳಿರ್ದು ನೋಡದೆ ಬಂದೆ ಇಂದು
ಜೂಟ ನಿನಗೆ ಸಲ್ಲದೊ ಏ ಸಂಗಯ್ಯ
ಊಟವ ತೊರದು ಉಮ್ಮಳಿಪ ಬಾಲೆಗೆ ನಿನ್ನ
ನೋಟದ ಜೋಡ ಕೂಡಿಸೊ ಏ ಸಂಗಯ್ಯ ॥ ೪ ॥

ಬಲುನಂಬಿದಳ ಬಿಟ್ಟು ಬೆಲೆವೆಣ್ಣಿನೊಳು ಬಂದೆ
ಸುಳುಕುದೋರದೆ ಬಾಲೆಗೆ ಏ ಸಂಗಯ್ಯ
ಜಲಜಲೋಚನೆ ನಿನ್ನ ನೆನೆದಳುತ ಬಲು
ಬಳಲಿ ಬಾಯಾರುತಿರ್ದಳೊ ಏ ಸಂಗಯ್ಯ ॥ ೫ ॥

ನಾರಿಯ ಮೊಗ ಮೊಗವು xxx
ವಾರಿಜದಂತಾದವು ಏ ಸಂಗಯ್ಯ
ದಾರಿದಾರಿಯ ನೋಡಿ ದ್ರವಗುಂದಿದಳೊ ನಾರಿ
ತೋರಿಸೊ ನಿನ್ನ ಪಾದವ ಏ ಸಂಗಯ್ಯ ॥ ೬ ॥

ತರಳೆವೆಣ್ಣಿನ ಕೂಡೆ ತರ್ಕವೇತಕೆ ಹೋಗಿ
ನೆರೆಯೊ ಭಾವಜಹರನೆ ಏ ಏ ಸಂಗಯ್ಯ
ಧರೆಯೊಳಧಿಕವೆಂದೆನಿಪ ಕಲ್ಯಾಣದ
ಗುರುಚೆನ್ನಬಸವಲಿಂಗ ಏ ಸಂಗಯ್ಯ ॥ ೭ ॥

೮೨

ರಾಗ : ಮುಖಾರಿ

ನರಜನ್ಮಯೆಂಬ ತಾಮಸದಿ ಹುಟ್ಟಿಸಿದೆ ನೀ ಕಾಯೋ ಲಿಂಗಯ್ಯ ಎನ್ನ
ಅಱಿವು ಮಱೆವೆಗಳನಱಸಬೇಡೆಲೆ ತಂದೆ ಕಾಯೋ ಲಿಂಗಯ್ಯ॥ ಪಲ್ಲ ॥

ಅತ್ತಿಯಹಣ್ಣ ಬಿಚ್ಚಿದಡಲ್ಲಿ ಹುರುಡುಂಟೆ ಕಾಯೋ ಲಿಂಗಯ್ಯ ಕಾರ
ಗತ್ತಲೆಯೊಳು ಬೆಳಗಱಸಿದಡಿರುವದೆ ಕಾಯೋ ಲಿಂಗಯ್ಯ
ಬತ್ತಿದ ಕೆರೆಯೊಳಗುಂಟೆ ನಿರ್ಮಲ ವಾರಿ ಕಾಯೋ ಲಿಂಗಯ್ಯ ಎನ್ನ
ಚಿತ್ತ ಶುದ್ಧವ ನೋಡಲಲ್ಲೇನು ಬಗೆಯಿಲ್ಲ ಕಾಯೋ ಲಿಂಗಯ್ಯ ॥ ೧ ॥

ಬೆಂಡಿನಹೂವ ಘ್ರಾಣಿಸೆ ಗಂಧವಿರ್ಪುದೆ ಕಾಯೋ ಲಿಂಗಯ್ಯ ರಾಶಿ
ಕೆಂಡದೊಳಗೆ ತಂಪನಱಸಿದಡಿರುವದೆ ಕಾಯೋ ಲಿಂಗಯ್ಯ
ಬಂಡೆಯ ಬಗೆಯೆ ಬಹದೆ ಜಲದೊಱತೆಯು ಕಾಯೋ ಲಿಂಗಯ್ಯ ಮನ
ದಂಡಲೆಗಾರೆನು ಭವದೂರನಾದಿ ಕಾಯೋ ಲಿಂಗಯ್ಯ ॥ ೨ ॥

ಹೆಗ್ಗಬ್ಬಿನೊಳಗುಂಟೆ ಇನಿದಾದ ರಸಗಳು ಕಾಯೋ ಲಿಂಗಯ್ಯ ಹುಟ್ಟು
ಮೂಗನೊಳಗುಂಟೆ ಮುದ್ದಿನ ನುಡಿಗಳು ಕಾಯೋ ಲಿಂಗಯ್ಯ
ಕಾಗೆಯ ಕೊರಲೊಳಗುಂಟೆ ಕೋಗಿಲೆಸ್ವರ ಕಾಯೋ ಲಿಂಗಯ್ಯ ಸಾಕು
ಹೋಗ ನೀನತ್ತ ನಾನೆತ್ತಲೆಂದೆನಬೇಡ ಕಾಯೋ ಲಿಂಗಯ್ಯ ॥ ೩ ॥

ಸಗಣಿಯೊಳಗುಂಟೆ ಕತ್ತುರಿಯ ಸದ್ವಾಸನೆ ಕಾಯೋ ಲಿಂಗಯ್ಯ ಕಾಳು
ಹೊಗೆಯೊಳಗಿರ್ಪುದೇನು ಧೂಪಧೂಮವು ಕಾಯೋ ಲಿಂಗಯ್ಯ

ಹಗಲುಗಳ್ಳನೊಳುಂಟೆ ಧರ್ಮದವಾಕ್ಯವು ಕಾಯೋ ಲಿಂಗಯ್ಯ ಎನ್ನ
ಸಗುಣ ದುರ್ಗುಣಗಳನೆಣಿಸದೆ ದಯದಿಂದ ಕಾಯೋ ಲಿಂಗಯ್ಯ ॥ ೪ ॥

ಬೇವಿನಫಲದೊಳಗುಂಟೆ ಬೆಲ್ಲದಸವಿ ಕಾಯೋ ಲಿಂಗಯ್ಯ ದೋಸೆ
ಕಾವಲಿಯೊಳಗುಂಟೆ ಮುಕುರದ ಪ್ರತಿಬಿಂಬ ಕಾಯೋ ಲಿಂಗಯ್ಯ
ಹಾವಿನ ಹಲ್ಲೊಳಗುಂಟೆ ಸುಧೆಯಬಿಂದು ಕಾಯೋ ಲಿಂಗಯ್ಯ
ಗಾಮಿನಿವನೆಂದು ಬಿಡದಿರು ದಮ್ಮಯ್ಯ ಕಾಯೋ ಲಿಂಗಯ್ಯ ॥ ೫ ॥

ಪರುಷನೋಡಿತೆ ಲೋಹದೊಳವಗುಣಗಳ ಕಾಯೋ ಲಿಂಗಯ್ಯ ಮೇರು
ಗಿರಿ ಕಳೆಯಿತೆ ಹೊಲ್ಲವೆಂದು ಕಾಗೆಯ ಕಾಯೋ ಲಿಂಗಯ್ಯ
ಶರಧಿ ಹೋಜಿಗುಮಾಡಿತೆಯೂರಜಲ ಬರೆ ಕಾಯೋ ಲಿಂಗಯ್ಯ ಬಲು
ನೆರೆ ನಂಬಿದೆನು ನಿಮ್ಮ ಚರಣಾರವಿಂದವ ಕಾಯೋ ಲಿಂಗಯ್ಯ ॥ ೬ ॥

ಕ್ರೂರವಿಕಾರದ ತನುಗುಣದೊಳು ನೊಂದೆ ಕಾಯೋ ಲಿಂಗಯ್ಯ ಮದ
ನಾರಿ ನೀ ದೊಡ್ಡವನೆಂದು ಮರೆಯ ಬಿದ್ದೆ ಕಾಯೋ ಲಿಂಗಯ್ಯ
ಆರೈದು ನೋಡದೆನ್ನೊಳವಗುಣಗಳ ಕಾಯೋ ಲಿಂಗಯ್ಯ ದಯ
ವಾರುಧಿಯೊಳಗದ್ದಿ ಸಲಹೆನ್ನ ಗುರುಚೆನ್ನಬಸವಲಿಂಗಯ್ಯ ॥ ೭ ॥

೮೩

ರಾಗಃ ವಸಂತ ಭೈರವಿ

ವಾರಿಜಗಂಧಿ ಕೇಳೆ ಕನಸ ಕಂಡೆ ನೀರೆ ಪರಾಕಿಲ್ಲವೆ
ಧಾರುಣಿಯೊಳಗಿರುವ ಮನುಜಶರೀರಗಳಱಿಯದಂಥ
ಊರಮಧ್ಯದೊಳೊಂದು ಕುಕ್ಕುಟಧ್ವನಿಗೇಳಿ
ಊರು ಒಡದುದ ಕಂಡೆನೆ ಏ ಸಖಿಯೇ ॥ ಪಲ್ಲ ॥

ಮಾರಿ ಒಬ್ಬಳು ದ್ವಿದಶಪಂಚ ಕು
ಮಾರರೆಲ್ಲರು ಸಹಿತ
ದೂರಿ ಹೋಗುವಳಷ್ಟವರ xx ಗೀಳಿಚ್ಚು
ಭೋರನೆದ್ದೋಡುವವೇ ಏ ಸಖಿಯೇ. ॥ ೧ ॥

ಅಱುವತ್ತುಆಱುಕೋಟಿ ರಕ್ಕಸರೆಲ್ಲ
ಹೞಿದು ಹೋಗುವರಂಜುತ
ಹರಿಯವಾಹನ ಕೇಳ ಹೊಱಗಾಗಿ ಹೋಗುವ
ಅರಿಗಳಲ್ಲಿರದೇಳ್ವರೆ ಏ ಸಖಿಯೇ ॥ ೨ ॥

ಜೀವನಮೃಗ ಸಹಿತ ಮತಿಗ
ಚಿತ್ಪಾವಕರೊಳ್ಬೀಳ್ವನೆ
ಭಾವೆ ಕೇಳೇಳು ಮನ್ನೆಯರಿರುತಿರ್ದು
ತಾನೆ ಬಿಟ್ಟೋಳುವರೆ ಸಖಿಯೇ ॥ ೩ ॥

ಆನಿಯ ಹೆಣ ಬೀಳಲಿ ವಾನರ ಕಂಡು
ತಾನೆತ್ತಿಕೊಂಡೈವದೆ?
ಮಾನಿನಿ ಭ್[ವ]ನ ದಿ ಬರತುದು ಮುಂದಣ
ಕಾನನ ಸುಡು ಬೇವುದೆ ಏ ಸಖಿಯೇ ॥ ೪ ॥

ಮೇರುವಿನ ಗೃಹದಿ ದಿವಾಕರ
ಸೂರ್ಯನುದಯವಾಗಲು
ವೀರ ಶ್ರೀ ಶ್ರೀ ಗುರುಚೆನ್ನಬಸವಲಿಂಗ ಕಂಡು
ನೀರೆ ನಾನೆಚ್ಚೆತ್ತನೆ ಏ ಸಖಿಯೇ ॥ ೫ ॥

೮೪

ಎಲ್ಲಿಯದೊ ಶಿವಭಕ್ತಿ ಕುಟಿಲ ಮನುಜರಿಗೆ
ಎಲ್ಲಿಯಾದಡೊಬ್ಬ ಸಹಜ ಶಿವಭಕ್ತ
ಎಲ್ಲಿಯದೊ..... ॥ ಪಲ್ಲ ॥

ದೊಡ್ಡ ಜಂಗಮ ಬರಲು ಅಡ್ಡಡ್ಡಬಿದ್ದವಗೆ
ದೊಡ್ಡವಸ್ತ್ರವನಿತ್ತು ಶರಣೆಂಬರು
ಸಡ್ಡೆಮಾಡದೆ ಒಬ್ಬ ಬಡಜಂಗಮನ ಕಂಡು
ಅಡ್ಡಮೋರೆಯ ತೆಗವ ಹೆಡ್ಡುಮನುಜರಿಗೆ ॥ ೧ ॥

ಊರೊಳಗಿರುತಿರ್ಪ ಜಂಗಮಗೆ ಕೀರ್ತಿಸೆ ಬಹಳ
ಸಾರಿ ಭಕ್ತಿಯಾ ಮಾಡಿ ನಮಿಸುತಿಹರು

ದೂರದಿಂದೊಬ್ಬ ಪರದೇಶಿ ಜಂಗಮ ಬರಲು
ಮೋರೆಯನು ತಗ್ಗಿಸುವ ಠಕ್ಕು ಮನುಜರಿಗೆ ॥ ೨ ॥

ದೇಶನಾಮವ ಕೇಳಿ ವೇಷ ವಿದ್ಯವ ನೋಡಿ
ಆಶೆ ನಿರಾಶೆಗಳ ವಿವರಿಸುತಲಿ
ರೋಷ ಸಮತೆಯನೆಲ್ಲ ಬೆಸಗೊಂಡು ಮಾಡಬಹ ಇಂಥ
ಹೇಸಿ ಗುಣಗಳುವುಳ್ಳ ಹೆಡ್ಡ ಮನುಜರಿಗೆ ॥ ೩ ॥

ಹೊಗಳಿದರಿಗುಬ್ಬಿ ನಲಿದಾಡಿ ಭಕ್ತಿಯ ಮಾಡಿ
ಹೊಗಳದಿರ್ದವರ ಸಾಮಾನ್ಯಗಂಡು
ಜಗದೊಳಗೆ ನಾ ಭಕ್ತನೆಂದು ಬೆಬ್ಬನೆ ಬೆರವ
ನಗುವರಱಿಯದ ಇಂಥ ವಿಗಡ ಮನುಜರಿಗೆ ॥ ೪ ॥

ಜಂಗಮದಿ ಹಿರಿದು ಕಿಱಿದೆನ್ನದರ್ಚಿಸುತಿರ್ಪ
ಮಂಗಳಾತ್ಮಕ ಭಕ್ತರಂಗದೊಳಗೆ
ಅಂಗಜನ ವೈರಿ ಶ್ರೀ ಗುರುಚೆನ್ನಬಸವೇಶ
ಹಿಂಗದಿರುತಿರ್ಪ ಅನವರತ ಎಡೆಬಿಡದೆ ॥ ೫ ॥

೮೫

ರಾಗ : ಮುಖಾರಿ

ಕಾಡ ಬೇಡಯ್ಯ ಕಾಯಯ್ಯಾ ಬಹಳ ನೊಂದೆ ಲಿಂಗದೇವ
ಕಾಯಯ್ಯ ಕಾಯದಿರ್ದಡೆ ಕೊಲ್ಲು ಬಿಡೆ ನಿನ್ನ ಲಿಂಗದೇವ ॥ ಪಲ್ಲ ॥

ಇರಿಸು ತರಿಸು ಎನ್ನ ಪರರ ಕೈಯಿಂದಲಿ ಲಿಂಗದೇವ
ಕರಿ ಸಿಂಹ ಶಾರ್ದೂಲ ಉರಗ ವೃಶ್ಚಿಕಗಳಿಂದ ಲಿಂಗದೇವ
ಹರಿಯಬಿಟ್ಟವರೊಳು ತಿನಿಸು ಕಡಿಸು ಲಿಂಗದೇವ ನಿಮ್ಮ
ಚರಣಕಮಲವನ್ನು ಬಿಡುವನಲ್ಲೆಲೆದೇವ ॥ ೧ ॥

ಜ್ವರ ಸೀತ ಬ್ರಮಣ ವಾತವು ಪಿತ್ತ ಶ್ಲೇಷ್ಮ ಲಿಂಗದೇವ
ಅರಸುಣ್ಣಬ್ಬರಿ ಕೆಮ್ಮು ಗೂರಲುಗಳೆಲ್ಲ ಲಿಂಗದೇವ
ಶರಿರವನೆಲ್ಲ ಸಂಪಲ್ಯಮಾತ್ರದಿ ಮಾಡು ಲಿಂಗದೇವ ನಿಮ್ಮ
ಹರಗಣಂಗಳ ಪಾದದಾಣೆ ನಿಮ್ಮನು ಬಿಡೆ ಲಿಂಗದೇವ ॥ ೨ ॥

ತಾಯೆ ರಕ್ಕಸಿಯಾಗಿ ಶಿಶು ಭಕ್ಷಿಸುವಂತೆ ಲಿಂಗದೇವ ಒಬ್ಬ
ರಾಯ ತನ್ನೊಕ್ಕಲ ತಾ ಮಾಱಿ ಕೊಳುತಿರೆ ಲಿಂಗದೇವ
ನೇಯುವಲ್ಲೆಂದು ಹೇಳುವರುಂಟೆ ಜಗದೊಳು ಲಿಂಗದೇವ ನಿ
ರ್ಮಾಯ ನೀ ಕಾಯಲು ಕೊಲ್ಲುವರುಂಟೆ ಜಗದೊಳು ಲಿಂಗದೇವ॥ ೩ ॥

ಇನಿತೇಕೆ ದುಃಖ ನಿನಗೆಂದು ನಗಬೇಡ ಲಿಂಗದೇವ
ನಿನಗಾಗ ಕಾಣಬಂದೀತು ಎನ್ನ ದುಃಖ ಲಿಂಗದೇವ
ಇನಿತರಮೇಲೆನ್ನ ಸಲಹದಿರ್ದಡೆ ಬಿಡೆ ಲಿಂಗದೇವ ॥ ೪ ॥

ಮುನ್ನ ದೇಸಿಕ ನಿಮ್ಮ ಅಡಿಗೆನ್ನ ಮುಡಿಯೆಂದು ಲಿಂಗದೇವ
ಚೆನ್ನಾಗಿ ಗಂಟನಿಕ್ಕಿದ ಕಾರಣದಿಂದ ಲಿಂಗದೇವ
ಇನ್ನು ನಾ ಬಿಡೆನಯ್ಯ ನಿಮ್ಮ ಶ್ರೀಪಾದವ ಲಿಂಗದೇವ ಮತ್ತೆ
ಎನ್ನ ಪಾಲಿಸು ವರ ಗುರುಚೆನ್ನಬಸವೇಶ ಲಿಂಗದೇವ ॥ ೫ ॥

೮೩

ಕಾವಯೆನ್ನೊಳು ಗರ್ವ ಬೇಡ ನಿನ್ನ
ದೇವ ಎನ್ನೊಳಗಿರುವ ಅರಿಯೆ ನೀ ಹಳವ ॥ ಪಲ್ಲ ॥

ಕಬ್ಬಿ[ಲ]ತನವೊಡಗೂಡಿ ಕಬ್ಬುಬಿಲ್ಲನೆ ಮಾಡಿ
ಉಬ್ಬಿನಿಂದ್ದೆದು ಸರಳುಗಳ ಹೂಡಿ
ಇಬ್ಬಾಗಬಾಗಿ ಕುಂಬಿಡುವ ಅಂಬಿನ ಮೊನೆಗೆ
ತಬ್ಬಿಬ್ಬುಗೊಳರು ಶರಣರಂಗಜನೆ ॥ ೧ ॥

ಮೂಱುಮಲಗಳ ಬಿಟ್ಟು ಆಱು ಅರಿಗಳ ಸುಟ್ಟು
ತೋಱು[ವ] ಏಳೆಂಟು ಹತ್ತುಗಳನೆಬ್ಬಲಟ್ಟಿ
ಸಾರ ಸದ್ಗುರು ಪರಮನಂಗದೊಳಗಿಂಬಿಟ್ಟು
ಮೀಱಿ ಭವ ಕಾಮ ಕಾಲರ ಮೆಟ್ಟಿದವರು ॥ ೨ ॥

ಬರೆ ಬೀದಿಯೊಳಗೊಂದು ಕರಿಯು ಸಂಭ್ರಮದಿಂದ
ದರಿದ್ರನದಱ ಕ್ರಯವ ಕೇಳುತಿರಲು
ಮರುಳು ಮಾನವ ನಿನಗೆ ಹುರುಳಿಲ್ಲ ತೊಲಗೆನಲು
ಮಱುಗಿ ಮನಕರಗಿ ನಾಚುವನ ತೆಱನೆಲವೊ ॥ ೩ ॥

ಪೊಡವಿಯೊಳು ಹಡೆಯಬಾರದ ಒಂದು ರತ್ನವಿರೆ
ಬಡವನದ ಕಂಡು ಬಯಸಿದರೆ ಬಹುದೆ?
ಮೃಡನೊಳಗೆ ದೃಢವೆತ್ತು ಒಡವೆರದ ಶರಣರೊಳು
ಜಡ ಕಾಮ ತೊಡಗಿದರೆ ಗಡಣಗೊಳ್ಳುವರೆ? ॥ ೪ ॥

ಸ್ಮರ ಹೋಗು ಲಿಂಗಭೋಗಿಗಳೆತ್ತ ನೀನೆತ್ತ
ಶರಿರಭೋಗಿಗಳೆತ್ತ ನೀನೆತ್ತಲು?
ಗುರುಚೆನ್ನಬಸವೇಶನಿತ್ತಭ[ಯ] ವುಂಟೆಮಗೆ
ತೆರಳತ್ತ ಮರುಳ ಚಿತ್ತಜ ಭಂಗಬಡದೆ ॥ ೫ ॥

೮೭

ರಾಗ : ದೇಶಿ

ಪ್ರಣವಾಕ್ಷರಂಗಳಾಲಿ ಜಪಿಸು ಸರ್ವವುಸಿದ್ಧಿ
ಹೊಣೆಯಿದಕೆ ನಾನು ನಂಬುವೆರಡಿಲ್ಲದೆ ॥ ಪಲ್ಲ ॥

ಓಯೆಂಬ ಪ್ರಣವದಿಂದೋಡುವುದು ಭವತಿಮಿರ
ನಾಯೆಂಬ ಪ್ರಣವದಿಂ ರುಜೆಗಳಳಿಗು
ಮಾಯೆಂಬ ಪ್ರಣವದಿಂ ಮಾಯೆ ಕೆಲಸಾರುವುದು
ಶಿಯೆಂಬ ಪ್ರಣವದಿಂ ಕೆಡುಗು ಸಂಸೃತಿಯು ॥ ೧ ॥

ವಾಯೆಂಬ ಪ್ರಣವದಿಂದೊಸಲುವದು ನಿಜಭಕ್ತಿ
ಯಾಯೆಂಬ ಪ್ರಣವದಿಂದೆಸೆವದು ಜ್ಞಾನ
ಕಾಯಗುಣವಳಿದು ಮಲ ಮದ ಕುಂಜರನೆಂಬ
ಕೈಯೆತ್ತಿ ಸಾಲುತಿವೆ ಶ್ರುತಿ ಸ್ಮೃತಿಗಳೆಲ್ಲ ॥ ೨ ॥

ಇಂತೀ ಷಡಾಕ್ಷರವ ಸಂತಸದಿ ನೀ ಸ್ಮರಿಸು
ಅಂತಕನು ನಿನಗೆ ನಿಜಭಕ್ತನಹನು
ಕಂತುಪಿತನಯನ ಗುರುಚೆನ್ನಬಸವೇಶ
ಸಂತತಂ ನಿನ್ನ ಕರಮನದೊಳಿಹನು ॥ ೩ ॥

೮೮

ಸಹಜವಹುದೀ ಮಾತು ಶಿವಭಕ್ತಿಯುಳ್ಳವರ
ಬಹಳ ಮುದ್ದಿನ ಕಂದನಹುದಣ್ಣ ನಾನು ॥ ಪಲ್ಲ ॥

ಆವಲ್ಲಿ ಗುರು ಲಿಂಗ ಜಂಗಮವ ಭಜಿಸಿ ಮ
ತ್ತಾವಲ್ಲಿ ತೀರ್ಥ ಪ್ರಸಾದವ ಸಲಿಸಿ ಮ
ತ್ತಾವಲ್ಲಿ ಭಸಿತ ರುದ್ರಾಕ್ಷಮಣಿ ಮಂತ್ರವನು
ಭಾವದೊಳು ಧರಿಸಿಹರ ಮಗನಮಗ ನಾನು || ೧ ||

ಎಲ್ಲಿ ಕ್ಷಮೆ ದಮೆ ಶಾಂತಿ ಎಲ್ಲಿ ಸದ್ಭಕ್ತಿ ಮ
ತ್ತೆಲ್ಲಿ ಸನ್ಮಾರ್ಗ ಸತ್ಪುರುಷರಿಹರು
ಎಲ್ಲಿ ದೇವಾರ್ಚನೆಯ ಮಾಡುವರ ಮೆಲ್ಲಡಿಗೆ
ಸಲ್ಲಲಿತ ಪಾವುಗೆಯ ಪಿಡಿದಿರುವ ಬಂಟ ನಾನು || ೨ ||

ತಂದೆ ಸದಾಶಿವನು ತಾಯಿ ಗಿರಿಜಾದೇವಿ
ಬಂಧು ಬಳಗಗಳೆಲ್ಲ ಪ್ರಮಥರೆಮಗೆ
ತಂದಿಷ್ಟಲಿಂಗವನು ಕರದೊಳಿನಿಸಿದ ಕೃಪಾ
ನಂದ ಗುರುಚೆನ್ನಬಸವೇಶ್ವರನ ಶಿಷ್ಯ ನಾನಹುದು || ೩ ||

☐ ☐

೮೯

ಬರಿದೆ ಮುನಿಯ ಸಲ್ಲ ಬಾ ಏಳು ಮನೆಗೆ ನಲ್ಲ
ಕೊರತೆಯೊಳಗೀ ತನು ತೊರೆದ (?) ತೋರದೆನು ನೀನು || ಪಲ್ಲ ||

ಕೋಕಕುಚದ ಸೋಮ್ಮುಡಿ ಕೊನಬುಗಾತಿಯ ನೋಡಿ
ಮಾಕುಮಾರನಾರಂಬವ ಮಾಡಬೇಕೆನ್ನುತ ಗರುವೆ
ಏಕಾಂತವಾಡಿದೆಯೆಂದು ಎರವ ತಾಳಿದೆನೆ ಇಂದು
ಏಕೆಬಂದಿರೆಂತಿಕೇಣ ಎಂದೆಂದಗಲದ ಜಾಣ || ೧ ||

ನಿನಗಾಗದರ ಮುಂದೆ ನಿಂತು ಮಾತಾಡಿದಳೆಂದೆ
ವನಿತೆ ಯಾರಾರೊ ತಂದು ಓತು ಚಾಡಿನುಡಿದರಿಂದು
ಮನಸಿನೊಳಗೆ ಕೋಪ ಮಚ್ಚರವ ತೊಟ್ಟೆ ಪಾಪ
ಎನಗಿಲ್ಲ ಪರರೊಳು ಎರಕ ನಿನ್ನಾಣೆ ಕೇಳು || ೨ ||

ರಸಿಕರು ತಲೆಯಾಂತು ರಾಜಿಪ ರನ್ನವೆ ಇಂತು
ಕುಸಲತನದ ಮತ್ತೆ ಕೂರ್ಪನಳಿ ಸಂತಾಪಕೆ
ವಸಮಾಡೂದು ಹೀಗೆ ಒಳಿತೆಯೆನ್ನಯ ಬೇಗ
ಹೊಸನೇಹವಾದಳಂತೆ ಹೊಂತಕಾರಿ ಹೇಳು ಪಂಥ || ೩ ||

ಚಿಕ್ಕ ಹರೆಯದಿ ನಿನ್ನ ಚಿತ್ತವ ಮಚ್ಚಿಸಿದೆನ್ನ
ಕಕ್ಕಸ ಕುಚದ ಮೇಲೆ ಕೈಯಿಕ್ಕದಿದಾವ ಲೀಲೆ
ಸಕ್ಕರೆ ಚಿಂದುಟಿ ಜೇನು ಸವಿಯದಿಹ ಸುಮ್ಮಾನ
ಮಕ್ಕಳಾಟಿಕೆಯಿದೇನು ಮಾತಾಡೋ ಸುಮ್ಮನೆ ನೀನು || ೪ ||

ಮುನ್ನಿತ್ತ ಭಾಷೆಗೆ ಇಂದು ಮೋಸ ಬಾರದಂತೆ ಬಂದು
ಮನ್ನಿಸಿ ನೆರದನೂನ ಮಮತೆ[ಯ]ಲನುದಿನ
ಭಿನ್ನ ಕ್ರಿಯಳಿದಾನಂದಭಾವದಿರುವ್ರುದು ಚಂದ
ಚಿನ್ನಿಧಿ ಶ್ರೀ ಗುರುಬಸವ ಚಿತ್ತೈಸು ನೀನೆನ್ನ || ೫ ||
☐ ☐

೯೦

ರಾಗ : ನಾಟ

ತ್ರಾಹಿ ತನುಗುಣ ತಮಜೀಮೂತ ಝುಂಝೂವಾತ
ತ್ರಾಹಿ ತಂದ್ರಿಯಜಾಲ ಬಿಂಬ ಬಿಂದು ಶ್ಯಂಭ
ತ್ರಾಹಿ ತಾರಕಮಂತ್ರರಾಯ ನಿರ್ಜಿತಮಾಯ
ತ್ರಾಹಿ ತವ ನೆನಹಿಲಿರು ಎನ್ನ ಜತಿ ರನ್ನ || ಪಲ್ಲ ||

ಚಾರುತರವಾದ ತ್ರಯದ
ಶಾರೀರವಾಗಿಳೆಯಲಿ ರಾಜಿಸುತೆ ಲೀಲೆಯಲ್ಲಿ
ಕ್ರೂರಜನ ಮತ್ತಕರಿಕುಲಸಿಂಹನವತಾರಿ
ಸಾರಮತಿ ನಿಟಲಾಭಿರಾಮ ಲಲಾಮ || ೧ ||

ಸಕಲ ಶಾಸ್ತ್ರದ ಒಡಲ ಸಾಧಿಸರಿವಿನಕಡಲ
ನಿಕಟ ನಟನಾಹಂಸ ನಿಪುಣ ವಿದ್ವಾಂಸ
ನಿಕರ ಸೇವಿತ ಪಾದನೀರೇಜ ಸಾಕ್ಷಾ
ದ ಕುಮಾರ ತಾ[ರಕಾ]ರಿಯರೂಪ ಸುಧೃತಾಲಾಪ || ೨ ||

ಚಂಬು ಕೃತಿ ಛಂದಾಣುಕೃತಿಯ ರಚಿಸುವ ಕವಿಕ–
ದಂಬಕ ಚಾರುಳಿದ(?) ಕವಿಕುಮುದ ಸೂರ್ಯ
ಬಿಂಬವೆನಿಸುವ ಬಿರಿದನಾಂತ ನೂತನ ಶಾಂತ
ಯೆಂಬ ಜನ ಚಿತ್ತಾ ಬ್ಧಿಚಂದ್ರ ಯೋಗೀಂದ್ರ ॥ ೩ ॥

ಕಂಡಲ್ಲಿ ಪೊಗಳಿ ಕಣ್ಮರೆಯೆ ತೆಗಳಿ
ಗೊಂಡು ಸಾವರ ಮತಿಯ ಕೋದಂಡ ಧೃತಿಯ
ದಂಡಭಾವದಿ ಕರದಿ ಧರಿಸಿ ಸಾದರದಿ ಭೂ
ಮಂಡಲದೆ ನಟನಾ ವಿನೋದಿ ಜಿತವಾದಿ ॥ ೪ ॥

ಕರುಣಜಲದರುಣಾಂಗ ಕದಕದಿಸುವಪಾಂಗ
ಗರುವ ಶ್ರೀ ಗುರುಬಸವಲಿಂಗದೊಳಗನಿಶ
ಬೆರದು ಬೇರಾಗದಿರ್ಮಡಿ ಮುರಿಗೆ ಗುರುಸಿದ್ಧೇ
ಶ್ವರಯೋಗಿ ಶಿವಲಿಂಗ ಭೋಗೋಪಯೋಗಿ ॥ ೫ ॥

❑ ❑

೯೧

ರಾಗ : ಲಲಿತೆ

ಮಂಗಳಕಾಯಗೆ ಮಂಗಳಂ ವೃಷ–
ಲಿಂಗ ಮಹೇಶಗೆ ಮಂಗಳಂ ॥ ಪಲ್ಲ ॥

ಪಂಚೇಂದ್ರಿ[ಯ] ವಿಷಯದೂರಗೆ ಜಿತ
ಪಂಚೇಶುವಿಗೆ ಪರಮಪುರುಷಾರ್ಥಿಗೆ
ಪಂಚಭೂತಾಭಿಧ ಪಂಚಪ್ರತಾಪನು
ಪಂಚವರ್ನದ ರೂಪಗೆ ಮಂಗಳಂ ॥ ೧ ॥

ಧರ್ಮಗತೀತಗೆ ದಕ್ಷನಿರ್ಜಾತಗೆ
ಧರ್ಮಾರ್ಥದಧ್ವಜಗೆ ಧವಲತೇಜ[ನಿ]ಗೆ
ಧರ್ಮಸಾಕಾರಗೆ ಧರೆಯೊಳಗತುಳ ಸ
ದ್ಧರ್ಮಸ್ವರೂಪಗೆ ಮಂಗಳಂ ॥ ೨ ॥

ಅತುಳಾನಂದಗೆ ಅನುಮಿಷವಂದ್ಯಗೆ
ಅತಯೇವರುದ್ರನದ್ವಿತೀಯನಿಗೆ

ಕ್ಷಿತಿತ್ರಯಾರಾಧ್ಯಗೆ ಕ್ಷೇಮಂತಾದ್ಯಗೆ
ಖತಸತ್ಯರುಂದ್ರಗೆ ಮಂಗಳಂ ॥ ೩ ॥

ಶರಣಾಗ್ರಗಣ್ಯಗೆ ಸತತ ಕಾರುಣ್ಯಗೆ
ತರುಣೇಂದುಮೌಲಿಯ ತದ್ರೂಪಿಗೆ
ಕರುಣಕಟಾಕ್ಷಗೆ ಕಲುಷ ಜನನ ಜರಾ
ಮರಣ ವಿದೂರಗೆ ಮಂಗಳಂ ॥ ೪ ॥

ಚಿರನುತಿಪಾತ್ರಗೆ ಚಿನ್ಮಯಗಾತ್ರಗೆ
ನಿರುಪಮ ಚರಿತೆ ನೀಲಾಂಬಿಕೆಯ
ಪುರುಷಪುಂಗವಗೆ ಪ್ರಮಥಗಣಸಂಗ
ಗುರುಬಸವೇಶಗೆ ಮಂಗಳಂ ॥ ೫ ॥

೯೨

ಮಾನಿನಿರನ್ನೆ ಮಗಳೆ ನೊಸಲೊಳ್ಭೂತಿ ಛಂದವಮ್ಮ
ಏನೆಂದು ಹೇಳುವೆನಿದರಿಂದ ಶೃಂಗಾರವಿಲ್ಲವಮ್ಮ ॥ ಪಲ್ಲ ॥

ಮೂರುಬೆರಳಲ್ಲಿ ಧರಿಸಲು ಭಸಿತವು ಛಂದವಮ್ಮ
ಮೂರುರೇಖೆಗಳಲ್ಲಿ ಮೂರುಮಂತ್ರಗಳು ಸಂಬಂಧವಮ್ಮ
ತೋರುವ ಪಂಚಲಿಖಿತವಾಕ್ಷಣದೊಳು ನಾಶವಮ್ಮ
ಮರೆವ ಪಂಚಾಕ್ಷರ ಪಂಚಲಿಖಿತವಿದು ಸತ್ಯವಮ್ಮ ॥ ೧ ॥

ಶಿಖೆ ಭಾಳ ಕರ್ಣ ನಯನ ಕಂಠದೊಳ್ಭೂತಿ ಛಂದವಮ್ಮ
ಪ್ರಕಟಿಸಿ ಭುಜ ತೋಳು ಮಣಿಬಂಧದೊಳು ಭೂತಿ ಛಂದವಮ್ಮ
ಸಕಲ ಸಿದ್ಧಿಯನೀವ ಭಸಿತ ಉರ ನಾಭಿ ಪಾರ್ಶ್ವಯಲ್ಲಿ(?)
ಸಕಲಸ್ಥಾನದಿ ಧರಿಸುತೆ ಮೋಕ್ಷವಡಿವುದು ಛಂದವಮ್ಮ ॥ ೨ ॥

ಆದಿಯಾಧಾರವಿಲ್ಲದ ಮುನ್ನ ಭಸಿತವು ತಾನೆಯಾಗಿ
ನಾದಬಿಂದುಗಳೊಂದುಗೂಡಿ ಚಿತ್ಪ್ರಣಮವು ತಾನೆಯಾಗಿ
ಭೇದಿಸಿ ಗುರು ತಂದು ತೋರಿದನಿದನೇನನೆಂಬೆ
ವೇದ ಶಾಸ್ತ್ರವು ಶ್ರುತಿಗತೀತ ಭಸಿತವಿದನೇನೆಂಬೆ ॥ ೩ ॥

ಸ್ನಾನ ಧಾರಣ ಉದ್ಧೂಳನ ಭಸಿತವು ಛಂದವಮ್ಮ
ಏನೆಂದು ಹೇಳುವೆ ಸರ್ವಸಿದ್ಧಿಗೆ ಸ್ಥಾಣು ಭಸಿತವಮ್ಮ
ಮನವೊಲಿದಗಸ್ತ್ಯ ದಧೀಚರು ಧರಿಸಿದ ಭಸಿತವಮ್ಮ
ಬಿನುಗು ಕಾಲನ ಗೆದ್ದು ಮೂರುಕೋಟಿ ಆಯುಷ್ಯವ ಪಡೆದರಮ್ಮ ॥ ೪ ॥

ಪುರುಷನನೊಲಿಸುವ ಅಂಗಕ್ಕೆ ಅರಿಸಿನ ಛಂದವಮ್ಮ
ಪರಶಿವನೊಲುಮೆಗೆ ಭಸಿತ ಲೇಪನದಂಗ ಛಂದವಮ್ಮ
ಹರುಷದಿ ತ್ರಿಕಾಲ ಭಸಿತವ ಧರಿಸಲು ಛಂದವಮ್ಮ
ಗುರುಬಸವೇಶನೊಳೊಡವೆರವರೆ ನೀನು ಛಂದವಮ್ಮ ॥ ೫ ॥

❑ ❑

೯೩

ಅರಿವಿನದೀಪ ಎಚ್ಚರಿಕೆ ಕಂಡ್ಯ ಬಚ್ಚ–
ಬರಿಯಾನಂದವನು ತೋರುವುದು ಕಂಡ್ಯ ॥ ಪಲ್ಲ ॥

ಹುಬ್ಬಿಲಿ ನಟ್ಟನಡುವೆ ಕಂಡ್ಯ [ಮೂಗಿ
ನಿ] ಬ್ಬಟ್ಟೆ ಏರಾಟ ನಿಲ್ಲಲಿ ಕಂಡ್ಯ
ಶಬ್ದ ಜನದ ತೆರೆ ಜೋಕೆ ಕಂಡ್ಯ ಮೋಹ–
ದುಬ್ಬಿನ ಮೊಬ್ಬು ಹೋ[ಗ]ಬಿಡದು ಕಂಡ್ಯ ॥ ೧ ॥

ಕಣ್ಣಗಲದ ಬಾಗಿಬಲ್ಲಿ ಕಂಡ್ಯ ಮೂರು
ಬಣ್ಣದ ಹೃದಯಾಬ್ಜ ಹಣಿತೆ ಕಂಡ್ಯ
ಎಣ್ಣೆ ಬತ್ತಿಯ ಹಂಗ್ಯಿಲ್ಲ ಕಂಡ್ಯ
ಸಣ್ಣನಾಗುರಿ[ವು]ದು ಸಹಜ ಕಂಡ್ಯ ॥ ೨ ॥

ಇರುಳು ಹಗಲು ನಂದದಿಹುದು ಕಂಡ್ಯ ಇಹ
ಪರಲೋಕ ಸುಖವ ಕಾಣಿಪುದು ಕಂಡ್ಯ
ನಿರುತಚಲಾಕ್ಷಿಲಿ ನೋಡು ಕಂಡ್ಯ ಶ್ರೀ
ಗುರುಬಸವೇಶ್ವರ ತಾನೆ ಕಂಡ್ಯ ॥ ೩ ॥

❑ ❑

೯೪

ಮುರಿಗೇಂದ್ರ ಮಹಸ್ವಾಮಿ ಭೂಪ
ನಿನ್ನ ಮಹಿಮೆ ಪ್ರತಾಪ ॥ ಪಲ್ಲ ॥

ಭಕ್ತರನು ನೋಡುವ ಕಾಂಕ್ಷೆಯಿಂದ ಯುಕ್ತಿಯಿಂದಲಿ ಬಂದ
ಮುಕ್ತಿಕೊಡುವ ಬಹು ಚೆಂದ
ಕ್ಷಿತಿಯೊಳು ನಿನ್ನಂಥ ಯತಿ ಭೂಪರಾರಿಲ್ಲ
ಮತಿವಂತ ನಾರಿಯರು ನುತಿಸಿ ಪೋಪರಯ್ಯ ॥ ೧ ॥

ದಕ್ಷಿಣೋತ್ತರದೇಶದೊಳಗೆ ಲೋಕ
ರಕ್ಷಣೆಗೆ ಮೋಕ್ಷಕೊಡುವ ನಂಬಿದವರಿಗೆ
ಅಕ್ಷಯ ಮಹಾಪ್ರಭು ಸಾಕ್ಷಾತ ಮುರಿಗೇಂದ್ರ
ಸೂಕ್ಷ್ಮಾಂಗಿಯರು ತಾವು ಈಕ್ಷಿಸಿದರು ಬೇಗ ॥ ೨ ॥

ಧರೆಯೊಳು ಚಿನ್ಮೂಲವಾಸ ಗಿರಿಯೋಳಿರುವ ಮುರಿಗೇಶ
ಕರುಣಿಸು ಗುರುಮಹಲಿಂಗೇಶ ಬಿಡದೆ ಭ
ಕ್ತರಿಗೆಲ್ಲ ಮೋಕ್ಷಕೊಡುವ ಪಾದ
ಬಡಮತಿಯಿಂದಲಿ ನುಡಿದ ಗುರುಪಾದೇಶ ॥ ೩ ॥

❑ ❑

೯೫

ರಾಗಃ ಕಾಂಬೋದಿ

ಮಾಸಾಳು ಬಂದ ಕಣೆ ನೋಡೆಲೆ ತಂಗಿ
ಮಾಸಾಳು ಬಂದ ಕಣೆ ಮನ–
ದಾಸೆ ರೋಷವನಳಿದವಿರಳಾತ್ಮಕನಾದ ॥ ಪಲ್ಲ ॥

ಆಟಮಟ ವ್ಯಾಪಾರ ಕುಟಿಲ ವಂಚನೆಯಿಂದ
ನಿಟಿಲಾಕ್ಷ ಮೃಡನ ವೇಷವಧರಿಸಿ
ಘಾಟನ ರಕ್ಷಿಪ ಜನರೆದೆಯ ಮೆಟ್ಟುತ
ಪಟುಭಟ ವೀರಮಾಹೇಶ್ವರರುಗಳೆನಿಸುವ ॥ ೧ ॥

ಪರಧನ ಪರಸತಿ ಪರಹಿಂಸೆಗಳ ಮಾಡಿ
ಗುರುಲಿಂಗ ಜಂಗಮವೆನಿಸಿಕೊಂಡು
ಬೆರತುಕೊಂಡಿಹ ನರಗುರಿಗಳ ಮೂಗನು
ಕೊರದು ಹಿಂಗಡಿಸಿ ಕನ್ನಡಿಯ ತೋರುತ ॥ ೨ ॥

ದಶವಾಯು ದಶವಿಂದ್ರಿಯಂಗಳಿಂದಲಿ ಮನ
ಹಸಗೆಟ್ಟು ವಿಷಯದಿಚ್ಛೆಗೆ ಹರಿದು
ಒಸರುವ ಮೂತ್ರನಾಳದಿ ಬಿದ್ದು ಹೊರಳುವ
ಪಶುಜೀವಿಗಳು ಚರಲಿಂಗವಲ್ಲವೆನುತ ॥ ೩ ॥

ಲಿಂಗಾಂಗಸಮರಸದಿಂಗಿತವರಿಯದೆ
ಭಂಗಿತರುಗಳು ಜಂಗಮವೆನಿಸಿ
ಅಂಗಜನರಳಂಬಿಗೆ ಸಿಲ್ಕಿ ನರಳುವ
ಜಂಗುಳಿ ಮನುಜರ ಹಿಂಗದೆ ಜರಿವುತ ॥ ೪ ॥

ಅಷ್ಟಾವರಣ ಪಂಚಾಚಾರವರಿಯದೆ
ಭ್ರಷ್ಟರು ಲಿಂಗ ಜಂಗಮವೇಷವ
ತೊಟ್ಟರೆಯವನು ಜಂಗಮನಲ್ಲ ಪೂಜ್ಯಕ್ಕೆ
ನೆಟ್ಟನೆ ಹೊರಗೆಂದು ಧಟ್ಟಿಸಿ ನುಡಿವುತ ॥ ೫ ॥

ಚರ ಸ್ವಯ ಪರವೀ ತ್ರಿವಿಧ ಲಕ್ಷಣಂಗಳ
ನೆರೆ ತಿಳಿಯದೆ ವೃಥಾ ಬರುದೆ ಪರಾ–
ತ್ಪರ ಶಿವಲಾಂಛನವೆನಿಸಿಕೊಳುತಲಿರ್ಪ
ದುರುಳಾತ್ಮರುಗಳ ತಾನೀಗ ಛೇದಿಸುತ ॥ ೬ ॥

ಆನೆ ಚೋಹವ ತೊಟ್ಟು ನಾಯಾಗಿ ಬಗಳುವ
ಹೀನ ಮಾನವರ ಧಿಕ್ಕರಿಸುತಲಿ
ಭಾನುಕೋಟಿ ದಿವ್ಯತೇಜ ಪಕಾಶನ–
ನೂನ ಗುರುಶಾಂತಲಿಂಗದೊಲುಮೆಯಾದ
ಮಾಸಾಳು ಬಂದ ಕಣೆ.. ॥ ೭ ॥

೯೬.

ಬೀಜವೊಂದನು ಮೀರಿ ಬೆಳೆದವು ಮೂರ್ಮೊಳಕೆಗಳು
ಬೀಜಕೆ ನೆಲವಿಲ್ಲ ಬಿತ್ತಿದಾತನೆ ಬಲ್ಲ ॥ ಪಲ್ಲ ॥

ಮುನ್ನಾದ ಮೊಳಕೆಯೊಳು ಮೂಡಿತಲೆ ನಾಲ್ಕೊಂದು
ಪನ್ನಗನ ಸುತ್ತದಕೆ ಪೂವೊಂದು ಕಾಯೊಂದು

ಇನ್ನಂದು ಮೊಳಕೆಯೊಳು ಎಲೆಯೊಂದು ಹಣ್ಣೊಂದು
ಇನ್ನೊಂದು ಮೊಳಕೆ ಎಲೆ ನಾಲ್ಕು ಹೂವೊಂದು ॥ ೧ ॥

ಕಡೆಯ ಮೊಳೆ ನಾಲ್ದೆರದ ಬೆಳೆಗಳನಿಟ್ಟುಕೊಂಡಿಹುದು
ನಡುವಣ ಮೊಳೆಯವನೆಲ್ಲ ಕಾದುಕೊಂಂಡಿರುವುದು
ಆದರತ್ತಲಾದಿಯ ಮೊಳಕೆಯವನೆಲ್ಲ ನುಂಗುವುದು
ಒಡಲೊಳಗದ ತಾನಿಟ್ಟು ಬೀಜವೊಂದುಳಿಯುವುದು ॥ ೨ ॥

ಬೀಜ ಕೊಳೆಯುವುದಲ್ಲ ಬೆಳೆಯುಂಬುದು ನಿತ್ಯವಲ್ಲ
ಬೀಜವ ಬಳಸಿಹ ಸಿಪ್ಪೆಯು ಬೆಳಸಿಹುದು ಸುಳ್ಳ
ಬೀಜದ ಸಿಪ್ಪೆಯ ಸಂದಿನ ಬಹಳ ಮರ್ಮವನೆಲ್ಲ
ಬೀಜವಾಗಿ ಬೇರಿರುತಿಹ ಗುರುಸಿದ್ಧನೆ ಬಲ್ಲ ॥ ೩ ॥

## ೯೭

[ನವಲಿಂಗಸ್ತೋತ್ರರೂಪ ಮಂಗಳವು]
ಮಂಗಳ ಜಯ ಜಯ ಮಂಗಳ ಶಿವ
ಮಂಗಳ ಶ್ರೀಮಹಾಲಿಂಗನಿಗೆ
ಮಂಗಳ ಜಯ ಜಯ ಮಂಗಳ ॥ ಪಲ್ಲ ॥

ಆಧಾರಮಂಟಪದೊಳು ಪೀತವರ್ಣದ
ಚೌದಳ ನಡುವೆ ನಕಾರ ಬೀಜ
ಮೇದಿನಿಯಂಗ ಭಕ್ತನು ಕ್ರಿಯಾಶಕ್ತಿಯು
ಸಾಧಿಸಿ ಗಂಧ ಘ್ರಾಣಾಚಾರಲಿಂಗಕ್ಕೆ
ಮಂಗಳ ಜಯ.... ॥ ೧ ॥

ಎರಡನೇ ಮಂಟಪಕಾರು ಎಸಳುಗಳು ಶ್ವೇತ
ವರಣ ಮಧ್ಯದೊಳು ಮಕಾರ ಬೀಜ
ಹರುಷೋದಕಾಂಗ ಮಹೇಶ ಜ್ಞಾನಶಕ್ತಿ
ಗುರುಲಿಂಗ ಜಿಹ್ವೆ ಮುಖದಿ ರಸಗೊಳುತಲಿ ॥ ೨ ॥

ತ್ರಿತಯಚಕ್ರಕೆ ದಶದಳ ಹರಿತವರ್ಣ
ಮಿತಿಯಲ್ಲಿ ಇರುವ ಶಿಕಾರ ಬೀಜ

ಮತವಗ್ನಿಯಂಗ ಪ್ರಸಾದಿ ಇಚ್ಛಾಶಕ್ತಿ
ಅತಿಶಯ ರೂಪು ನೇತ್ರದಿ ಶಿವಲಿಂಗಕ್ಕೆ ॥ ೩ ॥

ಅನಹತದೊಳು ದ್ವಾದಶದಳ ಮಾಂಜಿಷ್ಠ
ವನುಗೊಳಿಸಿರುವ ವಾಕಾರ ಬೀಜ
ಅನಿಲಾಂಗ ಪ್ರಾಣಲಿಂಗಾದಿ ಶಕ್ತಿಯು ಇಹ
ತನು ಸ್ಪರ್ಶ ತ್ವಕ್ಕು ಜಂಗಮಲಿಂಗದೇವಗೆ ॥ ೪ ॥

ಷೋಡಶದಳ ವಿಶುದ್ಧಿಚಕ್ರ ಕಪೋತ.
ಸೂಡಿದ ವರ್ಣ ಯಕಾರ ಬೀಜ
ಕೂಡಿದಾಕಾಶಾಂಗ ಶರಣನು ಪರಶಕ್ತಿ
ಪಾಡಿ ಶಬ್ದ ಶ್ರೋತ್ರ ಪ್ರಸಾದಲಿಂಗಕ್ಕೆ ॥ ೫ ॥

ದ್ವಿದಳ ತ್ರಿಕೂಟದೆಳೆಮಿಂಚಿನವರ್ಣದ
ಆದಿಪ್ರಣವ ಓಂಕಾರ ಬೀಜ
ಮೋದದಿ ಆತ್ಮಾಂಗವಾದೈಕ್ಯ ಚಿಚ್ಛಕ್ತಿ
ಸಾಧಿಪ ತೃಪ್ತಿ ಹೃದಯ ಮಹಾಲಿಂಗಕ್ಕೆ ॥ ೬ ॥

ಯೋಗಜರಂಧ್ರ ಸಾಸಿರದಳ ಪ್ರಭೆ ಜ್ಯೋತಿ
ಯಾಗಿರುವದು ಅಕಾರ ಬೀಜ
ತ್ಯಾಗಾಂಗ ನಿಷ್ಕಳ ಆನಂದಮಯ ಶಕ್ತಿ
ಭೋಗಿ ಪರಮಾನಂದ ನಿಷ್ಕಳಲಿಂಗಕ್ಕೆ ॥ ೭ ॥

ಮೂರು ಎಸಳು ಶಿಖಿ ಮಹ ಜ್ಯೋತಿವರ್ಣದ
ಪೂರೈಸಿರುವ ಉಕಾರ ಬೀಜ
ಸೇರಿ ಭೋಗಾಂಗ ನಿಶ್ಶೂನ್ಯನಿಗೆ ವಿಭ್ರಾಂತಿಯು
ಸಾರ ಉನ್ಮನಿಯವಿರಳ ಶೂನ್ಯಲಿಂಗಕ್ಕೆ ॥ ೮ ॥

ಪಶ್ಚಿಮಚಕ್ರಕೆ ದಳ ಅಗಣಿತ ಜ್ಯೋತಿ
ಮುಚ್ಚಿಕೊಂಡಿಹ ಷಕಾರ ಬೀಜ
ಬಿಚ್ಚಿ ಯೋಗಾಂಗ ನಿರಂತ ನಿರಾಮಯ
ಪಶ್ಚಿಮಮುಖ ನಿರಾಳ ನಿರಂಜನನೆಂದು ॥ ೯ ॥

ನವಕೃತಿ ಆತ್ಮ ತನು ಹಸ್ತವು ಭಕ್ತಿಯು
ನವಪ್ರಸಾದಗಳಧಿದೇವಪೂಜಕರು
ನವ ಕರಸಂಜ್ಞೆ ಸಾದಾಖ್ಯ ಲಕ್ಷಣ ದಿಕ್ಕು
ನವಲಿಂಗಸ್ಥಲಕೆಲ್ಲ ಮಹಲಿಂಗದಾಶ್ರಯ ॥ ೧೦ ॥

ನಾಸಿಕಾಗ್ರದಿ ನಿಂದು ಲೇಸಿಂದೆ ಮನವನು
ಸೂಸಲೀಯದೆ ಸುಳಿಗಾಳಿಯನು
ಬಾಸುರ ಬೆಳಗಿನೊಳಂಗಲಿಂಗವನು
ನ್ಯಾಸವರಿದೇಕರಸದೈಕ್ಯಭಾವದಿ ॥ ೧೧ ॥

ತುಂಬಿ ವೀಣೆ ಘಂಟೆ ಭೇರಿ ಮೇಘ ಪ್ರಣವ-
ವೆಂಬ ಪರಮ ದಿವ್ಯ ಸಿಂಹಮಹ (?)
ಬೆಂಬಿಡನುದಿನ ಬಗೆ ಬಗೆ ನಾದದಿ
ಸಂಭ್ರಮದೊಳು ಅಹಂಬ್ರಹ್ಮಾಸ್ಮಿ ಮಂತ್ರದಿ ॥ ೧೨ ॥

ಹರುಷದಿ ದ್ವಿಶತಷೋಡಶದಳವನು
ಗುರುಕರುಣದಿ ತಿಳಿದಿಹ ಭಕ್ತ
ಪರಮಾನಂದದಿ ಸರ್ವಾಂಗಲಿಂಗವೆಂ
ದರಿದು ಪೂರ್ಣ ಸುಖಮಯವಾದ ಮಹಿಮಗೆ ॥ ೧೩ ॥

ಗುರುಕರದೊಳು ಬ್ರಹ್ಮಾಂಡ ಭೂತಳಿಗೆಯೊ
ಳ್ಪರಭಕ್ತನೆಂಬ ಕರ್ಪುರವನಿಟ್ಟು
ಅರುಹಿನ ಮೂಲಾಗ್ನಿಯನು ಹಚ್ಚಿ ನೋಡಲು
ಕುರುಹಿಲ್ಲ ಅರುಹಿಲ್ಲ ನಿರವಯಲಾದೀತು ॥ ೧೪ ॥

ಮಂಗಳಾರತಿಪದದಿಂಗಿತವರಿದರೆ
ಅಂಗಲಿಂಗ ಸಮರಸ ಭಾವವು
ಹಿಂಗದೆ ಗುರುಸಿದ್ಧನಂಘ್ರಿಯೊಳೈಕ್ಯವು
ಸಂಗಿಸಿ ನಿಜಬೆಳಗಂಗವಾಗಿಹುದು ॥ ೧೫ ॥

□ □

೯೮

ಶಿವಯ ರಮಣ[ನ] ಶೀಘ್ರದೊಳು ಭಜಿಸಿ ನೀನು
ತವನಿಧಿಯನು ಪಡೆ ಮರುಳು ಮಾನವನೆ ॥ ಪಲ್ಲ ॥

ಹುಸಿಯ ಸಂಸಾರವ ದಿಟವೆಂದು ನಿನ್ನೊಳು
ವೊಸೆದು ತಿಳಿದುಮದರೊಳು ಮೋದಿಸಿರಲು
ರಸಿಕರದವು ನೋಡಿ ಹಸನವಾಡುವರೆಂಬ
ಕುಸಲನುಡಿಯ ನೀನು ಮರೆವರೆ ಮೂಢ ॥ ೧ ॥

ಪರಮ ಶ್ರೀ ಗುರುವರನೊರೆದ ಬ್ರಹ್ಮವನು ನೀ
ನುರುತರ ಹೃದಯಪೀಠದೊಳು ಪೂಜಿಸದೆ
ಮರೆದು ಮಹಾನಂದಸುಖದಸಾರಾಮೃತವನು
ತೊರೆದು ಕ್ಷಾರೋದಕವನು ಬಯಸುವರೆ ॥ ೨ ॥

ಇಂದುಧರ ಪಾದವಾರಿಜಂಗಳನೊಂದಿ
ಚಂದ [ದಿಂದಿರ]ದೆ ಬಹು ಭವದುಃಖಗಳನು
ಚಂದದಿಂ ಗುರುಸಿದ್ಧಲಿಂಗದೇವೇಶನಾ–
ನಂದಾಂಬುಧಿಯೊಳು ನಿನ್ನ ಜಸವನಾಡು ॥ ೩ ॥

☐ ☐

೯೯

ಎತ್ತಿರೆ ಆರತಿಯ ಪರಶಿವಶಕ್ತಿಯರುಗಳೆಲ್ಲ ವಿ
ರಕ್ತ ಪರಮ ಗುರುಸಿದ್ಧಲಿಂಗೇಶಗೆ
ಮುತ್ತಿನ ನೆಲೆನೆಲೆಯಾರತಿಯ ॥ ಪಲ್ಲ ॥

ನವಕಮಲಾಗ್ರದೊಳು ತೋಱುವ ನವಕರ್ಣಿಕೆಯಲ್ಲಿ
ನವಮನುಪೀಠದ ನವಲಿಂಗರೂಪದಿ
ಮವಿರತ ಬೆಳಗುವ ಪ್ರವಿಮಳಜ್ಯೋತಿಗೆ ॥ ೧ ॥

ಹೃನ್ಮಧ್ಯದೊಳಿರ್ಪ ಕಮಲ ಲಸನ್ಮಂಟಪದೊಳಗೆ
ಸನ್ಮಣಿಪೀಠದಿ ಚಿನ್ಮಯ ಭಾ
ಸ್ವನ್ಮಣಿರೂಪಿನ ಚಿನ್ಮಯ ಜ್ಯೋತಿಗೆ ॥ ೨ ॥

ಶೃಂಗಾಟಾಗ್ರದೊಳು ಮಿಱುಗುವ ಶೃಂಗದುಪರಿಯಲಿ
ರಂಗಿಪ ಚಿನ್ಮಾರ್ತಾಂಡನ ಪೋಲುವ
ಮಂಗಲ ಗುರುವರನಂಘ್ರಿ ಕಮಲಗಳಿಗೆತ್ತಿರೆ ಆರತಿಯ
ಪರಶಿವಶಕ್ತಿಯರುಗಳೆಲ್ಲ ॥ ೩ ॥

☐ ☐

೧೦೦

ನಂದಿ[ಯ]ನೇರಿದ ನಲ್ಲ ನೆರೆ ನೋಡಮ್ಮಯ್ಯ
ಹೊಂದಿದ ಭಕ್ತರಾನಂದದಿ ಸಲಹುವ
ಕಂದುಗೊರಳ ಕರದಿಷ್ಟಲಿಂಗೇಶ
ನಂದಿ[ಯ]ನೇರಿದ ನಲ್ಲ ನೆರೆ ನೋಡಮ್ಮಯ್ಯ ॥ ಪಲ್ಲ ॥

ಎಡದ ಶರೀರವ ಮಡದಿಗೆ ಕೊಟ್ಟ
ಕಡುಮೋಹವ ನೋಡಮ್ಮಯ್ಯ
ಕಡಲವೆಣ್ಣನು ತನ್ನ ಜೆಡೆಯೊಳಗಿಟ್ಟ
ಸಡ[ಗ]ರವನು ನೋಡಮ್ಮಯ್ಯ
ಜಡಜಭವನ ತಲೆ ಕರದೊಳು ಪಿಡಿದಿಹ
ಉಡುಪತಿಧರನೊ ಉರಗಭೂಷಣನೊ ॥ ೧ ॥

ಕಾಮನ ಜೈಸಿದ ಭಸ್ಮಮದೊಪ್ಪುವ
ಕೋಮಲಾಂಗ ನೋಡಮ್ಮಯ್ಯ
ಸಾಮಜದೈತ್ಯನ ಚರ್ಮವ ಹೊದ್ದಿಹ
ವ್ಯೋಮಮೂರುತಿ ನೋಡಮ್ಮಯ್ಯ
ಪ್ರೇಮದಿ ಪುಲಿದೊಗಲುಡುಗೆಯನುಟ್ಟಿಹ
ವ್ಯೋಮಕೇಶನೊ ವೇದಕತೀತನೊ ॥ ೨ ॥

ಕರದ ತ್ರಿಶೂಲದಿ ಮೆರವ ಫಣದ ಬಾ
ಳುವರಣೆಯನು ನೋಡಮ್ಮಯ್ಯ
ಉರದೊಳು ಅಸುರರ ಶಿರಗಳಮಾಲೆಯು
ಮೆರವ ಧನ್ವಿಯ ನೋಡಮ್ಮಯ್ಯ
ಹರಿಲೋಚನವನು ಹರುಷದಿ ಧರಿಸಿದ
ಗುರುಸಿದ್ಧೇಶನೊ ಪರಮಪುರುಷನೊ ॥ ೩ ॥

೧೦೧

ನಿತ್ಯ ನಿರ್ಮಲ ಪರಂಜ್ಯೋತಿಸ್ವರೂಪನೆ ದೇವರದೇವ
ಸತ್ಯ ಜ್ಞಾನಾನಂದ ಪರಿಪೂರ್ಣಭಾವನೆ ದೇವರದೇವ ॥ ಪಲ್ಲ ॥

ವರುಷ ಶಿಷ್ಯಗೆ ಪೂರ್ಣವರುಷವಿತ್ತನೆ ದೇವರದೇವ
ವರುಷ ಪುರವ ನೇತ್ರವರುಷದಿಂದಳಿದನೆ ದೇವರದೇವ
ವರುಷ ರೂಪಿತ ಸಪ್ತವರುಷವ ಪುಗದನೆ ದೇವರದೇವ
ವರುಷಕೇತನಗೆ ವರುಷದಾನಕೊಲಿದನೆ ದೇವರದೇವ ॥ ೧ ॥

ತಾರೆಯಾರರೊಳು ತಾರೆಯನು ವರ್ಧಿಸಿದನೆ ದೇವರದೇವ
ತಾರೆಯ ಸುತನ ತಾರೆಗೆ ಯೋಗ್ಯಗೈದನೆ ದೇವರದೇವ
ತಾರೆಯೊಳಗೆ ಸಾಂಗ ತಾರೆಯ ಮಿಡಿದನೆ ದೇವರದೇವ
ತಾರೆಯ ಕುಲದ ತಾರೆಯನೆ ಕಳೆದನೆ ದೇವರದೇವ ॥ ೨ ॥

ಯೋಗತತ್ಪರರ ಯೋಗವನು ಕೆಡಿಸುವನೆ ದೇವರದೇವ
ಯೋಗ ವಿಮುಖರಿಗೆ ಯೋಗ ಮಾಳ್ಪನೆ ದೇವರದೇವ
ಯೋಗಾಯೋಗದ್ವಯದೊಳು ಯೋಗಮುಳ್ಳನೆ ದೇವರದೇವ
ಯೋಗಾಂಗ ಯೋಗಾಭಿಧಾನ ಸಮೇತನೆ ದೇವರದೇವ ॥ ೩ ॥

ರಾಶಿಶೂನ್ಯನೆ ರಾಶಿಜನ್ಮದಿ ಪೂಜ್ಯನೆ ದೇವರದೇವ
ರಾಶಿ ಕೃತಾಂಗನೆ ರಾಕಾಸ್ಯಭಂಗನೆ ದೇವರದೇವ
ರಾಶಿವಾಹ[ನ]ನೆ ರಾಜೀವನ ಜನಕನೆ ದೇವರದೇವ
ರಾಶಿಪಾಳಿತೆಯೊಳು ರಾಶಿಯಾಗಿರುವನೆ ದೇವರದೇವ ॥ ೪ ॥

ಕರಣ[ತ]ತಿಯ ನಿತ್ಯವಗಲದುಜ್ವಲಿಪನೆ ದೇವರದೇವ
ಕರಣವ ಸರ್ವಾಯವದಿ ತೋರ್ಪ ದೇವರದೇವ
ಕರಣಗಳಾದ ಸುರರನೆಲ್ಲ ನೆರೆ ಕಾಯ್ದನೆ ದೇವರದೇವ
ಕರಣರಹಿತ ಗುರುಸಿದ್ಧೇಶಮೂರ್ತನೆ ದೇವರದೇವ ॥ ೫ ॥

೧೦೨

ಅಖಂಡ ಬ್ರಹ್ಮಾನಂದದ ಬೆಳಗಿನೊಳು ಬೆರೆದ
ಬೆಡಗ ಕಂಡೆ ಕಣ್ಣಿಟ್ಟ ಕಾಣಮ್ಮ ॥ ಪಲ್ಲ ॥

ಹುಬ್ಬಳ್ಳಿಸ್ಥಳದ ಸಂಗಮದ ಪ್ರಣವವೃಕ್ಷದ
ಹಬ್ಬಿದ ಲತೆಯ ವಿರಹದಮೊಬ್ಬ
ನೆಬ್ಬಿಸಿ ಹೊಳೆವ ರವಿಚಂದ್ರ ಶಿಖಿಮಂಡಲದ
ಲಿಬ್ಬರ ಮನಸೊಂದಾಗಿರುವ ಸಂಭ್ರಮದ ಸೊಗಸ ॥ ೧ ॥

ಹೊಳೆಯ ಹೊದ್ದಿದ ನಂದನದ ಕಮಲ ಕುಮುದದ
ಕೊಳದ ವಸವಂತಕಾಲದ
ಬೆಳದಿಂಗಳ ಗರ್ಭದ ಹೊಳೆವ ತಾರಕಜ್ಯೋತಿ
ಕಳೆಯ ಬೆಳಗಿನೊಳ್ ಬೆರೆದು ಬೆಚ್ಚಾದ ॥ ೨ ॥

ತೋಳ ತೆಕ್ಕೆಗಳ ತಳಿರಿನ ನೀಲಬಿಂದುವಿನ
ಸಾಲದೀವಿಗೆಯ ಬೆಳಕಿನ
ಜಾಳೇಂದ್ರ ಮಂಟಪದ ಸೆಳೆಮಂಚದಲಿರ್ವರು
ಓಲಾಡಿ ಬಾಳುವ ರೀತಿಯ ಚೇಲಾಳಸ್ವಾಮಿಯೆ ಬಲ್ಲ ॥ ೨ ॥

೧೦೩

ರಾಗ : ಭೈರವಿ

ಕಂಡು ಬದುಕಿದೆ ನಾನು ಕಾರುಣ್ಯಮೂರ್ತಿಯನು
ಪಿಂಡ ಬ್ರಹ್ಮಾಂಡ ಪರಿಪೂರ್ಣ ಶ್ರೀಗುರುವ ॥ ಪಲ್ಲ ॥

ನೀಲಕಂಧರದಲ್ಲಿ ನಿರಾಳಪುರದಲ್ಲಿ
ಬಾಲಾರ್ಕ ಶಿರೋರತ್ನ ಶಶಿನಭತಾರೆಗಳ
ಸಾಲು ಮುತ್ತಿನ ಮಣಿಯ ಮೇಲಣ ಸರಸಿಜದ
ಜಾಳೇಂದ್ರ ಮಂಟಪದ ಒಡ್ಡೋಲಗದಲ್ಲಿ ಗುರುವ ॥ ೧ ॥

ನೀರಪಟ್ಟಣದಲ್ಲಿ ನೀರಜದೆಸಳಿನಲ್ಲಿ
ಮೂರುನದಿಗಳು ಕೂಡಿದ ಮೂಲಸ್ಥಾನದಲ್ಲಿ
ತಾರೇಶ ದಿನನಾಥರ ತೇಜತತ್ತ್ವದಿ ಕೃಷ್ಣ
ದ್ವಾರಕಿಯಲ್ಲಿ ಶ್ರೀರಾಮರ ಸಭೆಯಲ್ಲಿ ಸದ್ಗುರುವ ॥ ೨ ॥

ನೀತಿ ನಿಧಾನದಲ್ಲಿ ಭೂತತ್ವ ಪೀಠದಲ್ಲಿ
ಸೀತೋಷ್ಣದ ಸೀಮೆ[ಯ]ಲ್ಲಿ ನೇತ್ರಸೂತ್ರದಲ್ಲಿ
ಮಾತಮೀರಿದ ಮನೋತೀತ ನಿರಂಜನ ಪರಂ
ಜ್ಯೋತಿ ಚೇಲಾಳೇಶನ ಪಾದದ ಚಿದ್ಘನವ ॥ ೩ ॥

## ೧೦೪

### ರಾಗ : ಆಹೆರಿ

ಕಂಡೆ ಕಂಡೆನಮ್ಮ ಸತಿಯೆ ಕಾರಣಿಕವಾದ ಕನಸ
ಮಂಡೆ ತುಂಬಿದ ಬಂಧುಬಳಗದ ಮನಕೆ ಲೇಸೊ ಕಷ್ಟವೊ ॥ ಪಲ್ಲ ॥

ಊರ ನಟ್ಟನಡುವೆ ಒಬ್ಬ ಊರ್ಧ್ವಮುಖದ ಪುರುಷನ ಕಂಡೆ
ಕೇರಿಕೇರಿ ಮನೆಯ ಕೆಲದಿ ಕೆಳದಿಯೊಬ್ಬಳ ಕಂಡೆನು
ಮೂರುಬಟ್ಟೆ ಮಧ್ಯದಲ್ಲಿ ಮೂಲಸ್ಥಾನದಿ ಸ್ವಾಮಿಯ ಕಂಡೆ
ನಾರಿಪುರುಷರಾಟಪಾಟ ಕನಸೊ [ನ]ನಸೊ ಕಾಮಿನಿ ॥ ೧ ॥

ಗಿರಿಯ ಶಿರವನೇರಿ ಕಂಡೆ ಗೀತವಾದ್ಯದ ತೂರ್ಯತ್ರಯವ
ಮರದ ಕೊನೆಯ ಮೇಲೆ ಕಂಡೆ ಮಾತನಾಡುವ ಗಿಳಿಯನು
ತರಣಿ ಶಶಿಗಳೆರಡರ ತಾವರೆಯನೊಂದ ಕಂಡೆ
ಪರವಶದಲೆ ಕಣ್ಣದೆರೆದು ಫಲವ ಹೇಳೆ ಮಾನಿನಿ ॥ ೨ ॥

ಕೊಳನತೀರದಲ್ಲಿ ಕಂಡೆ ಕೋಮಲವಾದ ತೆಂಗಿನ ಮರವ
ಒಳಗೆ ಹೊರಗೆ ತುಂಬಿ ಸೂಸಿ ಹೊಳೆವ ಜ್ಯೋತಿಯ ಕಂಡೆನು
ಎಳೆಯ ಚಂದ್ರಧರನ ಕಂಡೆ ಏಕೋದೇವನ ಪಾದವ ಕಂಡೆ
ಚೆಲುವ ಚೇಲಾಳಸ್ವಾಮಿಯ ಕಂಡೆ ಚಂದವೇನೆ ಸಖಿಯಳೆ ॥ ೩ ॥

## ೧೦೫

### ರಾಗ : ಕಾಂಬೋದಿ

ಕಾಣದೆ ಬರಿದೆ ಕಾಲವ ಕಳೆದೆ
ಮಾನಾವಮಾನವ ಮಾನವ ಬರಿದೆ ॥ ಪಲ್ಲ ॥

ಸಂಗಮ ಸಾಲೆಯ ಸಂಗದ ನೆಲೆಯ
ಕಂಗಳ ಕಲೆಯ ಹಿಂಗದ ಲೀಲೆಯ ॥ ೧ ॥

ನೋಟದ ನಿಜವ ಬೇಟದ ಬೀಜವ
ಕೂಟದ ತೇಜವ ಮಾಟದ ಸಹಜವ ॥ ೨ ॥

ತನ್ಮನ ಜನ್ಮವ ತಾರಕಬ್ರಹ್ಮವ
ಚಿನ್ಮಯಕೋಶನ ಚೇಲಾಳೇಶನ ॥ ೩ ॥

## ೧೧೭

## ರಾಗ : ಕಾಫಿ

ಗುರುಸೇವೆ ಮಾಡುತಿರ್ದನು ಯೋಗಿ ಸದ್ಗುರು ತಾನಾಗಿ
ಗುರುಸೇವೆ ಮಾಡುತಿರ್ದನು ಯೋಗಿ ದುರ್ಗುಣವ ನೀಗಿ
ಪರತರಾನಂದ ಸುಖಮಯನಾಗಿ ಸದ್ಗುರು ತಾನಾಗಿ ॥ ಪಲ್ಲ ॥

ಅಷ್ಟಾವಧಾನಿಯಾಗಿ ಇಷ್ಟಸಂಧಾನದ ಭೋಗಿ
ಸೃಷ್ಟಿಸ್ಥಿತಿಲಯದ ಬಾಧೆಯನೀಗಿ ಸದ್ಗುರು ತಾನಾಗಿ ॥ ೧ ॥

ನಾಹಂಭಾವವ ನೀಗಿ ಕೋಹಂಭಾವ ಬಯಲಾಗಿ
ಸೋಹಂಭಾವವೆ ಸಮರಸವಾಗಿ ಸದ್ಗುರು ತಾನಾಗಿ ॥ ೨ ॥

ಅಲ್ಲಿ ಅಂತರ್ಗತವಾಗಿ ಸೊಲ್ಲಿಸುಯೆಂಬ ಯೋಗಿ
ಚೇಲಾಳಸ್ವಾಮಿಯ ಚಿದ್ರೂಪಾಗಿ ಸದ್ಗುರು ತಾನಾಗಿ ॥ ೩ ॥

## ೧೧೭

ಜಯಮಂಗಳಂ ಜಯಮಂಗಳಂ ಸದಾ ಶುಭಮಂಗಳಂ
ನಯನಕ್ಷೇತ್ರದ ನಿರಂಜನಪ್ರಭುವಿಗೆ ॥ ಪಲ್ಲ ॥

ಹೊದ್ದ ದಿವ್ಯಭೂಷಣ ಪುಷ್ಪ ಪರಿಮಳದ
ವಸ್ತುಗಳ ಶೃಂಗರಿಸಿ ಒಲಿದಾಡುವ
ಮಸ್ತಮದ್ದಾನೆ ಗರತಿ ಮಧುರಮಾತಿನ ಜಾತಿ
ಹಸ್ತಿನಿಸಖಿಯರಾರತಿಯನೆತ್ತಿರೆ ॥ ೧ ॥

ಮುತ್ತಿನೊಂಟಿಯು ರತ್ನದೋಲೆ ಕಂಠಾಭರಣ
ಕೆತ್ತನೆಗೆ[ಲ]ಸದ ಕೀಲಣದುಡಿ[ಗೆ]ಯ
ವೃತ್ತಕುಚ ತಿಳಿಗೆಂಪುರೂಪ ಮೃದುವಾಣಿ
ಚಿತ್ತಿನಿಸಖಿಯರಾರತಿಯನೆತ್ತಿರೆ ॥ ೨ ॥

ಕಂಕಣದ ಕಿರಣ ಕಿರಿನಗೆದೀಪ್ತಿ ತನುಕಾಂತಿ
ಝೇಂಕರಿಪ [ಪರಮೆ] ಪರಿಮಳಾಭರಣದ
ಕಿಂಕಿಣಿಯನ್ನು ಮೀರಿದ ಶಬ್ದ ಸವಿನುಡಿ
ಶಂಖಿನಿಸಖಿಯರಾರತಿಯನೆತ್ತಿರೆ ॥ ೩ ॥

ಮಧುಮುಖ ಮುಗುಳುನಗೆ ಸದ್ದುಮಾಡದ ಸರಸ
ತಿದ್ದಿದತಿಲಕ ತೀವ್ರದ ರತಿಸುಖ
ಶುದ್ಧ ನವರತ್ನಭೂಷಣ ಪರಿಮಳದ ಸರಸಿ
ಪದ್ಮಿನಿಸಖಿಯರಾರತಿಯನೆತ್ತಿರೆ ॥ ೪ ॥

ಪರಿಮಳ ಕಂಪು ಪುಷ್ಪದ ಕೆಂಪು ತನುಗಂಪು
ಕರ ಚರಣ ಮುಖ ಪದ್ಮಗಂಧಿಯರು
ಪರಿಕರದ ನಾಲ್ಕುಜಾತಿಯ ನಾರಿಯರು ಜಗ
ದ್ಗುರು ಚೀಲಾಳೇಶಗಾರತಿಯನೆತ್ತಿರೆ ॥ ೫ ॥

## ೧೦೮

ರಾಗ : ದೇಶಿ

ನಂಬು ಎಗಡಿಲ್ಲದೆ ಗುರುಪಾದವ
ಜಂಬೂದ್ವೀಪದ ಸುಖವ ಜಾನಿಸದೆ ಮಗನೇ ॥ ಪಲ್ಲ ॥

ಭಸಿತ ರುದ್ರಾಕ್ಷಿಗಳ ಧರಿಸು ಮಂತ್ರವ ಸ್ಮರಿಸು
ಬಸವಾದಿ ಪ್ರಮಥರನೆ ಹಾಡಿ ಹರಸು
ಹಸಿವು ತೃಷೆಗಳ ಹರಿದು ಹರಪೂಜೆಮಾಡು ಸಮ
ರಸ ಚಿಕ್ಷುಭಾವವೆ ಸಾಯುಜ್ಯ ಮಗನೇ ॥ ೧ ॥

ಮಹಾನುಭಾವಿಗಳ ಸಂಗನನೆ ಮಾಡಣ್ಣ
ದೇಹಾಭಿಮಾನವಳಿ ದೇಹಿಯೆನಬೇಡ
ಸ್ನೇಹವಿರಲೀಶ್ವರನ ಶರಣರೊಳು ನಿಜಲಿಂಗ
ಮೋಹಿಯಾಗಿರು ಮೋಕ್ಷ ಬೇರಿಲ್ಲ ಮಗನೇ ॥ ೨ ॥

ಗುರುಸೇವೆಗಲಸದಿರು ಹರಪೂಜೆಯೆನು ಮಾಡು
ಚರಲಿಂಗ ದಾಸೋಹಿಯಾಗಿ ಬಾಳು

ಪರಮಗುರು ಚೀಲಾಳಸ್ವಾಮಿ ಶರಣರ
ಚರಣಸ್ಮರಣೆಯನೆ ಮಾಡು ಸಹಜಾನಂದ ಮಗನೇ ॥ ೩ ॥

೧೧೯

ನಾಟಕ ಬೇರೆ ಕಾಣೊ ಸದ್ಗುರುವಿನ
ನಾಟಕ ಬೇರೆ ಕಾಣೊ ಶ್ರೀ ಗುರುವಿನ
ನಾಟಕ ಬೇರೆ ನಟಿಸ ಬಾರೆ ಕರಪೀಠ
ದಿಷ್ಟಬ್ರಹ್ಮದಿ ನೋಟ ನೆಲೆಗೊಂಡ ಮಹಿಮನ ॥ ಪಲ್ಲ ॥

ಗಣಕುಲ ಸಂಸ್ಮರಣನ
ಮಣಿ ಮಕುಟ ಚರಣನ
ಗುಣನಿಧಿ ಸುಜ್ಞಾನಬೋಧನ
ಪ್ರಣವಸ್ವರೂಪ ಗುರುವಿನ ॥ ೧ ॥

ವೀರಶೈವದ ಸಾರಷಟ್ಸ್ಥಲನ
ತಾರಕತ್ರಯದ ನೆಲೆಯ
ತೋರಿ ಬೋಧಿಸುವ ಮಹೇಶನ ॥ ೨ ॥

ಹೃನ್ಮಧ್ಯಸ್ಥಿರನ
ಮನ್ಮಥ ಸಂಹಾರನ
ಉನ್ಮನಿತತ್ತ್ವಸ್ವರೂಪನ
ಚಿನ್ಮಯ ಚೀಲಾಳಸ್ವಾಮಿಯ ॥ ೩ ॥

೧೨೦

ರಾಗ : ತೋಡಿ

ನಿನ್ನಮನಸಿನಲ್ಲೆ ನೀ ಧ್ಯಾನಿಸಿ
ಚೆನ್ನಾಗಿ ತಿಳಿದುನೋಡೊ
ನೆನ್ನೆ ಸಾಯಂಕಾಲ ಸೌಜ್ಞೆಯದ
ಹೊತ್ತಿಲಿ ಕಂಡ ಶ್ರೀ ಗುರುಮೂರ್ತಿ ॥ ಪಲ್ಲ ॥

ತರಣೇಂದುಶಿಖಿ ರನ್ನದ ದೀಪ್ತಿಗಳೆಲ್ಲ
ಮರೆಯಾದರಡಗುವಂತೆ ಹೊರಗಣ ರೂಪೆಲ್ಲ
ಕರದಿಷ್ಟ ಬ್ರಹ್ಮದೊಳು
ಬೆರಸಿದ ಭಾವದ ಬೆಡಗಿನ ಸೌಜ್ಞೆಯ ॥ ೧ ॥

ಜಾಲಸೂತ್ರಗಳಂದದಿ ಒಳಹೊರಗೆಲ್ಲ
ಕೀಲಿಸಿ ಬೆಳಗುತಿ[ಹ] ದೇಹ
ಸಾಲುನಾಡಿಗಳೆಲ್ಲ ಮೂಲನಾಡಿಯ ಸೇರಿ ವಿ
ಶಾಲಿಷ್ಟಬ್ರಹ್ಮವೆ ತಾನಾದ ಸಾಕ್ಷಿಯ ॥ ೨ ॥

ಅದೃಶ್ಯವಾಗಿ ನಿಂದ ನಿಃಶಬ್ದ ಶ್ರೀ
ರುದ್ರ ಸುಬ್ರಹ್ಮಗಂಡ
ನಿದ್ರೆಯೊ ಶಿವಯೋಗ ಮುದ್ರೆಯೊ ಮರವೆಯೊ
ಚಿದ್ರೂಪ ಚೇಲಾಳೇಶ ತಾ ಮೌನವೋ ॥ ೩ ॥

## ೧೧೧

### ರಾಗ : ಮಧುಮಾಧವಿ

ನಿಶ್ಚಿಂತನಾಗಿರಬೇಕು ಪೂರ್ವ
ಪಶ್ಚಿಮಮಾರ್ಗವ ಸಾಧಿಸಬೇಕು ॥ ಪಲ್ಲ ॥

ಸೃಷ್ಟಿಭೋಗವ ತೊರೆಯಬೇಕು ಯೋಗಿ
ಇಷ್ಟಲಿಂಗವ ಪ್ರಾಣಪತಿಯೆನ್ನಬೇಕು
ಶ್ರೇಷ್ಠವಾದುದನೆ ಪಡೆಯಬೇಕು ಸಮಯ
ನಿಷ್ಠೆ ಸದ್ಗುರುಮಾರ್ಗವಿಡಿದಿರಬೇಕು ॥ ೧ ॥

ಶರೀರ ಪೂಸರವಾಗಬೇಕು ಪ್ರಾಣ
ಪರಿಣಾಮವಭಿಷೇಕ ಜಲವಾಗಬೇಕು
ಅರಿವೆ ಆರತಿಯಾಗಬೇಕು ಗುರು
ಚರಣವರ್ಚಿಸಿ ನಿಜವ ಬೆಸಗೊಳಬೇಕು ॥ ೨ ॥

ಶಿವಶಕ್ತಿ ಸ್ಥಲವರಿಯಬೇಕು ಯೋಗಿ
ರವಿ ಚಂದ್ರ ಶಿಖಿಮಂಡಲವ ತಿಳಿಯಬೇಕು ॥ ೩ ॥

ಮನದಿ ಮಂತ್ರವ ಜಪಿಸಬೇಕು ಹೊರಗೆ
ತನುವಿನ ವಿಧಿಗಳ ನಡೆಸಲೆಬೇಕು
ಘನಗುರುವನೆ ಸೇರಬೇಕು ಕರ
ವನಜದೊಳಿರುವ ವಸ್ತುವ ನಂಬಬೇಕು ॥ ೪ ॥

ಅಲಿಯನರೆದೆರೆಯಬೇಕು ಅದರ
ಮೇಲೆ ಖೇಚರಿಯ ಲಕ್ಷಣವನರಿಯಬೇಕು
ಮೂಲಸೂತ್ರವ ಹಿಡಿಯಬೇಕು ಯೋಗಿ
ಚೀಲಾಳಸ್ವಾಮಿಯ ಗುರುಕರುಣವಿರಬೇಕು ॥ ೫ ॥

೧೧೨

ರಾಗ : ಶಂಕರಾಭರಣ

ನೋಟವ ಮನವನೊಪ್ಪಿಸೊ ಯೋಗಿ ಬೇಗ ಕರ
ಪೀಠದ ಪ್ರಾಣಕಾಂತನ ಪಾದಾಂಬುಜಕೆ ॥ ಪಲ್ಲ ॥

ರೂಪಾದಿ ಸಕಲ ನಿಷ್ಕಲ ತತ್ತ್ವದೊಳಹೊರಗೆ
ವ್ಯಾಪಿಸಿ ಬೆಳಗಿ ತೋರುವ ಪರಬ್ರಹ್ಮವೊ
ಶ್ರೀ ಪಾಣಿಪೀಠದ ಪ್ರಭುವಿನಡಿಗಳಿಗೆ ನಿ
ಕ್ಷೇಪಿಸೊ ನಸುಬಿರಿದ ನಯನಪಂಕಜವ ನೀನು ॥ ೧ ॥

ನಗುರೋರಧಿಕವೆಂಬ ನಿಗಮಾಗಮ ಕೇಳು
ಬಗೆ ಬಗೆ ಧ್ಯಾನಗಳೆಲ್ಲ ಬಯಲಾಟ ಕಾಣೊ
ಹಗಲು ದೀವಿಗೆ ಹಸ್ತವು ಕಮಲ ಕಮಲ ಕರ್ತ ಪಾದ
ಯುಗಳ ಅರ್ಪಿಸೋ ವಿಲಾಮ (?) ಹೃದಯ ವಾರಿಜವನು ॥ ೨ ॥

ಎಳೆರವಿ ಶಶಿ ಮಿಂಚ ಪಳಿವ ಮೌಕ್ತಿಕ ಕರ
ತಳ ಜ್ಯೋತಿ ಕಳೆಗಳ ಬಳಗವೆಲ್ಲವನು
ಒಳಕೊಂಡ ವಸ್ತುವೆ ಕರದಿಷ್ಟ ಬ್ರಹ್ಮವೆಂದ
ಚಲ ತಿಳುಹರೆ (?) ಚೀಲಾಳಸ್ವಾಮಿ ಶಿವಶರಣರು ॥ ೩ ॥

೧೧೩

ರಾಗ : ತೋಡಿ

ನೋಡು ನೋಡಲೆ ನೋಟಗಾತಿ ತತ್ತ್ವ
ಗೂಡಿದೆ ಕರಪೀಠ ಜ್ಯೋತಿ
ಸಗುಣ[ದ] ಶಾಂಗುಲ ಮಂತ್ರಸೂತ್ರವಿಡಿದು ಎವೆ-
ಯಾಡದೆ ಅರೆವಿರಿದಂಬುಜದಂದದಿ ॥ ಪಲ್ಲ ॥

ಆದಿ ಮಧ್ಯಾವಸಾನ ಕಲೆಯು ಚಕ್ರ
ಭೇದ ಸ್ಥಳ ಕುಳ ಮುದ್ರೆ ನೆಲೆಯು
ಸಾಧಿಸಲರಸಿಲ್ಲದರಮನೆ ನಿಟಿಲಾಕ್ಷ
ನಾದ ಕರದಿಷ್ಟಲಿಂಗರಾಜೇಂದ್ರನ ॥ ೧ ॥

ದಳ ಕುಳ ವರ್ಣ ಮಾತ್ರೆಗಳ ಮೂರು
ಹೊಳೆಯು ಸಂಗಮದ ಕ್ಷೇತ್ರಗಳ ಹೊರಗೆ
ಒಳಗೆ ತುಂಬಿ ತುಳುಕಿ ಸೂಸುವ ಪ್ರಾಣ
ಕಳೆಯ ತಾರಕ ಕರಸ್ಥಲದಿಷ್ಟ ಬ್ರಹ್ಮವ ॥ ೨ ॥

ನೊಸಲ ಕೊಳದ ನಾದದುನ್ಮನಿಯ ಎರ
ಡೆಸೆಳ ಮಧ್ಯದ ಬೀಜಾಕ್ಷರಿಯ
ಶಶಿ ರವಿ ಶಿಖಿ ರನ್ನ ತಾರಕಜ್ಯೋತಿ ಸಮ-
ರಸ ಮಂತ್ರಮೂರ್ತಿ ಕರಸ್ಥಲದಿಷ್ಟಬ್ರಹ್ಮವ ॥ ೩ ॥

ಹರಿ-ಅಜ ಸುರಪರರರಿಯದ ವೇದ
ಸುರ ಮನು ಮುನಿಗ[ಳಿ]ಗಗೋಚರದ
ದರುಶನ ಪಲಬಗೆ ಮತಬೋಧೆಗಸದಳದ
ಗುರು ಕಟಾಕ್ಷದ ಕರಸ್ಥಲದ ಶಾಂತೇಶನ ॥ ೪ ॥

ಮೂಗಿನ ಮೂಲ ಚಿತ್ಕಳೆಯ ದ್ವಿದ
ಳಾಗ್ರ ದಿವ್ಯಪುತ್ಥಳಿಯ
ಬಾಗಿಲಗೊಳದ ಪ್ರಮಥ ಸೆಜ್ಜೆಯೊಳು ಶಿವ-
ಯೋಗಿ ಚೇಲಾಳಸ್ವಾಮಿಯ ಕರಸ್ಥಲದಯ್ಯನ ॥ ೫ ॥

೧೧೪

ರಾಗ : ಯರಕಲ ಕಾಂಬೋದಿ

ಪಾದವೆಚ್ಚರಿಕೆ ಶ್ರೀಪಾದಾವಧಾನ
ಈ ದೇಹ ಕೈವಲ್ಯ ಪದದ ಗುರುಪಾದ
ಪಾದವೆಚ್ಚರಿಕೆ ಗುರುಪಾದಾವಧಾನ ॥ ಪಲ್ಲ ॥

ಆದಿ ಪರಶಿವ ಶಕ್ತಿ ಹೃದಯ ಸರಸಿಜಪಾದ
ಮಾಧವಜರುಗಳ ವಾದವ ಗೆಲಿದಪಾದ
ವೇದ ಶಾಸ್ತ್ರಾಗಮಗಳರಸಿ ಕಾಣದಪಾದ
ನಾದಮಯ ಪ್ರಭು ನಿಮ್ಮ ನಾಟಕದಪಾದ ॥ ೧ ॥

ಅಂಧಕಾಸುರನ ಕೊಂದು ಆಟವಾಡಿದ ಪಾದ
ಸಿಂಧುರದೈತ್ಯನ ಸೀಳಿ ತುಳಿದ ಮಹಪಾದ
ಮಂದಮತಿ ಪರವಾದಿಗಳ ಮರ್ದಿಸಿದಪಾದ
ಒಂದೆ ಪರಶಿವಮೂರ್ತಿ ವರದ ಗುರುಪಾದ ॥ ೨ ॥

ಅಡಿಗೆರಗಿದರ ಕಾಯ್ವ ಆನಂದಮಯಪಾದ
ಬಿಡದೆ ಭಜಿಪರ ಪೊರೆವ ಬಿರಿದಾಂಕ ಪಾದ
ಬಡವರಿಗೆ ಭಾಗ್ಯವನು ಕೊಡುವ ಬೆಡಗಿನಪಾದ
ಜಡಕರ್ಮಗಳನೊದ್ದು ಝಾಡಿಸುವಪಾದ ॥ ೩ ॥

ನವಖಂಡ ಪೃಥ್ವಿಯೊಳು ನಾಟ್ಯವಾಡುವಪಾದ
ನವಚಕ್ರಕಮಲದೊಳು ನಲಿವ ಮೃದುಪಾದ
ನವಕೋಟಿ ಸಿದ್ಧರಡಿಗೆರಗಿ ನುತಿಸುವಪಾದ
ರವಿ ಚಂದ್ರ ಕೋಟಿ ಪ್ರಕಾಶ ಮಹಪಾದ ॥ ೪ ॥

ಮೂಲಪ್ರಕೃತಿಯ ಶಿರದ ಮೇಲೆ ನಟಿಸುವಪಾದ
ನೀಲಮೈಯ್ಯನ ಕಣ್ಣ ಧರಿಸಿ ಮೆರೆವಪಾದ
ಕಾಲ ಕಾಮರ ಗೆದ್ದು ಕಲಿಯ ಕಟ್ಟಿದಪಾದ
ಚೇಲಾಳಸ್ವಾಮಿ ಸದ್ಗುರು ನಿಮ್ಮ ಪಾದ ॥ ೫ ॥

೧೧೫

ಬರಬೇಡ ಬಂದರೀಪರಿಯ ಗುಣವಿರಲಿ
ಕರಸ್ಥಲ[ದ] ಶಾಂತೇಶ ಮರಳಿ ಧರೆಗಿಳಿದು || ಪಲ್ಲ ||

ಪತಿಯಾಗಿ ಬರಲಿ ಪ್ರಾಮಾಣಿಕನೆನಿಸಿರಲಿ
ಸತಿಯಾಗಿ ಬರಲಿ ಸಾತ್ವಿಕಗುಣವಿರಲಿ
ಸುತನಾಗಿ ಬರಲಿ ಸುಜ್ಞಾನದ ನಡೆ ನುಡಿಯಿರಲಿ
ಯತಿಯಾಗಿ ಬರಲಿ ಎಲ್ಲವನು ತೊರೆದಿರಲಿ || ೧ ||

ಧನಿಕನಾಗಿಳಿದಲ್ಲಿ ಧಾತೃತ್ವ ಗುಣವಿರಲಿ
ಘನವ ಸಾಧಿಸುವಲ್ಲಿ ಗಾಂಭೀರ್ಯವಿರಲಿ
ಮನವ ನಿಲ್ಲಿಸುವಲ್ಲಿ ಮನಸಿಜ ಹಗೆಯ ಗೆಲಲಿ
ವನವಾಸಕಿಳಿವಲ್ಲಿ ಒಂದೆ ದೃಢವಿರಲಿ || ೨ ||

ಧರಣಿ ದೊರೆತನ ಬರಲು ದಾಸೋಹಿಯಾಗಿರಲಿ
ಶರಣನಾಗಿರಲಿ ಶಾಂತಿಯನೆ ಬೋಧಿಸಲಿ
ವಿರತನಾಗಿಳಿದಲ್ಲಿ ವಿಷಯಗುಣವಳಿದಿರಲಿ
ಚರಮೂರ್ತಿ ಚೀಲಾಳಸ್ವಾಮಿ ದಯವಿರಲಿ || ೩ ||

೧೧೬

ರಾಗ : ಸಾವೇರಿ

ಬ್ರಹ್ಮದ ಬಗೆ ಹೇಗೊ ಕಾಣದಲ್ಲ ಸುಮ್ಮನೆ
ಬ್ರಹ್ಮವೊ ಪೂರ್ವ ಸಮ್ಮಂಧ || ಪಲ್ಲ ||

ತನು ತಾನೆ ಬ್ರಹ್ಮವೊ ಮನ ಮಹಬ್ರಹ್ಮವೊ
ತನು ಮನವೆರಡರ ಕೊನೆ ಬ್ರಹ್ಮವೊ
ತನು ಮನವೆರಡರೊಳನಿತಾಸೆಯಿಲ್ಲದೆ
ನೆನಹಿನ ಜ್ಞಾನವೆ ಘನ ಪರಬ್ರಹ್ಮವೋ || ೧ ||

ನೀನೆ ಬ್ರಹ್ಮವೊ ನಿನಗೆಂಬುದೆ ಬ್ರಹ್ಮವೊ
ನೀನು ನಾನೆಂದೆಂಬ ವಾ[ಕ್] ಬ್ರಹ್ಮವೊ

ನೀನು ನಾನೆಂಬಭಿಮಾನವಿಲ್ಲದೆ ನಿಂದ ನಿ
ದಾನ ಸುಜಾನವೆ ನಿಜಪುರ ಬ್ರಹ್ಮವೊ ॥ ೨ ॥

ಆದಿಯೆ ಬ್ರಹ್ಮವೊ ಅನಾದಿಯೆ ಬ್ರಹ್ಮವೊ
ಆದಿ ಅನಾದಿಯ ಕಲೆ ಬ್ರಹ್ಮವೊ
ಆದಿ ಅನಾದಿಯ ವಾದ ಮೀರಿದ
ನಾದ ಬ್ರಹ್ಮವೊ ಚೇಲಾಳೇಶ ಏ ಗುರುವೇ ॥ ೩ ॥

೧೧೭

ಭೋಗ ಮೋಕ್ಷಾನಂದಕರನಿಗೆ ಭವ
ರೋಗವಿಜಯ ಪರಶಿವನಿಗೆ
ಯೋಗಿಜನರು ಇಲ್ಲಿ ಹೇಗಿರುತಿಹರೆಂದು
ಶ್ರೀಗುರುವ ಬೆಸಗೊಂಡ ಶಿಷ್ಯನು ॥ ಪಲ್ಲ ॥

ಮನದ ಮಲಿನವನೆಲ್ಲ ತೊಳೆವರು ಶುಚಿ
ಯೆನಿಪ ವಿಭೂತಿಯನಿಡುವರು
ನೆನಹಿನ ಜ್ಞಾನವಸ್ತ್ರವ ಹೊದ್ದು ಶ್ರೀ ಮಹಾ–
ಘನಲಿಂಗ ಧ್ಯಾನದೊಳಿರುವರು ॥ ೧ ॥

ವಿರತಿ ಮುಗ್ಧೆಯೊಳ್ಸರಸವಾಡುತ ನಿಜ
ಗುರುಭಕ್ತಿ ತರುಣಿಯೊಡಗೂಡುತ
ಇರುಳು ಹಗಲು ವೇದ ಪ್ರಹುಢೆಯೊಡನಿರುತ ಮುಕ್ತಿ
ಹಿರಿಯರೊಳೇಕಾಂತವಾಡುತ ॥ ೨ ॥

ಶ್ರೀ ಸದಾಶಿವನೆ ತಾನೆನುತಲಿ ಬಂದ
ಲೇಸು ಕಷ್ಟವೆ ಸ್ವಾಮಿಗೆನುತಲಿ
ಈ ಶರೀರದ ಹಂಗ ಹರಿದು ಶ್ರೀ ಗುರು ಚೇಲಾ
ಳೇಶನ ಧ್ಯಾನದೊಳಿರುವರು ॥ ೩ ॥

೧೧೮

ರಾಗ : ವಸಂತ ಭೈರವಿ

ಮರೆಯದಿರು ಮನವೆ ಗುರುಮಾಡಿದುಪಕಾರವನು
ಪರಿಭವವನೊರಸಿ ಪರಮಾತ್ಮನೆನಿಸಿದನ || ಪಲ್ಲ ||

ತನು ತ್ರಿಪುರಹರ ರುದ್ರ ಮನಸಿಜ ವನ[ನ]ನಲಾಕ್ಷ
ಇನ ನೇತ್ರ ಪ್ರಕೃತಿ ತಮ ಯಮಗರ್ವ ಶೂಲಿ
ವಿನುತ ದಯಶರಧಿ ವಿರತಜನ ನಿಜ ಮೋಕ್ಷ
ಘನಮಹಿಮ ಶ್ರೀವೀರಶೈವದೇಶಿಕನ || ೧ ||

ಮಲವಲೆಗೆ ಸಿಲುಕಿ ಬಳಲುವ ಶಲದಿ ಬಾಧೆಗಳ
ತೊಲಗಿಸಿ ನಿಜಾನಂದ ನೆಲೆಗೆ ನಿಲಿಸಿದನ
ಕಲುಷವನ ವಹ್ನಿ ಕಂಟಕ ಲತಾ ಲವಿತ್ರ ಮದಕಾಲ ಶೈಲ
ಕುಲಿಶ ಷಟ್ಸ್ಥಲದ ಗುರುವರನ || ೨ ||

ಪರುಷ ಲೋಹದ ಗುಣವನರಸುವದೆ ಶೃತಿಮತದಿ
ಮರಿದುಂಬೆ ಹುಳುಕನೆಣಿಸುವದೆ ಮಹಪುರುಷರ
ಚರಣಕೆರಗಿದವರನು ಪರಬ್ರಹ್ಮವೆನಿಸಿದನು
ಪರಮಗುರು ಚೀಲಾಳಸ್ವಾಮಿಯ ಧ್ಯಾನವನು || ೩ ||

೧೧೯

ರಾಗ : ಗೌಳಿ

ಮೆಲ್ಲಮೆಲ್ಲನೆ ಕರಪುರದ ಶಾಂತೇಶಗೆ
ಬಲ್ಲವರು ಕಣ್ಮನವನೊಪ್ಪಿಸಿದ [ರು] || ಪಲ್ಲ ||

ಅರಿಯರಾತ್ಮರು ಬೇರಿಟ್ಟರಸುವರೊಳಗೊಂದು
ಕುರುಹುಂಟೆ ಬಯಲ ಚೈತನ್ಯ ಚಿತ್ಕಳೆಯನು
ಪರಿಪೂರ್ಣ ಪರಂಜ್ಯೋತಿ ತಾರಕ ಪರಬ್ರಹ್ಮವು
ಕರಪೀಠದೆರೆಯಗರ್ಪಿಸಿ ಹೃದಯಾಂಬುಜವನು || ೧ ||

ಹಸಿರು ಹಳದಿ ಕೆಂಪು ಕರಿದು ಬಿಳಿದು ರವಿ
ಶಶಿ ತಾರೆ ಶಿಖಿ ರನ್ನ ಮಿಂಚುವರ್ಣಗಳ
ಪಸರ ಲಕ್ಷದ ಕದಿರತಾನೊಳಕೊಂಡ ವಸ್ತು[ವ] ಕರ
ವಿಸರುಹದೊಡೆಯಗರ್ಪಿಸಿ ನೇತ್ರಾಬ್ಜವನು ॥ ೨ ॥

ಮೇಲಕ್ಕೇರುವ ಕೆಳಯಿಕ್ಕಿಳಿವ ಜೀವಾತ್ಮನ
ಮೇಲಣ ಪರಮಾತ್ಮ[ರ] ದ್ವೈತ ಲಕ್ಷಣವನು
ಆಲಿಯನಂಗೈಯ್ಯ ಲಿಂಗಯ್ಯಗಿತ್ತವನೆ
ಚೀಲಾಳಸ್ವಾಮಿಯ ಸದ್ಗುರು ಪುತ್ರ ಕಾಣಿರೊ ॥ ೩ ॥

೧೨೦

ಶರಣು ಜಗದಾಧಾರ ಶರಧಿಗುಣ ಗಂಭೀರ
ಶರಣು ಸಮಯೋದ್ಧಾರ ಶಂಕರಾವತಾರ
ಶರಣು ಮಂಗಳಾಕಾರ ಶರಣು ಮಂತ್ರ ಶರೀರ
ಶರಣು ಸುರತರುವೆ ಶುಭಕರವೆ ಶ್ರೀ ಗುರುವೆ ಶರಣು ಶರಣು ॥ ಪಲ್ಲ ॥

ಶ್ರೀ ಗುರುವೆ ನಿಜಸುಖದಸಾಗರವೆ ಪೂರ್ಣೇಂದು
ಯೋಗಿ ಜನಮನದ ನಿ[ಜ] ಸರಸಿ ಏಕಾಂತ ಹಂಸೆ
ನಾಗ ನರ ಸುರವಿಭುವೆ ನಟ ನಾಟಕದ ಪ್ರಭುವೆ
ಭೂ ಗಗನ ಸ್ಥಿತಿ ಕೀರ್ತಿ ಭೂರುದ್ರಮೂರ್ತಿ ॥ ೧ ॥

ಗಜಮುಖನ ನಿಜ ಜನಕ ಗೌರಿ ಷಣ್ಮುಖ
ಅಜ ಹರಿ ಸುರಪಪಾಲ ಆನಂದಲೀಲ
ಸುಜನಜನ ನಿಜಮೋಕ್ಷ ಸೂಲಿ ಕರುಣಕಟಾಕ್ಷ
ತ್ರಿಜಗಜನ ಮಂದಾರ ತ್ರಿಪುರ ಸಂಹಾರ ॥ ೨ ॥

ಶ್ರೀ ವೀರಶೈವ ಸಂಜೀವನ ಷಟ್ಸ್ಥಲಬ್ರಹ್ಮ
xxಭಕ್ತರ ಹೃದಯದೇವ ಯತಿರಾಯ
ಸ್ಥಾವರದ ಜಂಗಮದ ಚೈತನ್ಯ ಮಹಾನು
ಭಾವಿ ಲಿಂಗಾಂಗ ಸಮರಸ ತತ್ತ್ವಬೋಧ ॥ ೩ ॥

ಶ್ರೀ ಯಶೋ ಶೃಂಗಾರ ನಿಷ್ಠಾವಂತ ಧಾತ
ಕಾಯ ಜೀವ ಮದಾಪಹಾರ ಕಾರಣಾವತಾರ
ವಾಯು ಮನ ಶಿಖಿ ಬಿಂದು ವಾತಾಗ್ನಿ ಬ್ರಹ್ಮಾನಂದ
ಮಾಯಪಾಶ ವಿನಾಶ ಮಂತ್ರೋಪದೇಶ ॥ ೪ ॥

ಅದ್ರಿ ಘನಕೋದಂಡ ಆತ್ಮತರ್ಕ ಪ್ರಚಂಡ ಗಿರಿ
ಮುದ್ರಾಪುರಾಧೀಶ ಮುಕ್ತಿಪ್ರಕಾಶ
ರುದ್ರಾವತಾರ ಜಯ ವೃಷಭವಾಹನ ಜಯತು
ಚಿದ್ರಮಣ ಚೇಲಾಳಸ್ವಾಮಿ ಶ್ರೀ ಗುರುವೆ ॥ ೫ ॥

೧೨೧

ರಾಗ : ಶಂಕರಾಭರಣ

ಹರ ಹರ ಹರ ಹರ ಹರಯೆಂದವರಿಗೆ
ಪರಿಭವ ಬಾಧೆಗಳಿಲ್ಲಿಲ್ಲ ॥ ಪಲ್ಲ ॥

ಸರಸಿಜಾಂಡ ಶಿವ ಸಾಹುಶ್ಯಂ
ಭರತಖಂಡ ಭವ ಬಾಹುಶ್ಯಂ
ಹರಿಯಜಸುರರಿಗೆ ವರಗಳ ಕೊಡುವಲ್ಲಿ
ಹರನಲ್ಲದೆ ಬೇರಿಲ್ಲಿಲ್ಲ ॥ ೧ ॥

ಶಕ್ತಿ ಸಹೋದರ ಸಾಹುಶ್ಯಂ
ಭಕ್ತ ಕೃಪಾಕರ ಬಾಹುಶ್ಯಂ
ಭುಕ್ತಿ ಮುಕ್ತಿಗಳ ಕೊಡುವಲ್ಲಿ ವಿ
ರಕ್ತರ ಭಟ ಸದ್ಗುರುವಲ್ಲದೆ ಬೇರಿಲ್ಲಿಲ್ಲ ॥ ೨ ॥

ಸದ್ಗತಿ ಸಾಧಕ ಸಾಹುಶ್ಯಂ
ಹೃದ್ಗತ ಬೋಧಕ ಬಾಹುಶ್ಯಂ
ಚಿದ್ಘನ ಚೇಲಾಳೇಶ್ವರನಲ್ಲದೆ
ಸದ್ಗುರು ಬೇರಿನ್ನಿಲ್ಲಿಲ್ಲ ॥ ೩ ॥

## ೧೨೨

### ರಾಗ : ಕಾಂಬೋದಿ

ಹಂಸನಾಡುತಿದೆ ಚಿದಾನಂದ ಹಂಸಾನಾಡುತಿದೆ ತನ್ನ
ಸಂಶಯವಳಿದು ನಿಜಾನಂದ ಪದದಲ್ಲಿ ಹಂಸ ॥ ಪಲ್ಲ ॥

ಅಯ್ಯಗಳನುಭಾವವೆಂಬ ಲಗ್ನವ ಕೇಳಿ
ಕೆಯ್ಯ ಕಾಲನೆ ಮುಟ್ಟಿ [ಓಜೆ]ಯಿಂದ
ಕ್ರಿಯಾಜ್ಞಾನವೆಂಬ ಕೀರ್ತಿಕಂಭವನಿಕ್ಕಿ
ವೈಯ್ಯಾಪುರದ ಮೇಲೆ ತೈ ತೈಯೆನುತಲಿ ॥ ೧ ॥

ಊರ್ಣನಾಭಿಯ ತಂತು ಸ್ವರ್ಣದಾರ[ದ] ನೂಲ
ಚೂರ್ಣದಿ ಪುಟ[ವಿ]ಕ್ಕಿ ಬಡಿವುತಲಿ
ನಿರ್ಣಿರಿ ನಿಟಿಲೆಂಬ ಶಬ್ದವನಾಲಿಸಿ
ವರ್ಣಾತೀತ ದಶವನೆಗಳನು ದಾಂಟಿ ॥ ೨ ॥

ಆಯದಾಯವ ಬಿಟ್ಟು ಅನುಭಾವ ಕರಿಗೊಂಡು
ಕಾಯ ಜೀವದ ಚಿಂತೆ ಇನಿತಿಲ್ಲದೆ
ವಾಯೂರ್ವನಸವೆಂಬ(?) ಪಕ್ಕವ ಪರಿದಿಕ್ಕಿ
ಮಾಯಾಪಾಶವ ಮೀರಿ ಮಂತ್ರವ ಜಪಿಸುತ ॥ ೩ ॥

ಆರ್ಯರು ಪೇಳುವರಂತ ಸುಷುಪ್ತಿಯ
xxxxಮಧ್ಯಕಂಡ ಸ್ವಪ್ನವನು
ಪರ್ಯಾಯ ನೇತ್ರ ಜಾಗ್ರತತಿಯ ನೀಗಿ
ತುರ್ಯಾತೀತನಾಗಿ ತುಟ್ಟತುದಿಯನೇರಿದನು ॥ ೪ ॥

ಪ್ರಾಣೋಪಾನವಗೂಡಿ ಹೃದಯಕಮಲ ಮಧ್ಯ
ಕೋಣೆಯೊಳಗೆ ಜಗಜಗಿಸುತ್ತಿಹ
ಮಾಣಿಕಜೋತಿಯ ಬೆಳಗಿನೊಳಗೆ ಚಿತ್ರ
ವೀಣ ಬೇಲಾಳೇಶ್ವರನನುಭಾವ ಸುಧೆಯುಂಡ ॥ ೫ ॥

೧೨೩

ರಾಗ : ಮಧುಮಾಧವಿ

ಹೋಗುವ ಬನ್ನಿರೆ ಬೇಗ ಶರಣೆಯರು ಶಿವ
ಯೋಗಿಯ ಸ್ವಾನುಭಾವವ ಕೇಳಿ ಬರುವ ॥ ಪಲ್ಲ॥

ಬಡನಡುವಿನ ಬಟ್ಟಕುಚದ ಬಾಲೆಯರು ಸೋ
ರ್ಮುಡಿಯ ಮೃದುನುಡಿಯ ಸಂಗಡದ ಶಕ್ತಿಯರು
ಕಡದ ಪುತ್ಥಳಿಯ ಪೋಲ್ವಡಿಯ ಶೃಂಗಾರದ
ಬೆಡಗಿ ಬಾ ಗುರುಪಾದವಿಡಿದು ಬೆಸಗೊಂಬ ॥ ೧ ॥

ತಳಿರಡಿಯ ತಾವರೆಯಮುಖದ ಮುಗುಳ್ನಗೆಯ
ತಳತಳಿಸುವ ತತ್ತ್ವಜ್ಞಾನವನೆ ಬಯಸುವ
ಎಳವೆರೆನೊಸಲಿನ ಏಣಾಕ್ಷಿ ಬಾರೆ ಮೂ
ರ್ಧ್ಕೊಳದ ವಿಸ್ತರವ ಸದ್ಗುರುವ ಕೇಳಿಬರುವ ॥ ೨ ॥

ತೋರದುರುಬಿನ ತೊಂಡೆವೆಣ್ದುಟಿಯ ರತಿಯ ಬಹು
ತೋರದ[ಸ್ತನದ] ಕೌಶಲ್ಯರಮಣಿ
ಮೂರುಮೂರ್ತಿಗಳ ನಾಟಕದ ಸೂತ್ರದ ಕೀಲ
[ನಾರಿ] ಶ್ರೀಗುರುವಿನಡಿಗೆರಗಿ ಬೆಸಗೊಂಬ ॥ ೩ ॥

ನಸುಗೆಂಪು ಹೊಸಹಳದಿಯೆಸಳ ಚಕ್ರಗಳ ನವ
ರಸ ರತ್ನಗೆಲಸದ ಕುಸುಮಮಂಟಪದೆ
ಶಶಿಮುಖಿಯೆ ಲಿಂಗಾಂಗದ ಬೆಸುಗೆಯನುಭಾವವ
ಬೆಸಗೊಂಬ[ಬಾ]ರೆ ದೇಶಿಕನಂಘ್ರಿಗೆರಗಿ ॥ ೪ ॥

ತುಂಬುಜವ್ವನದ ಮರಿದುಂಬಿಗುರುಳಿನ ದಾ
ಳಿಂಬದ ಬೀಜವ ಜರಿವ ಕೆಂಬಲ್ಲ
ರಂಭೆ ರಾಜಿಸುವ ನವಚಕ್ರ ಜ್ಯೋತಿರ್ಮಯದ
ಶಾಂಭವಿಯ ಚೀಲಾಳಸ್ವಾಮಿ[ಯ] ಬೆಸಗೊಂಬ ॥ ೫ ॥

❑ ❑

೧೨೪

ರಾಗ : ಮುಖಾರಿ

ಅಂಬರದೊಳಗೊಂದು ಅಮೃತದ ಶಿಶು ಹುಟ್ಟಿ ರಾಮಿತಮ್ಮ ರಸ
ದುಂಬಿ ಹಣ್ಣಾಯಿತು ಸವಿ ಹೋಗೊ ಎನ್ನಯ ರಾಮಿತಮ್ಮ ॥ ಪಲ್ಲ ॥

ಸೊಕ್ಕುಜವ್ವನೆಯ ಐಯ್ಯನ ನುಡಿಗೇಳಿ ರಾಮಿತಮ್ಮ ನಾನು
ಹೊಕ್ಕು ಸೇವಿಸೆನದ ಅಕ್ಕ ದಾರಿಯ ಹೇಳು ರಾಮಿತಮ್ಮ
ಮಿಕ್ಕವರಿಗೆ ಕೇಳು ಎಕ್ಕಳಾರಳವಲ್ಲ ರಾಮಿತಮ್ಮ
ಹೊಕ್ಕು ಹೊಗಲು ಭಯ ಇಕ್ಕೆಲದಲಿಯಲ್ಲಿ ರಾಮಿತಮ್ಮ ॥ ೧ ॥

ಹೊಳೆಮೂಱು ಹರಿವುತಾ ಹೊಳೆಯಿಲ್ಲ ವಾಯಸರಾ ಮುಂದೆ
ಬಲುಗಳ್ಳನುಂಟೊಬ್ಬ ಕಳೆಯಲವನಲತ್ತ ರಾಮಿತಮ್ಮ
ಸುಳಿದಾಡುತಿಹರೇಳು ಬಲುಮನ್ನೆಯರೆಲ್ಲ ರಾಮಿತಮ್ಮ ಅವ
ರುಳಿದು ಮುಂದಕೆ ಹೋದೆ ಚಲುವ ಕೇಳ್ಪ್ರೀಯದ ರಾಮಿತಮ್ಮ ॥ ೨ ॥

ಕರಿಯೆಂಟೀಗಳು ಸೊಕ್ಕಿ ಇರುತಿರೆ ಅವ ತಪ್ಪಿ ರಾಮಿತಮ್ಮ ದೊಡ್ಡ
ಕರಡಿ ಮಹಿಷನು ಹಲ್ಲುಗಿರಿವ ಪಂಚಾಸ್ಯನು ರಾಮಿತಮ್ಮ
ಮೊರನಂಥ ಗಡಸರ್ಪವಿರುವವೈ ಸು ವೀರ ರಾಮಿತಮ್ಮ ಅವ
ನೆರೆಗಂಡು ಅಂಜದೆ ಬರೆ ಮುಂದೆ ಭಯವಿಲ್ಲ ರಾಮಿತಮ್ಮ ॥ ೩ ॥

ಪುರವಾಱುವುಂಟು ಮುಂದಿರುವುದೊಂದಜಪುರ ಮುಂದೆ ರಾಮಿತಮ್ಮ
ಅರಸು ಶಿವನಪುರ ಪರಶಿವಪುರ ಮೇಲೆ ರಾಮಿತಮ್ಮ ಕೇಳು
ನೆಱೆ ಸದಾಶಿವನತ್ತಲಿರುವಲ್ಲಿಗೆ ದಾರಿ ರಾಮಿತಮ್ಮ ॥ ೪ ॥

ಎಣಿಕೆಗೆ ಕಾಣದ ಗುಣಿತಕ್ಕೆ ನಿಲುಕದ ರಾಮಿತಮ್ಮ ಪ್ರಾಣ
ಪ್ರಣವದು ಹೊಳೆವುದು ಕೇಳೆನ್ನಯ ರಾಮಿತಮ್ಮ
ಗುಣಿ ಚೆನ್ನಬಸವನೆಂಬಿನಿವಣ್ಣು ವಿಹುದದ ರಾಮಿತಮ್ಮ ಬೇಡಿ
ದಣಿದುಂಡು ಸುಖಿಯಾಗು ಮಣಿ ಎನ್ನ ಮುದ್ದಿನ ರಾಮಿತಮ್ಮ ॥ ೫ ॥

೧೨೫

ಅಂದೇನೆ ಅನ್ನಲಾಗದು ಅಂದಲ್ಲದೆ ಮನನಿಲ್ಲದು ॥ ಪಲ್ಲ ॥

ಲಿಂಗವ ಕಟ್ಟೇನೆಂಬೋನು ಕ
ವಂಗದ ಗುಣವ ಹಿಂಗದು
ಲಿಂಗದ ನೆಲೆ ಕಡೆ ತಿಳಿಯಾನು
ಲಿಂಗವ ಬಿಟ್ಟನ್ನು ನುಂಗೋನು ॥ ೧ ॥

ಗುರುವಾದೆನೆಂದೆಂಬೋನು ತಾ
ಪರದೈವಕೆ ಹೋಗಿ ಎರಗೋನು
ಪರಮಪ್ರಸಾದವ ಜರದು ಬೇನೆಗಂಜಿ
ಅರದು ಮದ್ದುಗಳ ಕುಡಿವಾನು ॥ ೨ ॥

ಸೊಸೆಗೆ ಬುದ್ಧಿಗಳನ್ನು ಹೇಳೋಳು
ಅಸಗನ ಮಗ್ಗಿಲೊಳಿರುವಳು
ಶಶಿಧರ ಕಲಿ ಚೆನ್ನಬಸವನ ಪಾದವ
ಹಸನ ತಾನಿನ್ನು ನೆನೆಯಳು ॥ ೩ ॥

೧೨೬

ರಾಗ : ದೇಸಿ

ಕೊಡುಬೇಗವೆಲೆದೇವ ದೃಢ ಭಕ್ತಿ ಲಂಚವನು
ಕೊಡದೆ ಇರಲು ಕಂಡು ನುಡಿವೆ ನಾ ನಿನ್ನ ॥ ಪಲ್ಲ ॥

ಹೆತ್ತವರಿಲ್ಲದ ಪುತ್ರ ನೀನೆಂದೆಂಬೆ
ನೆತ್ತಿಯೊಳೊಬ್ಬಳ ಪೊತ್ತವನೆಂಬೆ
ನೆತ್ತರು ಸುರಿವ ಕುಂಜರನ ಚರ್ಮಾಂಬರನೆಂಬೆ
ಭಕ್ತರಾಲಯದೊಳು ತಿರಿದುಂಡನೆಂಬೆ ॥ ೧ ॥

ಉರಿಗಣ್ಣನವನೆಂಬೆ ಉರಗಭೂಷಣನೆಂಬೆ
ಸರಸಿಜೋದ್ಭವನ ಶಿರವನರಿದನೆಂಬೆ
ಸಿರಿವರನಣುಗನನುರುಹಿದನೆಂಬೆ
ಗಿರಿನಂದನೆಯ ಕೂಡಿ ಬೆರದಿರ್ದನೆಂಬೆ ॥ ೨ ॥

ಕೆಂಭಾವಿ ಭೋಗನೊಳುರುಳಿಹೋದವನೆಂಬೆ
ನಂಬಿಯಣ್ಣನಿಗೆ ಹಡಪವ ಹೊತ್ತನೆಂಬೆ

ಕುಂಬರನಿದಿರೊಳು ಕುಣಿದಾತನೆಂದೆಂಬೆ
ಅಂಬಲಿಯನು ಚನ್ನನೊಡನುಂಡನೆಂಬೆ ॥ ೩ ॥

ಹುಟ್ಟಲಿ ಕಟವಾಯಿ ತಿವಿಸಿಕೊಂಡನೆಂಬೆ
ಹೊಟ್ಟೆ ಹಿಟ್ಟಿಗೆ ಒಬ್ಬರಾಳಾದನೆಂಬೆ
ಬಟ್ಟಕುಚದಿ ನಿಂದು ಓಯೆಂದೆವನೆಂದೆಂಬೆ
ನೆಟ್ಟನೆ ಸುಡುಗಾಡ ಕಾದಿರ್ದನೆಂಬೆ ॥ ೪ ॥

ವ್ಯಾಧನೊಬ್ಬನ ಕೈಯ್ಯ ಒದಸಿಕೊಂಡವನೆಂಬೆ
ಬೂದಿಮೈಯ್ಯವನೆಂಬೆ ಬಿಳಿದಂಗನೆಂಬೆ
ಕಾದಿದರ್ಜುನನಿಗೆ ಬೆನ್ನಾದನೆಂದೆಂಬೆ
ಸಾಧಿಸಿ ತ್ರಿಪುರವನು ಸುಟ್ಟ ತಾನೆಂಬೆ ॥ ೫ ॥

ಎನ್ನ ಮನ ಶಿವಭಕ್ತಿಯಾಂತು ಸಲಹಲು
ನಿನ್ನ ಮೂದೇವರದೇವನೆಂಬೆ
ಚೆನ್ನದಗಿರಿಯೊಳಗೆ ನಿತ್ಯನಾಗಿಹನೆಂಬೆ
ಚೆನ್ನಬಸವಗಿಂದ ಅಧಿಕರಿಲ್ಲೆಂಬೆ ॥ ೬ ॥

## ೧೨೭

ಮೆಚ್ಚುವರೆ ಅವರ ನಮ್ಮಚ್ಚಲಿಂಗಾಂಗಿಗಳು
ದುಶ್ಚರಿತ ದುರ್ಮಾರ್ಗಿಗಳ ಕಂಡಡೆ ॥ ಪಲ್ಲ ॥

ಗುರುವಿನೊಳು ತಪ್ಪುಗನ ಲಿಂಗ ಬೈದವನ
ಚರಮೂರ್ತಿಯನು ಕೊಂದ ಜಡಮನುಜನ
ಹರನ ಸದ್ಭಕ್ತರನು ಕುಲವೆತ್ತಿ ನುಡಿವವನ
ಪರಸತಿಯ ವರ್ತಿಸುವ ಕುರಿಮನುಜನ ॥ ೧ ॥

ವ್ರತವನಡೆಬಿಡದವನ ವ್ರತಗೇಡಿಗಳ ಮನೆಯ
ಲತಿ ಪ್ರೀಯದೊಳು ತಿಂಬ ಮತಿಹೀನನ
ಕೃತಕದಲಿ ಸಜ್ಜನರನತಿ ನೋಯಿಸುವ ನರನ
ಕ್ಷಿತಿಗಳೊಳು ಪಸುಗಳಿಗೆ ಸರಿಯೆಂಬರಲ್ಲದೆ ॥ ೨ ॥

ಹಣ ಹೊನ್ನು ಹೆಣ್ಣುವನು ಬಣಿತೆಯಿಂದಲಿ ಗಳಿಸಿ
ತ್ರಿಣೆಯನವರುಗಳಲ್ಲಿಗೈತಂದೊಡೆ
ಹೆಣನ ಕಚ್ಚುವ ಸುನಿಯ ತೆಱನಂತೆ ಗುರ್ರಿಡುವ
ಬಣಗುಮೂಳರ ತಲೆಯ ನೊಣೆಯದಿಕರೆ ॥ ೩ ॥

ಶಿವನ ಲಾಂಛನವಿಡಿದು ಭವಿಸೇವೆ ಮಾಡುವನ
ಶಿವಮಂತ್ರವನು ಭವಿಗೆ ಪೇಳುವವನ
ಶಿವಲಿಂಗ ಜಂಗಮವ ಭಜಿಸಿ ನೆರೆ ನಂ[ಬದ]ನ
ಭವಭಾರಿಯವನೆಂದು ಕಳೆವರಲ್ಲದೆ ॥ ೪ ॥

ಅಷ್ಟಾವರಣಂಗಳೊಳು ನಿಷ್ಠೆಯುಳ್ಳವರಾಗಿ
ಸೃಷ್ಟಿಪಾಲಕ ಚೆನ್ನಬಸವನಡಿಯ
ಕಷ್ಟ ಸಂಸೃತಿಯಳಿದು ಮುಟ್ಟಿ ಭಜಿಸುವರುಗಳ
ಎಷ್ಟಾದೊಡಂ ಬಿಡದೆ ಪೊಗಳುವರಲ್ಲದೆ ॥ ೫ ॥

## ೧೨೮

ಶಿವಯೋಗಿ ಶಿವಯೋಗಿ
ಭ[ವ] ಬಂಧನಂಗಳ ನೀಗಿ ನಿಂದರೆ ॥ ಪಲ್ಲ ॥

ಇಂದ್ರಿಯಬಾಧೆಯ ಕಳದು ಆತ್ಮದಿ
ಚಂದ್ರಧರನ ಪದವಿಡಿದು ನಿಂದರೆ ॥ ೧ ॥

ಮಾಯಾಪ್ರಪಂಚವ ಕಳದು ಮನಸಿನ
ಆಯಾಸವ ತಾ ತಿಳಿದು ನಿಂದರೆ ॥ ೨ ॥

ಚೆನ್ನಬಸವನೊಳು ಕೂಡಿ ಮೋಹದ
ಬಿನ್ನಣವನು ಈಡಾಡಿ ನಿಂದರೆ
ಶಿವಯೋಗಿ ಶಿವಯೋಗಿ ॥ ೩ ॥

## ೧೨೯

ಸಾಱಿ ಹೇಳಿದೆ ಮನವೆ ಕೇಳೆನ್ನ ಬುದ್ಧಿಯನು
ಮೀಱಿ ನಡದರೆ ಶರಣರೊಪ್ಪರೆಲೆ ಮನವೆ ॥ ಪಲ್ಲ ॥

ಮಱೆಯದಿರು ಮಂತ್ರವನು ತೊಱೆಯದಿರು ಸುಜನರನು
ಬೆಱತುಕೊಂಡಿರದಿರು ಹಿರಿಯನೆಂದು
ಮಱುಗದಿರು ವಿಷಯಕ್ಕೆ ನೆರಯದಿರು ಪರಸತಿಯ
ಜಱೆಯದಿರು ಗುರುಹಿರಿಯರುಗಳ ಕಂಡು ॥ ೧ ॥

ಬೇಡದಿರು ಜೀವರನು ಆಡದಿರು ಮೂಢರೊಳು
ಕೂಡದಿರು ಹರಶರಣರಲ್ಲದವರ
ಓಡದಿರು ನಿಂದ್ಯಕ್ಕೆ ಮಾಡದಿರು ಹಿಂಸೆಯನು
ಸೂಡದಿರು ಕುಸುಮವನು ಶಿವಗೀಯದೆ ॥ ೨ ॥

ಹುಟ್ಟಿಸದೆಯಿರು ಶರಣರೊಳಗೊಂದು ವಾಸನೆಯ
ಮೆಟ್ಟದಿರು ದುರ್ಗತಿಯ ಬಟ್ಟೆಗಳನು
ಮುಟ್ಟದಿರು ಲಿಂಗಕ್ಕೆ ಅಲ್ಲದುದ ಮತ್ತೊಂದ
ಕೆಟ್ಟಾಡದಿರು ಸಭೆಯ ನಡುವೆ ಕುಳಿತು ॥ ೩ ॥

ಹೋರದಿರು ಹಿರಿಯರೊಳು ಆಡದಿರು ಅನ್ಯರನು
ಬೀರದಿರು ಪ್ರಣವಮಂತ್ರವನು ಭವಿಗೆ
ತೋಱದಿರು ನಿನ್ನಿರವ ಧಾರುಣಿಯ ಮನುಜರಿಗೆ
ತಾರದಿರು ಅಪಕೀರ್ತಿಯನು ಗುರುವಿಗೆ ॥ ೪ ॥

ಸಟೆಯ ನೀನಾಡದಿರು ದಿಟವನತಿಗಳೆಯದಿರು
ನಟಿಸದಿರು ಪರಿಪರಿಯ ವೇಷಗಳನು
ಕಟಿಣದೊಳುವೊಬ್ಬರನು ನುಡಿಯದಿರು ಕೊಬ್ಬಿನಲಿ
ಪಠಿಸದಿರು ಕಾಮಶಾಸ್ತ್ರಗಳನೊಲಿದು ॥ ೫ ॥

ನಂಬಿದರ ಕೆಡಿಸದಿರು ಹಂಬಲಿಸದಿರು ಹಲವ
ನಂಬದಿರು ನಾರಿಯರೊಲುಮೆಗಳನು
ತುಂಬಿಕೊಂಡಿರದಿರು ಹೃದಯದೊಳು ಕ್ರೋಧವನು
ಬೆಂಬಿಡದೆಯಿರು ಮನವೆ ಧರ್ಮಗುಣವ ॥ ೬ ॥

ಸುಮ್ಮನಿರದಿರು ಮಾನ್ಯರನು ಕಂಡು ಗರ್ವದಲಿ
ಹಮ್ಮಾಡದಿರು ಹಲವ ಕಲಿತೆನೆಂದು

ನಮ್ಮದಿರು ದೇಹವನು ಸುಮ್ಮನೆ ಕೆಡುವುದನು
ಕಮ್ಮಗೋಲಾರಿಯನು ಮಱೆಯದಿರು ಮನವೆ ॥ ೭ ॥

ಮಱುಗದಿರು ಪರರು ಸಂತೋಷದೊಳಗಿರೆಕಂಡು
ಶಿರಬಾಗದಿರು ಅನ್ಯದೈವಗಳಿಗೆ
ಸಿರಿಗೆ ನೀ ಹಿಗ್ಗದಿರು ಸಿರಿತೊಲಗೆ ಕುಗ್ಗದಿರು
ಅಱಿತಱಿತು ಈಯದಿರು ಅಪಾತ್ರಕೆ ॥ ೮ ॥

ಜೀವಭಾವನವಳಿದು ದೇವ ಚೆನ್ನಬಸವನಡಿ
ದಾವರೆಯ ನಾವೀಗ ನೆನವುತಿರಲು
ಆರಭಯವೆಮಗಿಲ್ಲ ಕಾಮಾರಿ ಕೃಪೆಯಿಂದೆ
ಕೈವಲ್ಯಪದವಪ್ಪುದೆಲೆ ಆತ್ಮನೆ ॥ ೯ ॥

೧೩೦

ಬದುಕಿದೆನ್ನೆಯ್ಯ ಬದುಕಿದೆ
ಸದಮಲ ಗುರುವಿನ ಕರುಣದಿಂದಲಿ ನಾನು ಬದುಕಿದೆನ್ನೆಯ್ಯ ॥ ಪಲ್ಲ ॥

ಮಲಭಾಂಡಕಾಯವ ಸುಲಲಿತ ಮಂತ್ರದಿ ಶರಿರ
ದೊಳಗೆ ಪ್ರಕ್ಷಾಲನವ ಮಾಡಿ
ಒಲಿದು ಮೂಱೇಳುದೀಕ್ಷೆಯನು ಸುಲಭದಿ ತೋಱಿ
ಸುಲಲಿತ ಮಂತ್ರವ ಶ್ರವಣದೊಳಿಡಲಾನು
ಬದುಕಿದೆನ್ನೆಯ್ಯ............... ॥ ೧ ॥

ಗುರುತನ್ನ ಶಿರದ ಚಿತ್ಕಲೆಯ ಲಿಂಗದಿ ತುಂಬಿ
ಒರಸಿ ದುರ್ಲಿಖಿತವ ಭಸಿತದಿಂದ
ಶಿರದೊಳು ಕರವಿಟ್ಟು ಕರುಣದಿಂದೀಕ್ಷಿಸಿ
ಶರಿರದ ಕರದಲ್ಲಿ ಕೊಡಲಿಷ್ಟಲಿಂಗವ
ಬದುಕಿದೆನ್ನೆಯ್ಯ............. ॥ ೨ ॥

ಆದಿ ಅನಾದಿಯಿಂದತ್ತಾದ ವಸ್ತುವ
ನಾದ ಬಿಂದು ಕಳೆಗತಿಶಯದ

ವೇದ ವೇದಿಸಿ ಕಾಣದಿಹ ಲಿಂಗವ
ಭೇದಿಸಿ ತಂದಿತ್ತನಾದಿದೇಶಿಕನಿಂದ
ಬದುಕಿದೆನ್ನೈಯ್ಯ........ ॥ ೩ ॥

ವರ ಗುರು ಲಿಂಗ ಜಂಗಮದ ಪಾದೋದಕ
ಚಿರ ಸುಪ್ರಸಾದ ಘನಮಂತ್ರದ
ಪರಮ ವಿಭೂತಿ ರುದ್ರಾಕ್ಷಿ ಲಿಂಗದ
ಯಿರವ ತೋಱಲು ಘನ ಶರಿರದೊಳಗೆ ತಾಳ್ದು
ಬದುಕಿದೆನ್ನೈಯ್ಯ ॥ ೪ ॥

ಇಳೆಯ ತಮಂಧಕ್ಕೆ ನಲಿನಸಖನು ನೆಱೆ
ಥಳಿಲನುದ್ಯೆಸಿದ ತೆಱದಂದದಿ
ಅಳಿದೆನ್ನ ಭವಗಳ ಕರಕಮಲದಿ ನಿಂದ
ಭಲರೆ ಮದ್ಗುರು ಚೆನ್ನಬಸವಲಿಂಗನ ಕಂಡು
ಬದುಕಿದೆನ್ನೈಯ್ಯ ಬದುಕಿದೆ ॥ ೫ ॥

೧೩೧

ಕೂಗುತಿದೆ ಕುಟಿಲ ಹೆಚ್ಚಿ ಸಾಗುತಿದೆ ಹುಸಿಯ ಮಸಕ ಎನ್ನ ಗುರುವೇ
ಆಗುತಿದೆ ಕೋಪವೆಂಬುದೀಗವೀಶ ಹರಿಸೈಯ್ಯ ಎನ್ನ ಗುರುವೇ
ಜೂಗುತಿದೆ ವಿಷಯಕಾಗಿ ಹೋಗುತಿದೆ ಪರರವಧುವಿಂಗೆನ್ನ ಗುರುವೇ
ಕೇಗುತಿದೆ ಪರರ ನಿಂದ್ಯರಾಗಿ ಮನವ ಮಾಣಿಸಯ್ಯ ಎನ್ನ ಗುರುವೇ॥ ೧ ॥

ಬೆಳವುತಿದೆ ಲೋಭ ಹೆಚ್ಚಿ ಸುಳಿವುತಿದೆ ಮಾಯ ಮೋಹ ಎನ್ನ ಗುರುವೇ
ತೊಳಲುತಿದೆ ಕ್ರೋಧ ನಿಮ್ಮ ನೆಲೆಯ ಸೇರಲೀಯದ್ಯೆ ಎನ್ನ ಗುರುವೇ
ಸಲೆ ವಿದ್ಯ ಭೂವಳೆಯ ತಪಗಳು ಬಳಸಿ ಮುಂದುಗೆಟ್ಟೆ ಕಾಯೊ ಗುರುವೇ
ಕುಲಛಲಧನವು ರೂಪು ಮಲತು ನಿಲ್ವ ಪ್ರಾಯಮದ
ಎನ್ನ ಗುರುವೇ ॥ ೨ ॥

ಈಶ ಕಾಮನಾಶ ಕಾಲನಾಶ ಕಮಲವೈರಿಭೂಷ ಎನ್ನ ಗುರುವೇ
ಕೇಶವನೊಂದಿತ ಶೇಷಭೂಷ ಪಾಲಿಸೈಯ್ಯ ಎನ್ನ ಗುರುವೇ
ದೇಶರಕ್ಷಣ ನೀನೆನ್ನ ವಾಸ ಹೃನ್ಮಧ್ಯದಿ ನಿಂದು ಗುರುವೇ
ಸೂಸದಂತಿರೈಯ್ಯ ಚೆನ್ನಬಸವಲಿಂಗದೇಶಿಕ ಎನ್ನ ಗುರುವೇ ॥ ೩ ॥

೧೩೨

ರಾಗ : ಮುಖಾರಿ

ಆದಿ ಅನಾದಿಯಿಂದತ್ತತ್ತ ಅಂದಾದ ಜಂಗಮಲಿಂಗ ಅವ
ನಾದಿಯಂತಹುದಯ್ಯೋ ಬೋಧಿಸೆನಗೆ ಜ್ಞಾನಜಂಗಮ ॥ ಪಲ್ಲ ॥

ಅಂತರಂಗದಿ ಬಹುಜ್ಞಾನಿಯಾಗಿರುವನೆ ಜಂಗಮಲಿಂಗ
ಶಾಂತಿ ಸೈರಣೆ ಬಹಿರಂಗದಲ್ಲಿರುವನೆ ಜಂಗಮಲಿಂಗ
ಪಿಂತೆ ನಾನಾರೆಂದು ತಿಳಿದಾಚರಿಸುವನೆ ಜಂಗಮಲಿಂಗ
ಕಂತುಹರನ ಧ್ಯಾನ ಮುಂದುಗೊಂಡಿರುವನೆ ಜಂಗಮಲಿಂಗ ॥ ೧ ॥

ಲಿಂಗದಿ ಸತಿಸುತರಂಗದಿ ನಡೆವನೆ ಜಂಗಮಲಿಂಗ
ಹಿಂಗದೆ ಶರಣರಸಂಗದೊಳಿರುವನೆ ಜಂಗಮಲಿಂಗ
ಲಿಂಗಾಣತಿಯಿಂದ ಬಂದುದನುಂಬನೆ ಜಂಗಮಲಿಂಗ
ಅಂಗದಿಚ್ಛೆಗೆ ಹರಿದಾಡದೆ ಇರುವನೆ ಜಂಗಮಲಿಂಗ ॥ ೨ ॥

ಆಶೆ ರೋಷಗಳೆಲ್ಲ ನಾಶವಾಗಿರುವನೆ ಜಂಗಮಲಿಂಗ
ರಾಶಿ ಜೀವಿಗಳಿಗೆಲೇಸ ಹಾರೈಸುವನೆ ಜಂಗಮಲಿಂಗ
ಸೂಸದೆ ಮನವ ತೀವಿದರೆ ದೂರದೆ ನಿಂದನೆ ಜಂಗಮಲಿಂಗ
ದೇಶ ಪಾವನವಾಗಲೆಂದಾಚರಿಸುವನೆ ಜಂಗಮಲಿಂಗ ॥ ೩ ॥

ಕೂಡುವರೊಂದೆಡೆಗೆ ತಾನೆಡೆಯಾಡದಿರುವನೆ ಜಂಗಮಲಿಂಗ
ಕೊಡದೋರು ಸರಿ ಕೊಟ್ಟರು ಸರಿಯೆಂಬನೆ ಜಂಗಮಲಿಂಗ
ಒಡಲ್ವಾಸೆಗೆ ಒಬ್ಬರೆಡೆಯೊಳಿರುವನಲ್ಲ ಜಂಗಮಲಿಂಗ
ನಡೆಯೊಳು ನಾ ಘನವೆಂದು ನುಡಿವನಲ್ಲ ಜಂಗಮಲಿಂಗ ॥ ೪ ॥

ವಂದನೆ ನಿಂದನೆ ಸಮವೆಂದು ಕಾಣ್ಬನೆ ಜಂಗಮಲಿಂಗ
ಕುಂದು ಹೆಚ್ಚುಗಳಿಗೆ ಹೆಣಗುವವನಲ್ಲ ಜಂಗಮಲಿಂಗ
ಸಂದೇಹಿಯಲ್ಲ ಸಂಕಲ್ಪವ ಬಗೆಗೊಳ್ಳ ಜಂಗಮಲಿಂಗ
ಮುಂದು ಹಾರುವನಲ್ಲ ಮುದುಡುಗಾರನಲ್ಲ ಜಂಗಮಲಿಂಗ ॥ ೫ ॥

ಧರ್ಮಾರ್ಥಕಾಮಮೋಕ್ಷಗಳ ಕಾಂಕ್ಷಿಪನಲ್ಲ ಜಂಗಮಲಿಂಗ
ಪೆರ್ಮೆಯ ನಾಲ್ಕುಪದಗಳ ಬಟ್ಟೆಯನೊಲ್ಲ ಜಂಗಮಲಿಂಗ

ನಿರ್ಮಲಹೃದಯ ನಿಶ್ಚಿಂತನಾಗಿರುವ ಜಂಗಮಲಿಂಗ
ನಿರ್ಮೋಹಿಯಾಗಿ ನಿಸ್ಸಂಗಿಯಾಗಿರ್ದೊಡೆ ಜಂಗಮಲಿಂಗ ॥ ೬ ॥

ಕಡವಸವು ಸರಿ ಕಂಬಳಿಸರಿಯೆಂಬನು ಜಂಗಮಲಿಂಗ
ಷಡುರಸಾನ್ನವು ಸರಿ ಅಂಬಲಿ ಸರಿಯೆಂಬ ಜಂಗಮಲಿಂಗ
ಒಡತೆಯು ಸರಿ ಒಡದೋಡು ತಾ ಸರಿಯೆಂಬ ಜಂಗಮಲಿಂಗ
ಪೊಡವಿಯು ಸರಿ ಕೈಲಾಸವು ಸರಿಯೆಂಬ ಜಂಗಮಲಿಂಗ ॥ ೭ ॥

ಭಕ್ತರ ಗುರುಲಿಂಗಭಕ್ತರ ಚರಲಿಂಗ ಜಂಗಮಲಿಂಗ
ಭಕ್ತರ ಪಿತ ಮಾತೆ ಭಕ್ತಜನ ಬಂಧು ಜಂಗಮಲಿಂಗ
ಭಕ್ತರ ಜನಕ ಭಕ್ತರ ಜೀವದ ದಾರಿ ಜಂಗಮಲಿಂಗ
ಭಕ್ತರಿಚ್ಛೆಗೆ ವಶವಾಗಿ ತೋರ್ಪನೆ ಜಂಗಮಲಿಂಗ ॥ ೮ ॥

ಕಂತು ಕಾಲರ ಎದೆಯನು ಮೆಟ್ಟಿ ನಿಂದನೆ ಜಂಗಮಲಿಂಗ
ಸಂತತ ಷಡುಸ್ಥಲಮಾರ್ಗದಿ ನಡೆವನೆ ಜಂಗಮಲಿಂಗ
ಮಂತ್ರಗಳೊಳು ಮನಮಗ್ನವಾಗಿರುವನೆ ಜಂಗಮಲಿಂಗ
ಇಂತೀ ಅನಾದಿಜಂಗಮ ಚೆನ್ನಬಸವೇಶ ಜಂಗಮಲಿಂಗ ॥ ೯ ॥

೧೩೩

ರಾಗ : ದೇಸಿ

ಆರಿಗೆಯು ಆರಿಲ್ಲ ಹಾರೈಸದಿರು ಪರರ
ಮಾರಹರ ಗೌರೀಶನಲ್ಲದಲೆ ಮನವೇ ॥ ಪಲ್ಲ ॥

ಶರಧಿಗೆಯೂ ಹಿಮಕರಗು ಸಖವೆಂದು ಪೇಳುವರು
ಶರಧಿಯನು ಕುಂಭಸಂಭವ ನುಂಗಲು
ಶರಧಿಯನು ಬಿಡಿಸಿಕೊಂಡನೆ ಬಂದು ಚಂದ್ರಮನು
ಪರರು ತನ್ನವರೆಂಬುದಿದು ಕಷ್ಟ ಮನವೆ ॥ ೧ ॥

ಸರಸಿಜಗು ದಿನಕರಗು ನಂಟುತನವೆನುತಿಹರು
ಕರಿಬಂದು ಸರಸಿಜವ ಕೀಳ್ವೆಡೆಯೊಲು
ತರಣಿಬಂದಡ್ಡಲಾದನೆ ಶಶಿಯನುರಗೇಂದ್ರ
ಉರವಣಿಸಿ ಪಿಡಿವಲ್ಲಿ ಶರಧಿ ಚಿಂತಿಸಿತೆ ? ॥ ೨ ॥

ರಾವಣನ ಕೊಲಲೆಂದು ಮಾರುತನಸುತನಾಗ
ಭೂವಳೆಯದೊಳಗಿರ್ದ ಗಿರಿಯನೊಯ್ವ
ಠಾವಿನೊಳು ಬಂದೊಲಿಸಿಕೊಂಡನೆ ಗಿರಿಗಳಿಗೆ
[ಓಪ]ನೆನಿಸಿಕೊಳುತಿರ್ಪ ಗಿರಿರಾಜ ? ॥ ೩ ॥

ಸಿತಕಂಠ ರತಿರಾಜನಂಗವನು ಸುಡುತಿರಲು
ಪಿತನೆನಿಸಿಕೊಂಬ ನಾರಾಯಣನು ಗೌರೀ
ಪತಿಗನುವಾಗಿ ಹೇಳಿಕೊಂಡನೆ ಧಾತ್ರಿಯೊಳು ಪರರು
ಹಿತರೆಂದು ನಂಬುವದು ಮರುಳುತನ ಮನವೆ ॥ ೪ ॥

ಪಗಲೊಡೆಯನಿಗೆ ಯಮನು ಮಗನೆಂಬ ಶ್ರುತಿಯುಂಟು
ಆಗಜೇಶ ಕಾಲನಂ ಕೊಲುವೆಡೆಯೊಳು
ಅಘಹರಗೆ ಮುಂದುವರಿದನೆ ಯಮನು
ಜಗದೊಳಗಿನ್ನೆಂತು ನಂಬುವದನ್ಯರುಗಳ ? ॥ ೫ ॥

ವೀರಭದ್ರನು ಹರಿಯ ಗಾರುಮಾಡುವಡಱಿದು
ಮಾರ ತಮ್ಮಯ್ಯನೆಡೆಗೈತಂದನೆ ?
ವಾರಿಜೋದ್ಭವನ ಸಿರವರಿವಲ್ಲಿ ಪರಮೇಶ–
ಗಾರಡ್ಡಬಂದರಿದ ತಿಳಿ ನೀನೆ ಮನವೆ ॥ ೬ ॥

ಪಾವಕಾಂಬಕನಲ್ಲದಿನ್ನಾರು ನಿನಗಿಲ್ಲ
ಭಾವ ಮನ ಕರಣದೊಳು ಭಾವಿಸರು ನಿನ್ನ
ಸಾವು ಬಾಳಿನೊಳಿರ್ದು ಪೊರೆವನನ[ವ]ರತ ಗುರು
ದೇವ ಚೆನ್ನಬಸವೇಶನಡಿಯ ನೆ[ನೆ] ಮನವೆ ॥ ೭ ॥

೧೩೪

ರಾಗ : ದೇಶಿ

ಎಂತೆನ್ನ ನೋಡಿ ಪೊರೆದಪೆಯೊ ದೇವರದೇವ
ಪಿಂತೆ ನಾನೇನುವನು ಅಱಿದಾತನಲ್ಲ ॥ ಪಲ್ಲ ॥

ಗುರುಪಾದ ಪಯೋಜಕ್ಕೆ ಸಿರಬಾಗಿದವನಲ್ಲ
ಹರಪೂಜೆಗಳಿಗೆ ಮನಸಂದಾತನಲ್ಲ

ಗುರುಹಿರಿಯರುಗಳಿಗೆ ವಸ್ತ್ರಾನ್ನವಿತ್ತವನಲ್ಲ
ಪರಮಭಕ್ತಿಯ ನೋಡಿ ಬಾಳಿದವನಲ್ಲ ॥ ೧ ॥

ಓದಿದವನಲ್ಲ ಧರ್ಮಶಾಸ್ತ್ರಂಗಳನು
ಓದುವರ ಓದುಗಳ ಕೇಳಿದವನಲ್ಲ
ಆದಿಯ ಪುರಾತರಡಿಗಳ ನೆನದವನಲ್ಲ
ವೇದಾಢ್ಯರೊಡನೆ ಕೂಡಾಡಿದವನಲ್ಲ ॥ ೨ ॥

ಬರದಱಿಯೆ ಹಲವು ಸಂಗ್ರವನು ಕಂಠವ ಪಿಡಿದು
ಸ್ಮರಿಸಲಱಿಯೆನು ಪ್ರಣವ ಪಂಚಾಕ್ಷರವನು
ಬೆರಸಿ ನಾನಱಿಯೆ ಹರಶರಣ ಸಂದೋಹವನು
ತೋಱಿದಱಿಯೆ ಕಾಮಕ್ರೋಧವನು ಪರಶಿವನೆ ॥ ೩ ॥

ಬುಧರಿಗರೆಕಾಣಿಯನು ಕೊಟ್ಟಱಿಯೆ ಸುಖಮಿರ್ದು
ಮೃದುವಾಕ್ಯದಿಂದೊಬ್ಬರ ಕರದಱಿಯೆ
ಮುದದಿಂದ ಜಪತಪಂಗಳ ಮಾಡಲಾನಱಿಯೆ
ಒದಗಿ ಬರುತಿಹ ಭವನ ಗೆಲುವ ತೆಱನಱಿಯೆ ॥ ೪ ॥

ಶರರ ವಾಸನೆಗಳನು ತಿಳಿದಱಿಯೆ ಗುರುಮುಖದಿ
ಅಱಿವು ಮಱವೆಗಳೆಂಬ ಕುಱುಹನಱಿಯೆ
ಜಱಿದಱಿಯೆ ತ್ರಿವಿಧಮಲಗಳನು ನಾನಾಗಿ
ಪಱಿದಱಿಯೆ ಆಶರೋಷಗಳ ಪರಶಿವನೆ ॥ ೫ ॥

ಈಡಾಡಿದವನಲ್ಲ ಪರಮಪ್ರಸಾದವನು
ಮುಂಡಾಡಿದವನಲ್ಲ ಮುಕ್ತ್ಯಂಗನೆಯನು
ಕೊಂಡಾಡಿದವನಲ್ಲ ಶರಣರ ನಡವಳಿಯ
ದಂಡಿಸಿದವನಲ್ಲ ತನುಮನಂಗಳನು ॥ ೬ ॥

ಯತಿಯಲ್ಲ ವ್ರತಿಯಲ್ಲ ಅತಿಭಕ್ತಿ [ತ್ರಿ] ವಿಧವಿಲ್ಲ
ಮತಿವಂತನಾಗಿ ಗುಣವಂತನಲ್ಲ
ಶತಪತ್ರಸಖ ಚಂದ್ರ ಶಶಿನೇತ್ರ ಐಸೂತ್ರ
ಸಿತಕಂಠ ಚೆನ್ನಬಸವೇಶ ನೀನೊಲಿದು
ಎಂತೆನ್ನ ನೋಡಿ ಪೊರೆದಪೆಯೊ ದೇವರದೇವ ॥ ೭ ॥

೧೩೭

ರಾಗ : ಮುಖಾರಿ

ಪಾಲಿಸು ಎನಗೆ ಪಾವನತರ ಚರಿತೆಯ ಲಿಂಗತಂದೆ ಅಯ್ಯ
ಶೂಲಿಯೊಳಗೆ ಒಡವೆರದಾಚರಿಸುವದ ಲಿಂಗತಂದೆ ॥ ಪಲ್ಲ ॥

ಗುರು ಪರಶಿವನೆಂದು ಚರಣಕೆ ಮಣಿವುದ ಲಿಂಗತಂದೆ ಅಯ್ಯ
ಕರಕಂಜದೊಳಗಿಹ ಪರಮಲಿಂಗದಿ ಮನ ಲಿಂಗತಂದೆ
ಹರೆಹಿಂಗದಿರುವದ ಚರಲಿಂಗದೊಳಲಸದೆ ಲಿಂಗತಂದೆ ಅಯ್ಯ
ಎರವು ಮಾಡದೆ ಅದನೊರೆ ಎನ್ನ ಹೃದಯದಿ ಲಿಂಗತಂದೆ ॥ ೧ ॥

ಪಾದೋದಕ ಸು ಪ್ರಸಾದದಿ ಮನಸಂದು ಲಿಂಗತಂದೆ ಅಯ್ಯ
ನಾದವೆ ರೂಪ ತಾನಾದ ಭಸಿತ ಮಣಿ ಲಿಂಗತಂದೆ
ವೇದಕ್ಕೆ ಮಿಗೆ ಮನೆಯಾದ ಪ್ರಣವವನ್ನು ಲಿಂಗತಂದೆ [ಅಯ್ಯ]
ಮೂದೇವರೊಡೆಯನ ಪಾದವೆಂದಱಿವೊಂದ ಲಿಂಗತಂದೆ ॥ ೨ ॥

ಆಱುಚಕ್ರವನಱಿದಾಱು ಶಕ್ತಿಯರೆಂದು ಲಿಂಗತಂದೆ ತಿಳಿ
ದಾಱಂಗವೆಂದು ಮತ್ತಾಱು ಹಸ್ತಗಳಿಂದ ಲಿಂಗತಂದೆ
ಆಱುಲಿಂಗಗಳಿಗೆ ಆಱುದೈವವು ನೀವೆ ಲಿಂಗತಂದೆ ಅಯ್ಯ
ಮೋಱೆಯ ತೋಱಿಸೊ ಮಾರಾರಿ ಕೃಪೆಯಿಂದ ಲಿಂಗತಂದೆ ॥ ೩ ॥

ಆಸೆಯ ಬಿಡಿಸಿ ನಿರಾಸೆಯೊಳಿರಿಸಯ್ಯ ಲಿಂಗತಂದೆ ಅಯ್ಯ
ಈಶನೊಲಿದರಿಗೆನ್ನ ದಾಸತ್ವದೊಳಗಿಡು ಲಿಂಗತಂದೆ
ಈಷಣತ್ರಯದೂರ ಓಸರಿಸದೆ ಕೇಳು ಲಿಂಗತಂದೆ ಎನ್ನ
ದೋಷ ದುರ್ಗುಣಗಳ ನಾಶವ ಮಾಡಯ್ಯ ಲಿಂಗತಂದೆ ॥ ೪ ॥

ಹರಿ ಅಜ ಸುರಪದವಿಯನೊಲ್ಲೆ ಲಿಂಗತಂದೆ ಅಯ್ಯ
ಚಿರಕಾಲ ಕರುಣಿಸು ಶರಣರ ಸಂಗವ ಲಿಂಗತಂದೆ
ಸರಸ ಸಲಿಲದಿ ಬೆರದಂತೆ ನಿಮ್ಮೊಳು ಲಿಂಗತಂದೆ ಅಯ್ಯ
ಬೆರಸೆನ್ನ ತ್ರಾಹಿ ಮದ್ಗುರು ಚೆನ್ನಬಸವೇಶ ಲಿಂಗತಂದೆ ॥ ೫ ॥

೧೩೬

ಸುಖವಾಯಿತೆನಗೆ ಭವರುಜೆಗಳಿಲ್ಲಲೆ ಕಾಂತೆ
ಅಕಳಂಕ ಚಂದ್ರಶೇಖರದೇವರಿಂದ ॥ ಪಲ್ಲ ॥

ನಾರಿ ಕೇಳೆನ್ನ ಕರವಿಡಿದು ನಾಡಿಯ ನೋಡಿ
ಮೂರು ದೋಷಗಳು ಹೆಚ್ಚಿರಲು ಕಂಡು
ಮೂರುತನುವಿನ ಮೇಲೆ ಮೂರುಮುದ್ರೆಯನೊತ್ತಿ
ಮೂರುಗುಳಿಗೆಯನಿತ್ತು ಆರೈದ ರಮಣಿ ॥ ೧ ॥

ಭೂತಪಂಚಕವೆಂಬ ಧಾತು ಹೆಚ್ಚಿರೆ ಕಂಡು
ಜಾತಿಮುಂತ್ರಗಳಿಂದಲವನು ತೊಡೆದು
ಪ್ರೀತಿಚೂರ್ಣವನಿತ್ತು ವಾತಗುಣಗಳ ಕಳೆದು
ಆತ ಸಲಹಿದ ಕಾಣೆ ಜಾಣೆ ನಿನ್ನಾಣೆ ॥ ೨ ॥

ಭವರೋಗದೊಳು ಬಹಳ ನವೆದು ಸಿರನೋವುತಿರೆ
ನವಭಸಿತವನು ಘಣೆಗಿಡಲು ಬೇನೆ
ಭುವನದೊಳಗೆಂದೆಂದು ಬರಬಾರದೆನುತಲಿ
ಯುವತಿ ಸಲಹಿದ ಕಾಣೆ ಜಾಣೆ ನಿನ್ನಾಣೆ ॥ ೩ ॥

ಆಸೆಯೆಂದೆಂಬ ಜ್ವರವೆಗ್ಗಳಿಸುತಿರೆ ಕಂಡು
ಈಶಪದಜಲದ ಕಷಾಯವೆರದು
ಶೇಷಪ್ರಸಾದವನು ಸವಿದಿರು ಎಂದೆನುತ
ಬೇಸರದೆ ಪೇಳಿ ರಕ್ಷಿಸಿದ ಕಮಲಾಕ್ಷಿ ॥ ೪ ॥

ಹೆದರದಿರು ಮಗನೆ ಬಾರೆಂದು ಕರುಣಾಮೃತದ
ಉದುಕದಲಿ ಸಿರದೊಳೆದು ಮಹದರುವಿನ
ಹೊದಿಕೆಯನೆ ಹೊದಿಸಿ ಸ್ಥಿರಕಾಲ ಬಾಳೆಂದು
ಚದುರ [ಚೆನ್ನ] ಬಸವೇಶನೊರೆದ ಚಿತ್ಕಾಂತೆ ॥ ೫ ॥

೧೩೭

ಬಲ್ಲೆನೆಂಬಿರಿ ಶರಣರಿಂಗಿತವನರಿಯದನ
ಬೆಲ್ಲವನು ಕಲ್ಲೆಂಬ ಖುಲ್ಲಮಾನವನ ॥ ಪಲ್ಲ ॥

ಕುರಿಯು ಕಬ್ಬಿನ ರಸದಿರವನಱಿಯದೆ ಹೋಗಿ
ಗರಿದಿಂಬುದದರ ಹೆಸರೊಂದು ಪರಿಯೆ
ಪರಮಸಾರಾಮೃತದ ನೊರೆ ಸವಿದ ಬರಿಕನನು
ನರನೆಂದೊಡಾ ಮನುಜ ಕುಱಿಯಲ್ಲವೆ ? ॥ ೧ ॥

ಮಿಗೆ ದೊಡ್ಡ ನಗವಿರಲು ಸುನಿ ಪೋಗಿ ಬಗುಳಿದೊಡೆ
ಬಗುಳುವಡೆಯಾ ಸುನಿಯ ಪರಿಯದೊಂದು
ಅಘಹರನ ನೆಱಿಯಱಿದ ಸುಗುಣ ಶಿವಯೋಗಿಗಳ
ಬಗೆಯಿಂದ ಗಳಹುವನು ಸುನಿಯಲ್ಲವೆ? ॥ ೨ ॥

ದಾನಿ ದಾರಿಯೊಳು ಬರೆ ವಾನರಾತನ ಕಂಡು
ದಾನಿಯೆಂದಱಿಯದೇಡಿಸುವಡೇನು ?
ಜ್ಞಾನಿಗಳ ಜ್ಞಾನವಱಿಯದೆ ನುಡಿದನವ ಹೀನ
ಮಾನವನು ಸುದ್ಧ ವಾನರನಲ್ಲವೆ ? ॥ ೩ ॥

ನೆಱಿ ಮರುಳ ಗರಗರನೆ ತಿರುಗಿ ಸಿರದೇಱಿಗಿದೊಡೆ
ಧರೆದಿರುಗುತಿದೆ ಎಂ[ಬು]ದರಱಿವದೇನು ?
ನರ ತನ್ನೊಳಿರುವ ದುರ್ನಯ[ವ]ನು ಎಲ್ಲರೀ
ಪರಿಯೆಂದೊಡಾರದಡರಿಯಲ್ಲವೆ ? ॥ ೪ ॥

ರವಿಯ ಶಾಪಿಸಿ ಧೂಳ ಕವೆಯಲಿಡಲದು ತನ್ನ
ಕವೆ ಅದೆಂಬುದನರಿಯದವ ಜಾಣನೆ ?
ಭವರಹಿತ ಚೆನ್ನಬಸವೇಶ್ವರನ ಶರಣ
ನವಿಚಾರದಿಂ ಭವಕೆ ಗುರಿಯಹನೆ ? ॥ ೫ ॥

## ೧೩೮

### ರಾಗ : ಭೈರವಿ

ಮಂಜುಳಾಂಗಿ ಮಲಯಜಗಂಧಿ ಗುರುಸಿದ್ಧಯೋಗಿ
ಸಂಗಸುಖವನಗಲಿ ಹೋದನೆ ನೋಡಮ್ಮಯ್ಯ ॥ ಪಲ್ಲ ॥

ಕೊಂಕುಗುರುಳೆ ಕೋಕಿಲಗಾನೆ ಕೋವಿದಮುದ್ದು
ಶಂಕರ ಸನ್ನಿಭರೂಪನ ತೋರಲು ನಿನಗೆ

ಕಂಕಣವನು ಕೈಯ್ಯೊಳಿಡುವೆನೆ ಅದುವೊಲ್ಲದಿದ್ದರೆ
ಮುಂತೊಂದಿಡುವೆ ಮುತ್ತಿನಬೊಟ್ಟ ॥ ೧ ॥

ತೋರಮುಡಿಯ ತೋಯಜನೇತ್ರೆ
ತೋರಿಸ ಮುದ್ದುರಾಯನ ಎನ್ನ ಮನದ ಪ್ರೀಯನ
ತೋರಲು ನಿನಗೆ ಹಾರವನು ಹಾಗೆ ಕೊಡುವೆನು
ಅದುವೊಲ್ಲದಿದ್ದರೆ ಬೇರೊಂದಿಡುವೆ ಬೆರಳಿನುಂಗುರವ ॥ ೨ ॥

ಕನ್ನೆಕುಲದ ರನ್ನೆ [ಮೋ] ಹನ್ನೆ ಕರದು ತೋರೆ
ಚೆನ್ನಬಸವಪ್ರಿಯ ಮುರಿಗೆಯ ಗುರುಸಿದ್ಧ[ನ]
ಭಿನ್ನವಿಲ್ಲದೆ ಒಲಿದು ಕೂಡಿದ ನೀ ತಂದು ತೋರೆ
ಹೊನ್ನಬಳೆಯ ಕುಡು[ವೆ ಶೀಘ್ರ]ದಿ
ಅದುವೊಲ್ಲದಿದ್ದರೆ ಮುನ್ನೆ ಕೊಡುವೆ ಮೋಹ[ನಮಾಲೆಯ] ॥ ೩ ॥

❑ ❑

೧೩೪

ಬೆಳಗುವೆನಾರತಿಯ ಲಿಂಗೈಯ್ಯಗೆ
ಬೆಳಗುವೆನಾರತಿಯ ॥ ಪಲ್ಲ ॥

ವರ ಗುರುದೇವನ ಕರುಣದಿಂದಲಿ ಎನ್ನ
ಕರಕೆ ಹೊರಟು ಬಂದು ಹೊರಗೆ ಸತ್ಕ್ರಿಯದಿಂ ॥ ೧ ॥

ಹೊರಗಣ ವಿಷಯವ ಜರಿದು ತನ್ನಿರವ ತಾ
ನರಿದು ಚರಿಪ ಪ್ರಾಣೇಶ್ವರನೆ ಸುಜ್ಞಾನದಿಂ ॥ ೨ ॥

ಒಳಹೊರಗೆಂಬೆರಡಳಿದಿಪ್ಪ ಚನ್ನವೀರ
ಸುಲಲಿತ ಭಾವದಿಂ ನೆರೆದು ವೈರಾಗ್ಯದಿಂ ॥ ೩ ॥

ಬೆಳಗುವೆನಾರತಿಯ ಲಿಂಗೈಯ್ಯಗೆ
ಬೆಳಗುವೆನಾರತಿಯ

೧೪೦

। ಸ್ರಗ್ಧರಮಾಲಾವೃತ್ತ ।

ಶ್ರೀಮತ್ಕೈಲಾಸ ಹಸ್ತಾಂಬುಜದಮಲ ಲಸತ್ಪೀಠದೋಳಿಷ್ಟಲಿಂಗಂ
ಸೌಮ್ಯಾಚಾರಾನ್ವಿತಂ ಚಿದ್ಭಸಿತಧರ ತ್ರಿಪುಂಡ್ರೈಕಭಾಳಂ ನಿರಾಳಂ
ಸಾಮೋದಂ ವೀರಶೈವೋತ್ತಮ ಶರಣಜನ ಸ್ತೋತ್ರಪಾತ್ರಂ ಸುಗಾತ್ರಂ
ಸ್ವಾಮಿನ್ ಶ್ರೀ ಚನ್ನವೀರೇಶ್ವರನೆಮಗೊಲಿದಿಷ್ಟಾಘಮಂ ಮಾಳ್ಕೆ ನಿಚ್ಚಂ॥ ೧ ॥

। ಉತ್ಪಲಮಾಲಾ ।

ಶ್ರೀಕರ ವೇದಮಂತ್ರ ಕ್ರಿಯದೀಕ್ಷೆಗಳಿಂ ತನುಶುದ್ಧಿಗೆಯ್ದು ಸೌ
ಖ್ಯಾಕರದಿಷ್ಟಲಿಂಗಪತಿಗೆನ್ನನು ಭಕ್ತರ ಮಧ್ಯದೊಳ್ಕೃಪಾ
ಲೋಕನದಿಂದನೋಡಿ ವಿವಹಂ ನೆರೆ ಮಾಡಿದ ದೀಕ್ಷೆ ಶಿಕ್ಷೆ ಮೋ
ಕ್ಷೈಕ ಮಹೇಶದೇಶಿಕನೆ ಪಾಲಿಸುಗೆನ್ನನು ಚನ್ನವೀರನೇ ॥ ೨ ॥

ಚಾರು ಸುವೃತ್ತ ಮಧ್ಯ ವರ ವರ್ತುಳ ಗೋಮುಖ ನಾಳ ಪೀಠ ವಿ
ಸ್ತಾರಕ ಷಟ್ಸ್ಥಲಾಂಗದೊಳುಮಾಚರಣಾಧಿಕ ಲಿಂಗಷಟ್ಕ ಸಂ
ಪೂರಣಮಾಗಿ ರಂಜಿಪ ನಿರಂಜನಲಿಂಗವಿದೆಂದು ದಿವ್ಯ ಹ
ಸ್ತೋರುಣ ಪದ್ಮಪೀಠದೊಳಗಿತ್ತನೆ ಪಾಲಿಸು ಚನ್ನವೀರನೇ ॥ ೩ ॥

ಪಶ್ಚಿಮಚಕ್ರವಾಸ ಸಹಜಾಸ್ಪದ ಜಂಗಮಲಿಂಗದೇವನೇ
ನಿಶ್ಚಲ ನಿರ್ವಿಕಾರ ನಿರುಪಾಧಿಕ ಜಂಗಮಲಿಂಗದೇವನೇ
ಸಚ್ಚಿದುಪಾಧಿಭಕ್ತಿಯುತ ಚಿತ್ಕ್ರಿಯ ಜಂಗಮಲಿಂಗದೇವನೇ
ತ್ರಿಚ್ಚರಲಿಂಗ ಸಂಗ ಯತಿತುಂಗನೆ ಪಾಲಿಸು ಚನ್ನವೀರನೇ ॥ ೪ ॥

। ಚಂಪಕಮಾಲಾ ।

ಗುರುಚರಣಾಂಬು ಲಿಂಗದ ಪದೋದಕ ಜಂಗಮದಂಘ್ರಿತೀರ್ಥಸು
ಸ್ಪರುಶನ ವಾರಿಯುಂ ಅವಧರೋದಕವಾಪ್ಯಯನಾಂಬು ಹಸ್ತ ಪು
ಷ್ಕರ ಪರಿಣಾಮವಾರಿ ನಿರನಾಮ ಜಪಾಧಿಕ ಸತ್ಯವಾರಿಯುಂ
ಶಿರದೊಲು ತಾಳ್ದ ಶ್ರೀ ಗುರುವೆ ಪಾಲಿಸುಗೆನ್ನನು ಚನ್ನವೀರನೇ ॥ ೫ ॥

। ಮಲ್ಲಿಕಾಮಾಲಾ ।

ಸತ್ಯ ಸದ್ಗುರುಲಿಂಗ ಜಂಗಮಲಿಂಗದಿಂದುದಿಸಿರ್ದ ಸಂ
ಸ್ತುತ್ಯ ರೂಪಕ ಶುದ್ಧ ಸಿದ್ಧ ಪ್ರಸಿದ್ಧ ತ್ರೈವಿಧ ಶೇಷಮಂ

ಉತ್ತುಮೈಕ ನಿಜೇಷ್ಟಲಿಂಗಸಮೇತ ಭೋಗಿತ ನಿತ್ಯ ಸ
ದ್ವೃತ್ತ ಭಾವ ಪ್ರಸಾದಕಾಯನೆ ಚನ್ನವೀರನೆ ಪಾಲಿಸಾ ॥ ೬ ॥

ಶ್ರೀಮಹಾಶಿವಲಿಂಗದಂಗದ ಸಾರ ಚಿದ್ವೆಳಗಾದ ನಿ
ಷ್ಕಾಮಭೂತಿಯನುತ್ತುಮಾಂಗ ಪದಾಂತ ದಿವ್ಯ ಶರೀರದೊಳ್
ಪ್ರೇಮದಿಂ ವರ ಸ್ನಾನ ಧೂಳನ ಧಾರಣೈಕವ ಮಾಡಿಕೊಂ
ಡೀಮಹಿಯೊಳಗೊಪ್ಪಿ ತೋರುವ ಚನ್ನವೀರನೆ ಪಾಲಿಸಾ ॥ ೭ ॥

ಕಾರಣಾತ್ಮಕ ಲಿಂಗದೇವನ ಚಾರುವಕ್ತ್ರಗಳಾದ ವಿ
ಸ್ತಾರ ರೂಪ ಶಿವಾಕ್ಷಿಮಾಲೆಯನೆಯ್ದೆ ಕಂಠದೊಳೊಪ್ಪುವಾ
ಹಾರಮಂ ಬಲಹಸ್ತದೊಳ್ ಜಪಮಾಲೆಯಂ ನೆರೆ ತಾಳ್ದ ಸ
ತ್ಕಾರುಣಾಂಬುಧಿ ಚನ್ನವೀರನೆ ಪಾಲಿಸೆನ್ನ ನಿರಂತರಂ ॥ ೮ ॥

ಲಿಂಗದೇವನ ನಾಮವಾಗಿಹ ತುಂಗ ಮಂಗಳ ಮಂತ್ರಮಂ
ಸಾಂಗದೊಳ್ ಸ್ಮರಿಸುತ್ತ ಜಂಗಮಮಲಿಂಗದಾನಭವೈಕ ಪ್ರಾ
ಸಂಗಮಂ ಶರಣರ್ಗೆ ಬೋಧಿಸುತಂಘ್ರಿಯುಗ್ಮ ಸುಖಂಗಳಾ
ಪಾಂಗಿನಿಂದೊಲಿದೀವ ಶ್ರೀಗುರು ಚನ್ನವೀರನೇ ಪಾಹಿಮಾಂ ॥ ೯ ॥

ಪಾಹಿಮಾಂ ಕ್ರಿಯಲಿಂಗವೇ ಗುರುಲಿಂಗವೇ ಶಿವಲಿಂಗವೇ
ಪಾಹಿಮಾಂ ಚರಲಿಂಗಶೇಷ ಸುಲಿಂಗವೆ ಮಹಲಿಂಗವೇ
ಪಾಹಿಮಾಂ ಘನದಿಷ್ಟ ಪ್ರಾಣ ಸು ಭಾವಲಿಂಗವೇ ಸಂತತಂ
ಪಾಹಿಮಾಂ ಗುರುಚನ್ನವೀರ ನಿರಂಜನಾತ್ಮಕ ಲಿಂಗವೇ ॥ ೧೦ ॥

ಶ್ರೀ ನಿರಂಜನ ಶೂನ್ಯನಿಃಕಲಲಿಂಗವೇ ಮಹಲಿಂಗವೇ
ಧ್ಯಾನ ಮಂತ್ರ ಪ್ರಸಾದವೇ ಚರಲಿಂಗವೇ ಶಿವಲಿಂಗವೇ
ಜ್ಞಾನವೈಭವ ಯುಕ್ತ ಸದ್ಗುರುಲಿಂಗವೇ ಕ್ರಿಯಲಿಂಗವೇ
ಮಾನಿತಪ್ರಭು ಚನ್ನವೀರಮದಿಷ್ಟಲಿಂಗವೆ ಪಾಹಿಮಾಂ ॥ ೧೧ ॥

ವಾಮಹಸ್ತ ಸರೋಜದೊಳ್ ಘನ ಪ್ರಾಣಲಿಂಗವನಾಂತು ನಿ
ರ್ನಾಮ ಮಂತ್ರವ ಗೋಪ್ಯ ವಕ್ತ್ರದೊಳೈದೆ ಮೆಲ್ಲನೆ ಧ್ಯಾನಿಸು
ತ್ತಾ ಮಹೇಶ್ವರ ರೂಪ ತಾಳಿ ಶಿವೈಕ ಭಕ್ತಗಣಾಳಿಗೇ
ಪ್ರೇಮದಿಂ ಶಿವತತ್ತ್ವ ಬೋಧಿಪ ಚನ್ನವೀರನೆ ಪಾಹಿಮಾಂ ॥ ೧೨ ॥

ಮುಕ್ತಿಸಂಪದರೂಪ ಜ್ಞಾನಕಲಾಪ ದೀಪಿತಪಾದವೇ
ಯುಕ್ತಿ ಭಾವದ ಭಕ್ತರಂತರದಲ್ಲಿ ರಾಜಿಪಪಾದವೇ
ಭಕ್ತಿ ಜ್ಞಾನ ಕ್ರಿಯೈಕ ಶ್ರೀ ಗುರುಲಿಂಗ ಜಂಗಮಪಾದವೇ
ರಕ್ತಿಯಿಂದಲಿ ಪಾಲಿಸೆನ್ನನು ಚನ್ನವೀರನಪಾದವೇ ॥ ೧೩ ॥

। ಚಂಪಕಮಾಲಾ ।
ಜಯ ಮಹಲಿಂಗದೇವ ಜಯ ಜಂಗಮಲಿಂಗ ಮಹಪ್ರಸಾದ ಚಿ
ನ್ಮಯ ಶಿವಲಿಂಗದೇವ ಜಯ ಶ್ರೀ ಗುರುಲಿಂಗ ಘನಪ್ರಕಾಶ ಸಂ
ಜಯ ಕ್ರಿಯಲಿಂಗದೇವ ಜಯ ಶೂನ್ಯನಿರಂಜನಲಿಂಗದೇವ ಭ
ಕ್ತಿಯನೊಲಿದಿತ್ತು ರಕ್ಷಿಪ ಮಹಾಪ್ರಭುವೇ ಜಯ ಚನ್ನವೀರನೇ ॥ ೧೪ ॥

। ಸ್ರಗ್ಧರಮಾಲಾ ।
ಇಂತೊಪ್ಪುತಿರ್ಪ ಶ್ರೀ ಮದ್ಗುರುವರಿವಿನೊಳುಂ ಲಿಂಗಮಂ ಪ್ರಾಣದೊಳ್ಸಿ
ಶ್ಚಿಂತ್ಯೆಕ ಜ್ಞಾನದೊಳ್ ಜಂಗಮವನು ವರ ಜಿಹ್ವಾಗ್ರದೊಳ್ತೀರ್ಥವಂ ಘ್ರಾ
ಣಾಂತ್ಯ ಪ್ರಾದೇಶದೊಳ್ ಶೇಷವನು ನಿಜಮಹಾತ್ವಕ್ಕಿನೊಳ್ಭೂತಿಯಂ ನೇ
ತ್ರಾಂತ್ಯೆಕಸ್ಥಾನದೊಳ್ಸನ್ಮಣಿಯನು ಶ್ರುತಿಯೊಳ್ ಮಂತ್ರಮಂ ತಾಳ್ದ
ದೇವಾ ॥ ೧೫ ॥

ಇತಿ ಶ್ರೀಮದ್ಗುರುಸ್ತೋತ್ರದ ಅಷ್ಟಾವರಣಮಹತ್ತ್ವದ ವೃತ್ತಂಗಳು ಸಮಾಪ್ತ.

 

೧೪೧

ನೀಲಕಂಧರ ಪಾಲಿಪುದೆನ್ನ ಬಂಧುರ
ನೀಲಕಾಲವೈರಿ ನಿಮ್ಮ ನಿಜವನರಸಲೆಂತಯ್ಯ?
ಮೂಲಪ್ರಣವರೂಪ ಕೆಂಪಭೂಪಗೊಲಿದು ಮೆರೆದಯ್ಯ
ಅಂಗಜಾರಿಯೆ ನಿನ್ನಯ ಕೃಪಾಪಾಂಗದಿಂದೆನ್ನ ॥ ಪಲ್ಲ ॥

ತುಂಗ ಯೋಗೀಶ್ವರರ ಚರಣಕಮಲ ಭೃಂಗನೆನಿಸಯ್ಯ
ರಂಗಿಪ ಕೆಂಪೇಂದ್ರನ ಭಕ್ತಿಗೊಲಿದು ಬಂದು ನಿಂದಯ್ಯ
ಜಂಗುಳಿದೈವಗಳು ನಿಮ್ಮ ಪದವ ಕಂಡಹೇನಯ್ಯ?
ಹಿಂಗವೆನ್ನ ದುರ್ಗುಣಗಳ ನೋಡಿ ಕಾಡಬೇಡಯ್ಯ ॥ ೧ ॥

ಬಂಧುರಾಂಗನೆ ಹರುಷದಿಂದೆನ್ನನಿಂದು ನೋಡಯ್ಯ
ಮಂದಬುದ್ಧಿಯಿಂದ ನಾನು ನಿಮ್ಮ ನೆನೆಯಲಿಲ್ಲಯ್ಯ
ವೆಂದೆಂದಿಗೆ ನಿಮ್ಮ ಮರೆಯದಂತೆ ನಿಜವದೋರಯ್ಯ
ಮಂದರಾದ್ರಿನಿಲಯ ಗುಡಿಯಮಾರನಪುರದೊಳು ನಿಂದಯ್ಯ
ಚಂದದಿಂದೆ ನಿನ್ನ ಜ್ಞಾನಕಲೆಯೊಳು ಕೂಡಯ್ಯ ॥ ೨ ॥

ಕಾಲನಾಶನೆ ಪರಮಪುಣ್ಯಲೋಲವೇಶನೆ
ಕಾಲಕರ್ಮವಳಿದು ಮಾಯಜಾಲವನು ಬಿಡಿಸಯ್ಯ
ಬಾಲಚಂದ್ರಧರನೆ ಎನ್ನ ನಿನ್ನ ಪದದೊಳಿರಿಸಯ್ಯ
ಶೂಲದೊಳು ಪೆಣನ ತಾಳ್ದು ಹರಿಯ ಮನೆಯ ಪೊಕ್ಕಯ್ಯ
ಲೀಲಾಕಾರ ಶಿವನೆ ನಿನ್ನ ಮಹಿಮೆಯ ನೀನೆ ಬಲ್ಲೆಯಯ್ಯ ॥ ೩ ॥

ಸಿಂಧುಜೂಟನೆ ಕರುಣದಿಂದೆ ಬಂದು ನಿನ್ನಯ ಕಂದ
ನೆಂದು ಮೈಯ್ಯದಡಹಿ ಭವದ ಬಂಧನವಳಿಯಯ್ಯ
ಮುಂದುಗೆಟ್ಟು ಮೋಹಪಾಶದೊಳಗೆ ಬಿದ್ದೆನಲ್ಲಯ್ಯ
ಸ್ಕಂದ ಗಣಪ ವೀರಜನಕ ಮುನಿದು ಪೋಗಬೇಡಯ್ಯ
ಇಂದು ತಂದೆ ಕಂದಿಸದೆ ನೀನೆನ್ನನು ಕರೆಯಯ್ಯ ॥ ೪ ॥

ಮಂಗಳಾಂಗನೆ ನಿನ್ನಂಗವ ಕಂಗಳಿಂದಲಿ
ಪೋಗಿ ಕೃಷ್ಣ ಬ್ರಹ್ಮರರಸಿ ಭಂಗಬಟ್ಟರಲ್ಲಯ್ಯ
ಗಂಗೆ ಗೌರಿ ನಿಮ್ಮ ನೆಲೆಯನೆಂತು ತಿಳಿಯಲಿಲ್ಲ[ಯ್ಯ]
ಸಂಗಮೇಶ ಭಕ್ತಾನಂದಸರಧಿ ಚಂದ್ರ ಕಾಯಯ್ಯ
ತುಂಗ ಜ್ವಲಕಂಠೇಶ ಎನ್ನ ಸಾರಿ ಕೂಡಿಕೊಳ್ಳಯ್ಯ ॥ ೫ ॥

❑ ❑

೧೪೨

ಮಂಗಳಾರತಿ ಎತ್ತಿರೆ ಗಂಗಾಧರಗೆ ನಿಜಜಂಗಮಗೆ
ಕಂಗಳಾಗ್ರದಿ ರಂಜಿಪ ಮುರಿಗೇಶನಿಗೆ ಎನಗೀಶನಿಗೆ ॥ ಪಲ್ಲ ॥

ಚಂದ್ರಶೈಲಕೋದಂಡ ಚಂದ್ರಧರಗೆ ಕರಿಸಂಹರಗೆ
ಚಂದ್ರಾನಲ ರವಿನೇತ್ರ ಕೋದಂಡನಿಗೆ ಪ್ರಚಂಡನಿಗೆ
ಚಂದ್ರಕ ರೂಪೇಂದ್ರಜಹರಿವರಗೆ ಮಂಗಳಕರಗೆ
ಚಂದ್ರನಂದಿಯ ಮೇಲೆ ಕುಳಿತ ಸ್ಥಿರಗೆ ಸುರಚಿರವರಗೆ ॥ ೧ ॥

ಕಮಲನಾಭನ ಸಿರ ಕರಕಮಲದೊಳ್ಧರಗೆ ಚರ ಗುರು ಹರಗೆ
ಕಮ[ಲ] ನೇತ್ರವ ಚರಣದೊಳಟ್ಟಭವಗೆ ಗಿರಿಜೆಯಧವಗೆ
ಕಮಲಕೋರಕವಾಸ ಗುಣಗಂಭೀರಗೆ ಬಹು ಸುಂದರಗೆ
ಕಮಲ ಕಮಲ[ವ]ಧರಿಸಿದ ಮುರಿಗೇಂದ್ರನಿಗೆ ಯತಿಚಂದ್ರನಿಗೆ ॥ ೨ ॥

ಚಿನ್ಮೂಲಾದ್ರಿವಾಸ ಜಂಗಮಮಣಿಗೆ ಪರುಷದಕಣಿಗೆ
ಕಾಮಗೋಲನ ಸುಟ್ಟ ವ್ರತನಿಷ್ಠನಿಗೆ ಬಹುದೃಷ್ಟನಿಗೆ
ಒಮ್ಮನದವರಿಗೊಲಿದ ಮುರಿಗೇಶನಿಗೆ ಪರಮೇಶನಿಗೆ
ಬೊಮ್ಮ ಚಿಟ್ಟಗಿಬಸವಲಿಂಗನಿಗೆ ಮಲಭೇದನಿಗೆ ॥ ೩ ॥

೧೪೩

ಎಂತು ಮಱೆಯಲೆ ಕಾಂತೆ ನಾನು ಕಾಂತನ ಗುಣವ
ಚಿಂತಿಸಿ ತಾಳಲಾಱೆನಮ್ಮ ಶಾಂತಗುಣಾನ್ವಿತ
ಕಾಂತಿಪ್ರಪೂರಿತ ಚಿಂತಿತದಾಯಕ
ಕಂತುವಿನಾಶ ಸುಸ್ವಾಂತನ ನಾನು ॥ ಪಲ್ಲ ॥

ಆದಿಯನಾದಿವಸ್ತು ತಾನೆ ಜಂಗಮರೂಪ
ಮೋದದಿಂದಲಿ ತಾಳಿ ತಾನು
ಮೇದಿನಿಯೊಳಾ ತನ್ನ ಪಾದಕೆ ನಮಿಸಿದ
ಸಾಧಕರಿಗೆ ಶಿವಬೋಧೆಯ ಪೇಳಿದ
ಬಾಧಿತವಲ್ಲದ [ಯ] ಶೋದಿತ ಮಹಿಮನ ॥ ೧ ॥

ಅಷ್ಟಮದವನಡಿಮೆಟ್ಟಿ ಮನಸಿನೊಳಗೆ
ಶ್ರೇಷ್ಠ ಧ್ಯಾನವ ನೆಲೆಗೊಳಿಸಿ
ದುಷ್ಟೇಂದ್ರಿಯಗಳ ನಷ್ಟವ ಮಾಡಿದ
ನೆಟ್ಟನೆ ತನ್ನನು ಮುಟ್ಟಿ ಪೂಜಿಪರಿಗೆ
ಇಷ್ಟಾರ್ಥವ ಕೊಡುವಷ್ಟನಿಧಿಪನ ॥ ೨ ॥

ಜಡೆಯಚಿಕ್ಕಬಸವಸ್ವಾಮಿಯ ಸ್ವರೂಪ ನೆನೆದು
ಬಡವಾಯಿತ್ತೆನ್ನ ದೇಹವೀಗ
ಮೃಡನವತಾರನ ದೃಢವುಳ್ಳ ಮಹಿಮನ
ಆದಿ ನಡು ಕಡೆಯಿಲ್ಲದ ದೇವನ
ಬಿಡದಿರಲಾಱೆನು ಜಡಜದಳಾಕ್ಷಿ ॥ ೩ ॥

## ೧೪೪

ಗುಂಗುರದ ಬಾಧೆ ಬಿಡಿಸೊ ಗುಂಗುರಮಲ್ಲ
ಕಂಗಳಿಗೆ ನಿದ್ರೆ ಬಾರದು
ಗುಂಗುರದ ಬಾಧೆ ಬಿಡಿಸಿ ಬಸವಲಿಂಗನ ಪದದೊ
ಳ್ಸಾಂಗವಾಗಿ ನಿದ್ರೆಗೂಡಿ ಸೊಲ್ಲ ಲಾಲಿಸೊ ॥ ಪಲ್ಲ ॥

ರಕ್ತಕಾಯವ ನೋಡುತ ಕುಳಿತುಕೊಂಡು
ಯುಕ್ತಿಯಿಂ ದ್ವಾರವ ಮಾಡಿ
ರಕ್ತಪಾನವ ಮಾಡಿ ಶಕ್ತಿ ಸಂಪುಟವಾಗಿ
ರಕ್ತವರ್ಣವಾಗಿ ಹಾರುವ ಗೋಡೆ ಸೇರುವ ॥ ೧ ॥

ಹೊಸ ಹಚ್ಚಡವ ಹೊದೆದು ಮಲಗಿರಲು
ಕುಶಲದಿಂದೊಳಯಕೆ ಪೊಕ್ಕು
ವಿಶ್ವಾಸ ಮಾಡುವಂತೆ ಹಸಗೆಡಿಸಿ ನುಸುಳುವಂಥ
ಮಸಕದ ಬಾಧೆ ಬಿಡಿಸೊ ನೀನೆ ಮನ್ನಿಸೊ ॥ ೨ ॥

ಮನ ಮಾಯಿಯೆನಿಪ ಗುಂಗುರ ಎನ್ನ ಕಣ್ಗೆ
ಯಿನಿತು ನಿದ್ರೆಯ ಕೊಡದು
ಘನ ಶ್ರೀ ಜೆಡೆಯಚಿಕ್ಕಬಸವನ ಪಾದದಲ್ಲಿ
ಯನುವಾಗಿ ನಿದ್ರೆಗೊಡಿಸೊ ದಯವ ಸೂಸೊ ॥ ೩ ॥

 

## ೧೪೫

। ರತ್ನಾಕರ ವಚನ ।
ಲಿಂಗಸಂಗದೊಳು ಸಂಧಾನವಲ್ಲದೆ ಬಹಿ-
ರಂಗದ ಬಳಕೆ ನಮಗಿಲ್ಲ ಕಾಣಿರೊ ॥ ಪಲ್ಲ ॥

ಮಣ್ಣ ಸೋದಿಸುವ ಜಲಗಾರನು ತನ್ನಯ
ಚಿನ್ನದ ಮೇಲೆ ಕಣ್ಮನವಿಹಂತೆ
ಉಣ್ಣುತುಡುತೊಡಲ ಸಾಧಿಸುತಿರ್ದಡೆನಗಿನ್ನು
ಪ್ರಾಣಲಿಂಗದೊಳಗಿಚ್ಛೆ ಕಾಣಿರೊ ॥ ೧ ॥

ನಲ್ಲರ ಕೂಡೆ ನಡೆನುಡಿ ಪರರೊಳಗಿರ್ದ
ನಲ್ಲರ ಕೂಟ ಗೋಷ್ಠಿ ಮಾಡುತಿಹಂತೆ
ಬಲ್ಲವರೊಡನಾಡುತಿರ್ದಡೇನು ನಮಗಿನ್ನು
ನಲ್ಲ ಪ್ರಾಣಲಿಂಗದೊಳಿಚ್ಛೆ ಕಾಣಿರೊ ॥ ೨ ॥

ಯಾತಕಿಷ್ಟು ಭೇದಬುದ್ಧಿಯುಂಟಾಗಿ ತೋರುವದೆಲ್ಲ
ಭೂತಿಕಯುಕ್ತವಲ್ಲ ಮರವೆಯಲ್ಲದೆ
ಭೂತೇಶನ ಪದಧ್ಯಾನಲ್ಲದೆ ಪೆರತಿಲ್ಲವೆಂದು ನಮ್ಮ
ಜ್ಯೋತಿರ್ಮಯಲಿಂಗದೊಳಗಿಚ್ಛೆ ಕಾಣಿರೊ ॥ ೩ ॥

❑ ❑

೧೪೬

ನಿನ್ನ ಮೋಹದ ಭಕ್ತರಾರು ಪ್ರ–
ಸನ್ನ ಮೂರುತಿ ತಿಪ್ಪೇರುದ್ರ ದಯಾಳು ॥ ಪಲ್ಲ ॥

ಮಾಡೋದು ನೂರಾರು ತಪ್ಪು ನೀ ನೋಡಿ ಕಾ–
ಪಾಡಿಕೊಂಬುದೆ ನಿನಗೊಪ್ಪು
ಮೂಢರ ರಕ್ಷಿಸೊ ಒಪ್ಪು ಈ
ರೂಢಿಯೊಳಗೆ ನಿನ್ನ ನೆನೆವುದೆ ಒಪ್ಪು ॥ ೧ ॥

ಅರಿಗಳಾಭರಣೆಯ ನಿಲಿಸು ಅತಿ
ಗರುವಿಕೆತನಗಳೆಲ್ಲವ ಪರಿಹರಿಸು
ಗುರುಮೂರ್ತಿ ಎನ್ನನುದ್ಧರಿಸು ನಿಮ್ಮ
ಚರಣಸೇವಕನೆಂಬೊ ಬಿರಿದು ನೀ ರಕ್ಷಿಸು ॥ ೨ ॥

ಧರೆಯೊಳು ಚೆನ್ನೂಲಗಿರಿಯನಾಳ್ವ ಗೋತ್ರ
ಧಾರಕ ಚಂದ್ರಮೌಳೀಶ ದೊರೆಯ
ಕ್ಷತ್ರಿಯನೆ[ನಿ]ಸಿದ ಪರಿಯ ನೀ
ಗೋತ್ರಧಾರಕ ತಿಪ್ಪೇರುದ್ರ ನೀನರಿಯ ॥ ೩ ॥

೧೪೭

ಭಕ್ತನ ಮಾಡಿಕೊ ಎನ್ನ ಹಟ್ಟಿ
ಮುಕ್ತಿದಾಯಕ ತಿಪ್ಪೇರುದ್ರ ಪ್ರಸನ್ನ ॥ ಪಲ್ಲ ॥

ಎಂದೆಂದು ಮರೆಹೊಕ್ಕೆನಲ್ಲ ಎನಗೆ
ತಂದೆ ತಾಯಿ[ಯು] ನೀನಹುದು ಪುಸಿಯಲ್ಲ
ಸಂದೇಹ ಮಾಡುವದಿಲ್ಲ ನಿಮ್ಮನುಂ
ನಂಬಿರ್ದೆನಯ್ಯ ಅನುಮಾನವಿಲ್ಲ ॥ ೧ ॥

ಮದಮತ್ಸರವನು ಸಂಹರಿಸೊ ಬ್ರಹ್ಮ
ಪದವಿಯ ಕೊಟ್ಟು ಸಂತೋಷದಲ್ಲಿರಿಸೊ
ಹೃದಯದೊಳಗಣ ಚಿಂತೆಯ ಬಿಡಿಸೊ ಅಟಮಟ
ದಿಂದ ಭಕ್ತಕುಟುಂಬವಂತರಿಸೊ ॥ ೨ ॥

ದಾರಿಯ ತೋರಿಸೊ ಮುಂದೆ ನಿನ್ನ
[ನರ್ಥಿಯಲಿ] ಕೊಂಡಾಡುವೆ ಸಲಹಯ್ಯ ತಂದೆ
ಶಿರಹಟ್ಟಿಯೊಳು ನೀನಿಂದೆ ತಿಪ್ಪೆ
ರುದ್ರನ ಪಾದವು ಗತಿ ನಮಗಿಂದೆ
ಭಕ್ತನ ಮಾಡಿಕೊ ಎನ್ನ ॥ ೩ ॥

❑ ❑

## ೧೪೪

ಭವಸಾಗರವೆಂಬೊ ಹೊಳೆಯೆತ್ತಿ ಬರುತಿದೆ ತೋಂಟದಯ್ಯ ಸ್ವಾಮಿ
ಶಿವ ನಿಮ್ಮ ಪಾದವ ತೋರಿ ಬದುಕಿಸಯ್ಯ ತೋಂಟದಯ್ಯ ॥ ಪಲ್ಲ ॥

ಆಸೆಯೆಂಬೊ ಮೋಡ ಮುಗಿಲೋಡಿ ಬರುತಿದೆ ತೋಂಟದಯ್ಯ
ಪಾಶವೆಂಬ ಗುಡುಗಿನ ಮಿಂಚು ಬರುತ ಹೊಳದಾವು ತೋಂಟದಯ್ಯ
ರೋಷ ಹರುಷವೆಂಬ ದೃಷ್ಟಿ ಮಳೆಯಾಡಿ ಬರುತಿದೆ ತೋಂಟದಯ್ಯ
ದೇಶದೊಳಗೆ ಚಲ್ಲವರಿಯುತಲೈದಾವೆ ತೋಂಟದಯ್ಯ ॥ ೧ ॥

ಅಂಬಿಗರೈವರು ನಂಬಲಾರೆನು ಗುರುವೆ ತೋಂಟದಯ್ಯ ನಮ್ಮ
ಬೆಂಬಳಿಗೊಯಿದೆನ್ನ ರಂಬಿನುತ್ಯತಾದರೆ? ತೋಂಟದಯ್ಯ
ಹಂಬಲಿಸುವ ಮನ ಹವಣಿಗೆ ನಿಲ್ಲದು ತೋಂಟದಯ್ಯ ಪಾದ–
ವೆಂಬ ತೆಪ್ಪವ [ನೀ]ಡಿ ತಡಿಯ ಸೇರಿಸಯ್ಯ ತೋಂಟದಯ್ಯ ॥ ೨ ॥

ಬಟ್ಟಬಯಲ ನಟ್ಟ ನಡುಮಧ್ಯದೊಳು ನಿಂತು ಕಣ–
ಗೆಟ್ಟೆ ಕೈಯೊಳಗಣ ಹುಟ್ಟನೆ ಮರೆದೆನು ತೋಂಟದಯ್ಯ

ಕಷ್ಟ ಸಂಸಾರದ ದೃಷ್ಟವ ಮರೆದೆನು ತೋಂಟದಯ್ಯ ಕಾಲ–
ನಟ್ಟುಳಿಗಳ ಬಿಡಿಸೈಯ್ಯ ಭಕ್ತರ ಪ್ರೇಮಿ ತೋಂಟದಯ್ಯ ॥ ೩ ॥

೧೪೪

ಎಂಥಾ ದೇಸಿಕನೆಲೆ ಕಾಂತೆ ಎನ್ನ ನಿರ್ಮಲ
ಸ್ವಾತ್ಮಾಂಬುಜದೊಳಿರ್ಪನಂತೆ ಮೋಕ್ಷಾಂಗನೆಗೆ
ಕಾಂತನೆನಿಪನಂತೆ ಕರುಣಿ ಸಿದ್ದೇಶನಂತೆ
ಎಂಥಾ ದೇಸಿಕನೆಲೆ ಕಾಂತೆ ॥ ಪಲ್ಲ ॥

ಪ್ರಣಮಸ್ವರೂಪ ತಾನಂತೆ ಮುನಿನಿಕರ
ಕಣಿಮಾದಿಗಳನೀವನಂತೆ ರಾಗವೆರಸಿ
ಫಣಿರಾಜಭೂಷಣನಂತೆ ಗೋಚರಿಸದ
ಗಣಿತ ಮಹಿಮನಂತೆ ಸುಗುಣಮಂಡಲನಂತೆ ॥ ೧ ॥

ಬಾಲೇಂದುಜೂಟತಾನಂತೆ ಭಕ್ತರೊಳಗನು
ಕೂಲವಾಗಿರುತಿರ್ಪನಂತೆ ತ್ರಿಪುರ ಮಾಯಾ
ಕಾಲರ ನೆರೆ ಗೆದ್ದನಂತೆ ಕರುಣದಿಂದ
ನೀಲಕಂಧರನಂತೆ ನಿಟಲಲೋಚನನಂತೆ ॥ ೨ ॥

ನಡುಜಡೆಯೊಳು ಪೆಣ್ಣದಂತೆ ಲೀಲೆಯನಾಂತು
ಬಿಡದೆ ಭಿಕ್ಷುಕನಾದನಂತೆ ಹಸ್ತದೊಳಗೆ
ಪಿಡಿದ ಶೂಲದಪೆಣನಂತೆ ನಿಚ್ಚ ಬೂತದ
ಗಡಣಕಧಿಕನಂತೆ ಸುಡುಗಾಡೆ ಮನೆಯಂತೆ ॥ ೩ ॥

ಕಮ್ಮಗೋಲನ ಸುಟ್ಟನಂತೆ ಬೇಡಿದವರ್ಗೆ
ಗಮ್ಮನೆ ಪದವೀವನಂತೆ ಸಂತತ ಬಹು
ಕರ್ಮವ[ಗ] ಳೆದಿರ್ಪನಂತೆ ಎಲ್ಲರೊಳಗೆ
ಹೆಮ್ಮೆಗಾರ ತಾನಂತೆ ನಿರ್ಮಾಯಕಾಯನಂತೆ ॥ ೪ ॥

ಬಂಟನೆನಿಸಿಕೊಂಡನಂತೆ ನಂಬಿಗೆ ತಾನೆ
ಕುಂಟಣಿಯಾಗಿರ್ಪನಂತೆ ಇಂದ್ರಜ ವೈ
ಕುಂಠರೊಂದಿತ ಪಾದನಂತೆ ಧರೆಯೊಳಗೆ
ತೋಂಟದರಾಜನಂತೆ ಮೀಂಟಾಗೆ ಶಿವನಂತೆ ॥ ೫ ॥

೧೫೦

ರಾಗ : ಧನ್ಯಾಸಿ

ಏಳು ಬೆಳಗಾಯ್ತು ಸಮ್ಯಜ್ಞಾನವೆಂದೆಂಬ
ಮೇಳವತಿ ಸಂಭ್ರಮಿಸಿ ಬಾಲಸೂರ್ಯನು ಜನಿಸೆ
ಕಾಳುವಜ್ಞಾನವೆನಿಸುತಿಹ ನಿಶೆ ತೊಲಗಿತೇಳಯ್ಯ ಗುರುಸಿದ್ಧನೇ ॥ ಪಲ್ಲ ॥

ಸುರುಚಿರದ ಬ್ರಹ್ಮರಂಧ್ರದ ಮೇರುವಂ ಬಳಸಿ
ತಿರುಗುತಿಹ ಜ್ಞಾನಾರ್ಕಲಿಂಗತೇಜವನಾಂತು
ಭರದಿಂದ ನವಚಕ್ರವೆಂದೆಂಬ ಸರಸಿಜವು ಹದವೆರದು ಕಾಂತಿ ಹೆಚ್ಚಿ
ಹರುಷ ರೋಷಗಳೆಂಬ ಕುಮುದಗಳು ಮುಖವರಿಯೆ
ಹರಮಂತ್ರವಱಿಯದಿಹ ಜೀವಭಾವದ ಗೂಗೆ
ಸರಗುಂದೆ ಸಂಸಾರರಸವನುಗುಳುವ ಚಂದ್ರ
ತೀರದಲಸುಕಳೆಗುಂದುತ ॥ ೧ ॥

ಪರಿಪೂರ್ಣಮೆಂದೆಂಬ ಬೆಳಗು ಪಸರಿಸಿ ಬರಲು
ನೆರದ ಖಂಡಿತಜ್ಞಾನವೆಂದೆಂಬ ಮಂಜುಗಳು
ಹರವುತಿದೆ ಪ್ರಣವನಾದಗಳೆಂಬ ಕುಕ್ಕುಟಗಳೆರದೆದ್ದು ಕೂಗುತೌ
ಉರುತರದ ಛತ್ತೀಸಸ್ಥಲವೆಂಬ ವೃಕ್ಷಗಳು
ವೆಂದೆನಿಸುತಿಹ ನಿಶೆ ತೊಲಗಿ
ಕರಣಸಂಕುಳವೆಂಬ ಖಗಕುಲಗಳುಲಿದೇಳೆ
ಇರುಳುಗನ್ನವ ಸವೆವ ಕಳ್ಳನೆನಿಸುವ ಕಾಮ ಸರಿದೋಡೆ
ಮಾಯಗಿರಿಗೆ ॥ ೨ ॥

ಮುದದಿ ನಿಮ್ಮಯ ಪಿಂಡವೆಂಬ ಬ್ರಹ್ಮಾಂಡದೊಳು
ಹದಿನಾಲ್ಕು ಕರಣವೆನಿಸುವ ಚತುರ್ದಶಭುವನ
ಹುದುಗಿದೊಂಬತ್ತು ನಾಡಿಗಳೆಂಬ ನವಖಂಡ ಶರಧಿಗಳು ಏಳುಧಾಮ
ಸದಮಲದ ಸಪ್ತ[ವ್ಯಸನಂಗಳ್ತಾವೆನಿಪ]
ಮದವಳಿದ ಪಂಚವಿಂಶತಿತತ್ವದೆಸಳುಗಳು
ಮೊದಲಾದ ದ್ವಿಶತ ಷೋಡಶ ಲೋಕಕರಣದೊಳು
ಹೊದರೊಡೆದು ಪ್ರಭೆ ತೀವಿತು ॥ ೩ ॥

ಮನವೆಂಬ ವಾರಿ ಕ್ಷಮೆಯೆಂಬ ಗಂಧದಗುಳಿಗೆ
ಅನುವಱಿದು ಪದತ್ರಯ[ಂ]ಗಳೆಂಬ ಅಕ್ಷತೆಯು
ವಿನಯದಿಂ ಸ್ವಾನುಭಾವದ ಕುಸುಮ ಸಂತತಿಯು ತನುಗುಣಗಳಳಿದ ಧೂಪ
ನೆನಹಿನಾರತಿಯಾತ್ಮಸಂತೋಷ ನೈವೇದ್ಯ
ಜಿನುಗುತಿಹ ಗುಣತ್ರಯಂಗಳಳಿದ ತಾಂಬೂಲಮಂ
ವನಿತೆಯರು ಅಷ್ಟವಿಧಪೂಜೆಗೆಡೆಮಾಡಿದರು ಘನವನರ್ಚಿಸು
ವೊಲ್ಪಿನಿಂ ॥ ೪ ॥

ಚೆನ್ನಬಸವನು ಹಿರಿಯ ಬಸವೇಶನಪ್ಪಣ್ಣ
ಕಿನ್ನರೈಯ್ಯನು ವೀರಮಡಿವಾಳನಜಗಣ್ಣ
ಹೊನ್ನಿತಂ[ದೆ]ಯು ಏಲೇಶ್ವರದ ಕೇತೈಯ್ಯಗಳು ಚೆನ್ನಯ್ಯ ಮುಖ್ಯವಾದ
ನಿನ್ನ ನೆಚ್ಚಿನ ಪ್ರಮಥಸಂಕುಳದೊಳನುಭವದಿ
ಎನ್ನ ಹಸ್ತಾಬ್ಜಮಣಿಮಂಟಪದೊಳನುದಿನಂ
ಮುನ್ನಿನಲ್ಲಮಪ್ರಭುವೆ ತೋಂಟದಸಿದ್ಧ ಮನ್ನಿಸೈ ಕಣ್ದೆಱೆವುತ ॥ ೫ ॥

೧೫೧

ಎನ್ನ ಮನಪ್ರಿಯವಲ್ಲಭ ತೋಂಟದ ಸಿದ್ಧಲಿಂಗ ಬಾರೊ
ಮುನ್ನಿನ ಪ್ರಭುವಿನಂತೆ ಗುರುರೂಪ ತಾಳ್ದ ಸಿದ್ಧೇಶ ಬಾರೊ ॥ ಪಲ್ಲ ॥

ಭಕ್ತಿಗೆ ಬಸವನ ಶ್ರದ್ಧೆವಿಡಿದ ನಿಜನಿತ್ಯ ಬಾರೊ
ಸತ್ಯದಿ ಮಡಿವಾಳನಂತೆ ಮಾಹೇಶ್ವರನಿಷ್ಠ ಬಾರೊ ॥ ೧ ॥

ಉತ್ತಮ ಚೆನ್ನಬಸವನಂತೆ ಪರಮ ಪ್ರಸಾದಿ ಬಾರೊ
ಚಿತ್ತ [ಶು]ದ್ಧದಿ ಸಿದ್ಧರಾಮನಂತೆ ಪ್ರಾಣಲಿಂಗಿ ಬಾರೊ ॥ ೨ ॥

ಉರಿಲಿಂಗದೇವರ ಇರವ ತಾಳಿದ ನಿಜಶರಣ[ಬಾರೊ]
ಪರದಲ್ಲಿ ಬೆರದಜಗಣ್ಣನಂತೆ ಲಿಂಗೈಕ್ಯ ಬಾರೊ ॥ ೩ ॥

ಪರಮ ನಿರ್ವಾಣದಿ ನಿಜಗುಣನಂತೆ ವಿರಕ್ತ ಬಾರೊ
ಪರಿಪೂರ್ಣಭಾವದ ಚಂದಿಮರಸನಂತೆ ಜ್ಞಾನಿ ಬಾರೊ ॥ ೪ ॥

ಲಿಂಗನಿಷ್ಠೆಯಲಿ ನೀಲಮ್ಮನ ಮನದಂತೆ ಪ್ರೇಮಿ ಬಾರೊ
ಸಂಗದಿ ಸತ್ಯಣ್ಣನುಗದ ಭಾವದಿ ಹಿಂಗಿ ಬಾರೊ ॥ ೫ ॥

ಕಂಗಳ ನೋಟದಿ ಅನುಮಿಷನಂತೆ ನಿಬ್ಬೆರಗಿ ಬಾರೊ
ಅಂಗವೈರಾಗ್ಯದಿ ಮಹಾದೇವಿಯಂತೆ ನಿರಂಗ ಬಾರೊ ॥ ೬ ॥

ದಾನಗುಣದಲ್ಲಿ ಚಂದ್ಯಯ್ಯನಂತೆ ವೈರಾಗ್ಯಧೀರನೆ ಬಾರೊ
ಘನವನರಿದ ಘಟ್ಟಿವಾಳನಂತೆ ತೋಂಟದ ಸಿದ್ಧಲಿಂಗ ಬಾರೊ ॥ ೭ ॥

ಆದಿನಿರಂಜನ ಎನಗಾಗಿ ಮರ್ತ್ಯಕ್ಕೆ ಬಂದೆ ಬಾರೊ
ನಾದ ಬಿಂದು ಕಳೆ ಸುಖವನೆ ಭೋಗಿಸಿ ಸವಿದೆ ಬಾರೊ ॥ ೮ ॥

ವೇದಕ್ಕೆ ನಿಲ್ಕದಭೇದ್ಯನೆ ತೋಂಟದ ಸಿದ್ಧಲಿಂಗ ಬಾರೊ
ವೇಧಿಸಿಯೆನ್ನಯ ಕರಮನಭಾವದೊಳು ಮೂರ್ತಿಗೊಂಡೆ ಬಾರೊ ॥ ೯ ॥

೧೫೨

ಗುರುವೆ ಗುರುವೆ ಗುರುವೆ ಎನ್ನಯ ಅಘಹರನೆ
ನಿರುತ ಸುಜ್ಞಾನದಾಗರವೆ ತೋಂಟದ ವರ ಸಿದ್ಧಲಿಂಗ
ಸದ್ಗುರುವೆ ॥ ಪಲ್ಲ ॥

ಒಂದಕ್ಷರರೂಪವೆನಿಪ ಸರ್ವ
ಒಂದಾದ ನಿಜ ನಿರ್ಲೇಪ
ಒಂದೆ ಭಾವ ಕಲಾಪ ಪ
ನ್ನೊಂದಾದ ಮೂಲಸ್ವರೂಪ ಗುರುವೆ ॥ ೧ ॥

ಎರಡೆನಿಸಿದ ಸಾಕಾರ ಕರ್ಮ
ಎರಡ ಹೊದ್ದದ ನಿರ್ವಿಕಾರ
ಎರಡಂತ್ಯದ ಮೂಲಾಧಾರ ಪದ
ವೆರಡನೊಲ್ಲದ ಮುಕ್ತಿ[ರೂಪ] ಗುರುವೆ ॥ ೨ ॥

ಮೂರು ಗುಣವ ಸುಟ್ಟು ತೂರಿ ಲೋಕ
ಮೂರರ ನಿಜವನು ತೋರಿ
ಮೂರು ವರ್ಗಂಗಳ ಮೀ [ರಿ]
ಮೂರನೊಲ್ಲದ ನಿರ್ವಿಕಾರಿ ಗುರುವೆ ॥ ೩ ॥

ನಾಲ್ಕುವನದ ಮದರಹಿತ ಶ್ರುತಿ
ನಾಲ್ಕರೊಳಗೆ ವಿಖ್ಯಾತ
ನಾಲ್ಕು ಕರಣವ ಗೆಲಿದಾತ ಪದಿ
ನಾಲ್ಕುಲೋಕಕೆ ಅಧಿನಾಥ ಗುರುವೆ ॥ ೪ ॥

ಐದು ಸ್ತರವ ನೆರೆಗೆಲಿದು ಈ
ರೈದಾದ ತತ್ತ್ವ ನೆರೆ ತಿಲಿದು
ಐದಕ್ಷರದ ಭಕ್ತರ್ಗೊಲಿದು ಮುಖ
ವೈದಾದಲೀಲೆಯಿಂದೊಲಿದು ಗುರುವೆ ॥ ೫ ॥

ಆರುಸ್ಥಲವ ಮೀರಿ ನಿಂದ ವರ್ಗ
ವಾರಕ್ಕೆ ಸೀಮಿತದ ಚಂದ
ಆರುದರುಷನ ನಿಮ್ಮಿಂದ ಚಕ್ರ
ವಾರ ತಿಳಿದ ನಿಜಾನಂದ ಗುರುವೆ ॥ ೬ ॥

ಏಳು ವ್ಯಸನಗಳ ಸುಟ್ಟು ಧಾ
ತೇಳನು ಸೃಷ್ಟಿಗಿಂಬಿಟ್ಟು
ಏಳುದಧಿಗೆ ದೆಸೆವಟ್ಟು ದೀಪ
ವೇಳನು ತನ್ನೊಳಿಂಬಿಟ್ಟ ಗುರುವೆ ॥ ೭ ॥

ಎಂಟುಮದಂಗಳ ಜಯಿಸಿ ಯೋಗ
ವೆಂಟರೊಳಗೆ ವಿಜಯವೆರಸಿ
ಎಂಟುಮೂರ್ತಿಯೆಂದೆನಿಸಿ ದಿ
ಕ್ಕೆಂಟರೊಳಗೆ ಕೀರ್ತಿವೆರಸಿ ಗುರುವೆ ॥ ೮ ॥

ನವಖಂಡಪೃಥ್ವಿಯೊಳು ನಿಂದು
ನವಲೀಲೆಗೆ ಮನಸಂದು
ನವನಿಧಿಮಯವಾಗಲೆಂದು ತಾಳ್ದುದ ?
ನವಭಕ್ತಿರಸಮಯಸಿಂಧು ಗುರುವೆ ॥ ೯ ॥

ಹತ್ತುಭುಜದ ನೀಲಕಾಯ ವಾಯು
ಹತ್ತ ನಿಲಿಸಿದ ನಿರ್ಮಾಯ

ಹತ್ತೇಂದ್ರಿಯವ ಗೆದ್ದುಪಾಯ ನಿಜ
ಹತ್ತಿದ ಕರುಣವಿಧೇಯ ಗುರುವೆ ॥ ೧೦ ॥

ಈ ಸುಬ ಸ್ತೋತ್ರ ಕೃಪಾಂಗ ಗುರು
ಗೋಸಲಕರಜ ದಿವ್ಯಾಂಗ
ಭಾಸುರ ಯತಿಜನ ಸಂಗ ಪರ
ಮೇಶ ತೋಂಟದ ಸಿದ್ಧಲಿಂಗ ಗುರುವೆ ॥ ೧೧ ॥

## ೧೫೩

ಶ್ರೀ ಗುರುರಾಯನ ಪಾದವ ನೆಱೆ ನಂಬು
ಭೋಗ ರೂಪ ಸಾಕು ಕೋಗಿಲೆ ಕೋಗಿಲೆ
ಬೇಗನೆ ನಿನ್ನಯ ನಿಜವನಱಿದು ಭವ
ಸಾಗರವನು ದಾಂಟು ಕೋಗಿಲೆ ಕೋಗಿಲೆ ॥ ಪಲ್ಲ ॥

ಹಾನಿ ಬಹುದು ಮುನ್ನ ಮಾನಿನಿಯರ ಸಂಗವ
ಧ್ಯಾನಿಸದಿರು ಕಂಡ ಕೋಗಿಲೆ ಕೋಗಿಲೆ
ಕಾನನದೊಳು ಕಂಗೆಟ್ಟು ನೃಪನ ಬಾಧೆ
ಗಾನೆ ಸಿಕ್ಕಿದಂತೆ ಕೋಗಿಲೆ ಕೋಗಿಲೆ ॥ ೧ ॥

ಕನ್ನೆವೆಣ್ಣಿನ ಕಡೆಗಣ್ಣಿನ ನೋಟಕೆ
ನೀನೇಕೆ ಮನಸೋತೆ ಕೋಗಿಲೆ ಕೋಗಿಲೆ
ಚೆನ್ನ ಸಂಪಿಗೆಯರಳಲಿ ಬಿದ್ದು ಜಿನುಗುವ
ಹೊನ್ನದುಂಬಿಯಂತೆ ಕೋಗಿಲೆ ಕೋಗಿಲೆ ॥ ೨ ॥

ಮಂಟಕೆಗಾಲನಲ್ಲಾಡಿಸಿ ಪುರ್ಬಿಂದ
ಗಂಟಿಕ್ಕಿ ಕರವರು ಕೋಗಿಲೆ ಕೋಗಿಲೆ
ಗಂಟೆಯಧ್ವನಿಯನಾಲಿಸಿದ ಹುಲ್ಲೆಗೆ ಪ್ರಾಣ
ಕಂಟಕ ತಪ್ಪದು ಕೋಗಿಲೆ ಕೋಗಿಲೆ ॥ ೩ ॥

ಮಾತನಾಡಿಸಿ ಮನವ ಸೂಱೆಗೊಂಬರಿ–
ನ್ನೇತಕೆ ಮನಸೋತೆ ಕೋಗಿಲೆ ಕೋಗಿಲೆ
ಜ್ಯೋತಿಯ ಬೆಳಗ ಕಾಮಿಸಿದ ಪತಂಗ
ನಾ ತೆಱನಹೆ ಕೋಗಿಲೆ ಕೋಗಿಲೆ ॥ ೪ ॥

ಕಾಯದಿಚ್ಛೆಗೆ ಕರಣಂಗಳನೆಲ್ಲವ
ನೋಯಿಸದಿರು ಕಂಡ ಕೋಗಿಲೆ ಕೋಗಿಲೆ
ವೈಯ್ಯಾರದಿಂದ ತೋಂಟದ ಸಿದ್ಧಲಿಂಗಯತಿ
ರಾಯನ ನೆನೆ ಕಂಡ ಕೋಗಿಲೆ ಕೋಗಿಲೆ ॥ ೫ ॥

೧೫೪.

ಸುವ್ವಾಲೆ ಸುವ್ವಿ ಸುವ್ವಾಲೆ
ಸುವ್ವಾಲೆ ತೋಂಟದಯತಿ ಸಿದ್ಧಲಿಂಗಗೆ
ಸುವ್ವಾಲೆ ಸುವ್ವಿ ಸುವ್ವಾಲೆ ॥ ಪಲ್ಲ ॥

ಬಸವೇಶಗೆ ರಾಣಿಯಾದಳೆ ಮತ್ತೆ
ಎಸೆ[ವ] ಜಂಗಮಭಕ್ತಿಗೈದಳೆ
ಜಸವಾಂತು ಇಷ್ಟಲಿಂಗದೊಳೊಡಗೂಡಿದ
ಕುಸುಲೆ ನೀಲೌವ್ವ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೧ ॥

ಕಕ್ಕಯ್ಯನೊಕ್ಕುದನುಂಡಳೆ
ಚಿಕ್ಕ ಚೆನ್ನಬಸವನನ್ನು ಪಡೆದಳೆ
ಮುಕ್ಕಣ್ಣನ ಶರಣರೊಳತಿ ಪಿರಿದಾದ [ಳೆ]
ಅಕ್ಕನಾಗಲೆ ಬಾರೆ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೨ ॥

ದುರುಳ ಭವಿಯ ಹೇಸಿ ಬಿಟ್ಟಳೆ ಮತ್ತೆ
ವಿರಕ್ತಿ ವಿರಾಗವ ತೊಟ್ಟಳೆ
ನಿರುಪಮ ಪ್ರಭುವಿನ ಕರುಣವ ಪಡದಕ್ಕ
ವರ ಮಹಾದೇವಿ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೩ ॥

ಅನ್ಯಶಬ್ದವ ಕೇಳಲೊಲ್ಲಳೆ ಶಿವ–
ನನ್ನು ಹುಟ್ಟನೊಳಿಟ್ಟು ತಿವಿದಳೆ
ಭಿನ್ನವಿಲ್ಲದೆ ಲಿಂಗದ ಗರ್ಭದೊಳು ಹೊಕ್ಕ
ಚೆನ್ನ ಸತ್ಯ[ಕ್ಕ] ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೪ ॥

ಚಂದದಿ ಚರಭಕ್ತಿಗೈದಳೆ ತನ್ನ
ಕಂದನ ಕಡಿದು ಒಲಿದಿತ್ತಳೆ

ಇಂದುಧರನಪುರಕೆ ಕೇರಿಯನೊಯಿದ ದಯ–
ಸಿಂಧು ಚಂಗಳೆ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೫ ॥

ಹೊಟ್ಟೆಗೆ ದೋಸೆಯನಿತ್ತಳೆ ತಾನು
ಕಟ್ಟಿಗೆ ಮಣ್ಣ ಹೊರಿಸಿದಳೆ
ಪಟ್ಟ ಮೂವರನ ಕೃಪೆಯ ಪಡೆದೆಯಿದಿದ
ಪಿಟ್ಟವ್ವೆ ಬಾರಮ್ಮ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೬ ॥

ಸಾರಫಲವ ಶಿವಗಿತ್ತಳೆ ಮತ್ತೆ
ಮಾರಹರನ ಕೃಪೆವೆತ್ತಳೆ
ದಾರಿಯೊಳಗೆ ತಲೆಕೆಳಕಾಗಿಯ್ದಿದ
ಕಾರಿಕಾಲಮ್ಮ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೭ ॥

ಹಾಲತರಲು ಹರನೊಲ್ಲದೆ ಕಾಡೆ
ಬಾಲೆ ದೈನ್ಯದಿ ಶಿವಗುಣಿಸಿ
ಕಾಲಕಂಧರನ ಶರೀರದೊಳಡಗಿದ
ಕೋಲೂರ ಕನ್ಯೆ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೮ ॥

ಕ್ರೂರ ಜೈನಗೆ ಸೇರಲೊಲ್ಲದೆ ಭವ–
ದೂರನ ಭಕ್ತಿಗೆವೊಲಿದಳೆ
ಧೀರತನದಿ ದಾರಿಯೊಳು ಹೆಣ್ಣು ಗಂಡಾದ
ಹೇರೂರ ಸುಗುಣೆ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೯ ॥

ಬಟ್ಟಲ ಹುಗ್ಗಿಯ ಸವಿವುತ ಸವಿ
ತಟ್ಟಲು ಶಿವಗೆಂದು ಬಿಟ್ಟಳೆ
ಖಟ್ವಾಂಗಧರನಿಗರ್ಪಿಸಿ ಮೋಕ್ಷಗೂಡಿದ
ದಿಟ್ಟೆ ಚೋಳಕ್ಕ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೧೦ ॥

ಭಾಳಲೋಚನ ವಿಟವೇಷದೆ ಬರೆ
ಲೀಲೆಯಿಂದೊಡಗೂಡಿ ಮೆರದಳೆ
ಏಳುದಿವಸ ಹೊನ್ನುಮಳೆಗರೆಸಿದ ಚೆಲ್ವ
ಸೂಳೆ ನಿಂಬೆಕ್ಕ ಬಾ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೧೧ ॥

ಅಮ್ಮವ್ವೆ ಅರಸವ್ವೆ ರೆಮ್ಮವ್ವೆ ರೇಕವ್ವೆ
ಬೊಮ್ಮಲದೇವಿ ಬೊಂತಾದೇವಿಯು
ನಮ್ಮ ಗೊಗ್ಗವ್ವೆ ಸುಗ್ಗಲದೇವಿಯರು ಬನ್ನಿ
ಸುಮ್ಮನದಿಂದಲಿ ಒರಳಕ್ಕಿ ಪೊಯ್ಯ ಸುವ್ವಾಲೆ ॥ ೧೨ ॥

ಮುದ್ದುಲಿಂಗವ್ವೆ ಸಂಗವ್ವೆ ಗಂಗವ್ವೆ ಪ್ರ–
ಸಿದ್ಧ ಕಾಳವ್ವೆ ಕಮಲವ್ವೆಯರು
ಇದ್ದ ಶರಣೆಯರೆಲ್ಲರು ಬನ್ನಿ ತೋಂ–
ಟದಾರಾಧ್ಯನ ಪಾಡುತ ಒರಳಕ್ಕಿ ಥಳಿಸುವ
ಸುವ್ವಾಲೆ ಸುವ್ವಿ ಸುವ್ವಾಲೆ ॥ ೧೩ ॥

೧೫೫

ಸಾರದಿರೆನ್ನ ಮುಟ್ಟಬ್ಯಾಡವೊ ಅಲ್ಲಿ–
ನ್ನಾರಿಗೆ ನಿನ್ನ ಗುಣ ತೋರಿ ಬಂದಿದ್ದೀಯೋ ॥ ಪಲ್ಲ ॥

ಬೆದರುತಲಿದೆ ಮೈ ತೋಳಂಕವು ಕೆಂಪು
ಕದಲಿತು ಅದ ಡೊಂಕವು ಅಲ್ಲ
ಚದುರ ನಿನ್ನ ಮನದ ಹದನ ನಾನರಿತೆನೊ ॥ ೧ ॥

ಚಂದನಗಂಧವನು ಲೇಪಿಸಿ ಸೊಗ
ಸಿಂದದ ಬಗೆಗಾಣುವಂದದಿ ಕೂಡಿ
[ಒಂದಾ]ದ ಬಗೆಗಾಣುವಂದದಿ ಅಲ್ಲಿ
ಚಂದಿರವದನೆಯೊಳಾಡಿ ಬಂದಿದ್ದೀಯೊ ॥ ೨ ॥

ಬರಿದೆ ಬಣ್ಣದ ಮಾತನಾಡುತಲಲ್ಲಿ
ಎರವಿನ ಮೋಹನ ಮಾಡುತಲಲ್ಲಿ
ಸರಸ ಸತ್ಕಲೆಗಳ ತೋರುತ ನಿನ್ನ
ನೆರೆ ನಂಬಲಾರೆನು ದೊರೆ ಬಸ[ವೇಂದ್ರ] ॥ ೩ ॥

೧೫೬

ಅಗಲಿ ನಾ ಬರಬಹುದೆ ಮೃಗಮದಸುಗಂಧಿಯನು
ಸೊಗಸುತೆಕ್ಕೆಯೊಳೊಲಿದು ಮಿಗೆ ರಾಜಿಸುವಳ ॥ ಪಲ್ಲ ॥

ಅಂಗಜಾಗಮವರಿತು ಅತಿ ಹರುಷದಿಂದ ಆ
ಲಿಂಗನ[ವ] ಮಾಡಿ ಗಲ್ಲವನು [ಸುಲ]ಲಿತ
ಅಂಗುಲಿತ ನಖವ ಉರಕೊತ್ತಿ ತೋರಿ ತೊಡೆಯಿಂದಮರ್ಚೆ
ಕಂಗಳನೆರಡನು ಮುಚ್ಚಿ ತೆರೆದು ನೋಡುವಳ ॥ ೧ ॥

ಪೊಂಬೊಗರಿಮೊಲೆಯನೆರ್ದೆಗೊತ್ತಿ ಮುಂದಲೆವಿಡಿದು
ಚುಂಬಿಸುತ ನೆರಿಯನೆಡುಗೈಯ್ಯಲಿಳುಹಿ
ಕಂಬುಕಂಠದಿ ಪುದುಗಿ ಕಾಂತ ಬಾ ಬಾರೆಂದು
ಕೆಂಬೊಲ್ಲಮೊನೆಯ ಅಧರ ಕದ್ಯಕಂಗಳ ॥ ೨ ॥

ಸಾರಿ ಬಂದವನೊಳ್ ಸೊಕ್ಕೇರಿ ಕೊಟದೆಳುದಯ
ದೋರಿ ಸಮರತಿಗೆ ಬಲ್ಮುಖನಯನದೆ
ಧೀರ ಶರಭೇಂದ್ರ ಕಾಂತ ಕುಸುಮಕೋದಂಡ
ಬಾರೆಂದು ಉಪರತಿಗೆ ಉಪಮೆಗೊದಗುವಳ ॥ ೩ ॥

## ೧೩೭

ಚೆನ್ನಬಸವಗೆ ಚೋರ ಚಿಕ್ಕಗೆ
ಚದುರ ರಾಮಗೆ ಮಂಗಳ
ಹೊನ್ನಿತಂದೆಗೆ ಹಂಪ ಹಂದಗೆ
ಹಳ್ಳ ಮಧುವಗೆ ಮಂಗಳ
ಚೆನ್ನ ಚೋಳಗೆ ಚಂದ ಶಿವನಿಗೆ
ಚಾರಮಂಗೆ ಸುಮಂಗಳ
ಕಿನ್ನರಯ್ಯ ಕಿರಾತರುದ್ರಗೆ
ಕರುಣಿ ನಂದಿಯಗೆ ಮಂಗಳಂ ॥ ಶ್ರೀ ॥

## ೧೩೮

ಬಸವ ಬಸವಗೆ ಬಸವರಾಜಗೆ
ಬಸವತಂದೆಗೆ ಬಸವಗೆ
ಬಸವ ಭಕ್ತ[ಗೆ] ಬಸವಮುಕ್ತಗೆ
ಬಸವಸ್ವಾಮಿಗೆ ಬಸವಗೆ
ಬಸವಗುರುವಿಗೆ ಬಸವಲಿಂಗಗೆ

ಬಸವ ಜಂಗಮಬಸವಗೆ
ಬಸವ ಸೋದೆಯಬಸವ ನಂದಿಯಗೆ
ಬಸವಗಣರಿಗೆ ಮಂಗಳ || ಶ್ರೀ ||

೧೭೯

ಮಂಗಳ ಮಂಗಳ [ಅ]ಕ್ಷಯ ಮಂಗಳ
ಗಂಗೆಯ[o]ಭೋಜ ಮ[ರಾ]ಳ
ವೃಷಭ [ಧ್ವ]ಜ ನಂದೀಶ ಸರ್ವ
ದೇವ [ಸದ್ಗುರು] ನಂದೀಶ
ಸರ್ವ ಸಂಪದ ನಂದೀಶ
ಅಂದದಿ ಧರ್ಮ ಮೋಕ್ಷಾಣೆ
ನಂದೀಶಾನಂದದಿ ಕೊ[ಗೈ] || ಶ್ರೀ ||

೧೮೦

ಜಯ ಜಯ ಜಗಧೀಶ್ವರನಿಗೆ ಭಕ್ತ
ಜಯ ವರದನಿಗೆ ಸದಾಶಿವಲಿಂಗಗೆ || ಪಲ್ಲ ||

ಪಂಚವಿಂಶತಿಲೀಲೆಗಳನುರೆ ನಟಿಸುತೆ
ವಂಚಿಸದರುವತ್ತುನಾಲ್ಕೆನಿಪ
ಮುಂಚುವ ಸುಖವಿಲಾಸಂಗಳ ನ[ಟ]ಸಿದ
ಪಂಚಮುಖದ ಪರಾತ್ಪರ ಫಣಿಭೂಷಗೆ || ೧ ||

ಸುಂದರಮೂರ್ತಿಗೆ ಸುರುಚಿರಕೀರ್ತಿಗೆ
ಇಂದುಕಲಾಧರನೆನಿಸುತ್ತೆ
ಸಂದ[ಸಾರಸ]ಕುಲವಂಶ ರಾಜರ
ಹೊಂದಿದ ಮೋಕ್ಷಗಳಧಿನಾಥಗೆ || ೨ ||

ನಿರುಪಮ ಮಧುರಾಪುರದಿಂದೆ ನಡೆತಂದು
ಕರುಣದೆ ಸ್ವಾದಿನಗರಿಯೊಳು
ಉರುತರ ನಂದೀಶ್ವರನೊಡಗೂಡುತೆ
ಪರಿಪೂರ್ಣನಹ ಸದಾಶಿವನಾಮನಿಗೆ || ೩ ||
❑ ❑

೧೬೧

ರಾಗ : ಸಾವೇರಿ

ನಾನು ನೀ[ನೆಂಬಂ]ತರವು
ಜ್ಞಾನ ಕ್ರಿಯೆಗಳ ಬಿಡದೆ ನಟಿಸುತಿರಬೇಕು || ಪಲ್ಲ ||

ಮಾತಿಂಗೆ ಮಂತ್ರ ಕ್ಷುಧೆಗೆ ಭಿಕ್ಷವಿರಬೇಕು
ಶೀತಕ್ಕೆ ರಘಟೆ ಶಯನಕ್ಕೆ ಗೀತಿರಬೇಕು
ಓತು ಶರಣರ ಸಂಗದನುಭವವಿರಬೇಕು
xxxxxxxxಣಿರಬೇಕು || ೧ ||

ಪರರು ತನ್ನವರೆಂಬ ಭೇದವಳಿದಿರಬೇಕು
ಶರಿರ ಲಿಂಗದ ಕ್ರಿಯದೊಳಿರಿಸಬೇಕು
ಪರಸತಿ ಪರಧನ ಪರಹಿಂಸೆ ಬಿಟ್ಟಿರಬೇಕು
ಪರಲೋಕದ ಫಲಪದವ ಬಯಸ [ದಿರಬೇಕು] || ೨ ||

[ಹಸಿವು ತೃಷೆ] ನಿದ್ರೆಗಳ ಹವಣಕ್ಕೆ ತರಬೇಕು
ವಿಷಯಾದಿಗಳಾವದಿನಕ್ಕೆ ಮರೆದಿರಬೇಕು
ಮಿಸುಪ ನಿಜಗುರುಬಸವಲಿಂಗನೆನಿಸುವ ಪರಮ
ಅಸಮ ಚಿದ್ಬಯಲೊಳಗೆ ಮನವಡಗಬೇಕು || ೩ ||

□ □

೧೬೨

ಜ್ಯೋತಿ ಬೆಳಗುತಿದೆ ನಿರಂಜನ ಜ್ಯೋತಿ ಬೆಳಗುತಿದೆ
ಸೂತಕವಳಿದ ಸುಜ್ಞಾನಮಂಟಪದೊಳು
ಜ್ಯೋತಿ ಬೆಳಗುತಿದೆ ಪಾವನ ಸ್ವಯಂಜ್ಯೋತಿ ಬೆಳಗುತಿದೆ || ಪಲ್ಲವಿ ||

ಕಾಯ ಕಂಭದೊಳು ಸಂಜೀವ ಪಣತೆಯೊಳು
ರಾಯ ಶ್ರೀಗುರು ಕೃಪೆ ತೈಲ ತುಂಬಿ
ಮಾಯಾವಿರಹಿತ ಸುಜ್ಞಾನ ಬತ್ತಿಯ ಹಚ್ಚಿ
ಆಯಾಸ ಕರ್ಮ ಕತ್ತಲೆಯಳಿದಾನಂದ || ೧ ||

ಪಂಚಭೂತದ ದೇಹದಂಚಿಲಿ ತೋರುವ
ಪಂಚಕೋಣೆಗಳೊಳು ಕಳೆಯೇರುತ

ಸಂಚಲ ಮನದ ಪ್ರಪಂಚವಳಿದು ಕೋಟಿ
ಮಿಂಚಿನಪ್ರಭೆಗಳು ಮೀರಿ ತೋರುವ ನಿತ್ಯ || ೨ ||

ಕುಟಿಲ ಕುಹಕ ಠಕ್ಕು ಸಟೆಯ ಮಾಯದ ರುಚಿ
ದ್ಘಟದೊಳಹೊರಗೆ ವ್ಯಾಪಿಸಿ ತೋರುವ
ನಿಟಿಲದಿಹವೆಂಟುಚಕ್ರಮಂಡಲದೊಲು
ಪಟುವಾಗಿ ತಳತಳಿಸುವ ನಿತ್ಯ ನಿರ್ಮಲ || ೩ ||

ತನಗುಣ ಮನದ ಸಂಚಲಭಾವ ಭ್ರಮೆಯಿಲ್ಲ-
ದನಘ ಮಹಾಲಿಂಗವೆಂದರಿದು
ಘನ [ಶು] ದ್ಧ ಶರಣರ ಮನದ ಕೊನೆಯ ಮೇಲೆ
ಚಿನುಮಯ ಚಿತ್ಪ್ರಭೆಯಿಂದ ಪೂರಿತವಾದ || ೪ ||

ವರ ನಿಜಗುರುಬಸವೇಶ ನೀನೆಯೆಂಬ
ಎರಡಳಿದಾನಂದ ಪದವು ತಾನೆ
ಪರಿಪೂರ್ಣವಾಗಿ ಪಿಂಡಾಂಡದೊಳಗೆ ಮಹಾ
ನಿರವಯ ನಿತ್ಯ ನಿರಂಜನ ಘನವೆಂಬ || ೫ ||

□ □

## ೧೬೩

### ರಾಗ : ಮಂಗಳಕಾಶಿ

ಬಂದನೆನ್ನ ಕರಾಂಬುಜಕೆ ಕೃಪಾನಂದರಸ
ಸಿಂಧು ಬಾಲೇಂದುಧರನು || ಪಲ್ಲ ||

ತೃಷೆಯಡಸಿದಂಗ[ಕ]ಮೃತದಗಡಲು
ನಸಿದು ರುಜೆಯಿಂ ನೊಂದವಂಗಮೃತಹಸ್ತನಹ
ಕುಶಲನಹ ವೈದ್ಯನು ಬಂದ ತೆರದಿ
ಹೊಸ ಯೌವ್ವನಾವಸ್ಥೆಯಾಗಿಹ ನಲ್ಲಳಿಗೆ ಕಲಾ
ರಸಿಕನಹ ಪುರುಷ ಬಂದಂತೆ
ಹಸಗೆಟ್ಟು ದಾರಿದ್ರ ವಶನಾದವಗೆ ಸಿದ್ಧ-
ರಸವದಗಿದಂತೆ ಮಹಾಲಿಂಗವಿದು || ೧ ||

ಮುಪ್ಪಡಿಸಿ ಮೃತವನೆಯಿದುವಗೆ ಸಂಜೀವಿನಿಯೆ–
ನಿಪ್ಪ ಮಂತ್ರವು ದೊರಕಿದಂತೆ
ಒಪ್ಪಿನ xxxxx ಪದ ಜಾತ್ಯಂಧ
ನಪ್ಪವಗೆ ಕಂಗಳೊಗೆದಂತೆ
ತಪ್ಪಿ ನೆಲೆಗಾಣದಳಲುತಿಪ್ಪ ಶಿಶುವಿಗೆ ಹಿತವೆ
ಯಪ್ಪ ತಾಯೊದಗಿ ಬಂದಂತೆ
ಒಪ್ಪಿ ಒಡಗೂಡಿ ಸರ್ವಾಂಗದೊಳಹೊರಗಗಲದಿರ್ಪ
ಸಂಪರ್ಕಹರ ಪ್ರಹರನೊಲಿದು ॥ ೨ ॥

ನಂದೀಶ ಮದ್ದಳೆಯ ನುಡಿಸೆ ಕಮಲಾಕ್ಷನೊಲ
ವಿಂದವಾವುಜವ ಧ್ವನಿಮಾಡೆ
ಚಂದದಿಂ ಬ್ರಹ್ಮ ತಾಳವನೊತ್ತುತುಗ್ಘಡಿಸೆ
ಗಂಧರ್ವರುಗಳೊಲಿದು ಪಾಡೆ
ಸ್ಕಂದ ಭೃಂಗಿ ವೀರೇಶ ಮೊದಲಾದ ಪ್ರಮ
ಥೇಂದ್ರರೊಡಗೂಡಿ ನಲಿದಾಡೆ
ಬಂದ ನಿಜಗುರುಶಾಂತ ಕರಕಮಲಕ್ಕೆ
ನಿಂದ ಬಲ್ಲಿದರುಂಟೆ ತ್ರೈಜಗದೊಳು ॥ ೩ ॥

□ □

೧೬೪

ಬಹುರೂಪನೆ ತೊಟ್ಟು ಜೀವನೋಪಾಯಕ್ಕೆ
ಬಹಳ ದೇಹಂಗಳ ತಿರುಗುವನಲ್ಲ
ಬಹು ಭಾರಣೆ ಬಹುವ್ಯಾಕುಲವಳಿದು
ಸಹಜ ಸುಜ್ಞಾನಿಯಾದ ವೀರ ॥ ೧ ॥

ದೇಹದೊಳಱಿಯದೆ ದೇವರೆಂದೆನಿಸಿ
ಬಾಹಿರಂಗದ ಬಳಕೆಗೆ ಬಾಹನಲ್ಲ
ದೇಹ ಭಾವವನಱಿದವಿರಳನ್ಮನದಿ
ಸಾಹಜ ಸುಜ್ಞಾನಿಯಾದರೆ ಪರದೇಶಿ ॥ ೨ ॥

ವೇಷವ ಮಿಗೆ [ತೊಟ್ಟು] ಗ್ರಾಸವ ಬೇಡಿ
ಬಾಸೆಯ ಬಲುಹಿಂದ ದೇಶವ ತಿರಿಗಿ

ಆಸೆಗೆ ಹಿರಿದಾಗಿ ಧ್ಯಾನಕ್ಕೆ ಕಿಱಿದಾಗಿ
ಆಸೆಯಳಿದು ನಿಂದರೆ ಪರದೇಶಿ ‖ ೩ ‖

ಅಷ್ಟದಿಕ್ಕಿನೊಳ xx ದಿಕ್ಕುಗಳಾಗಿ ಕಂ–
ಗೆಟ್ಟು ಹಾರುವ ಹಂಸನ ನೆಲೆವಿಡಿದು
ನಟ್ಟನಡುವೆ ಲಿಂಗನೈಷ್ಠೆ[ಯಿಂದ]ಲಿ ಕ
ಣ್ಣೆಟ್ಟು ಪುರವನೈದಲು ಪರದೇಶಿ ‖ ೪ ‖

ಪಿಂಡದೊಡನೆ ಬ್ರಹ್ಮಾಂಡವಿರ್ದುದನು ಬ್ರ–
ಹ್ಮಾಂಡದೊಳಡಗಿಹ ಪಿಂಡವ ನೋಡಿ
ಪಿಂಡ ಬ್ರಹ್ಮಾಂಡದೊಳೆಡೆದೆರಹಿಲ್ಲದ–
ಖಂಡಿತ[ನು]ಭಾವಿಯಾದರೆ ಪರದೇಶಿ ‖ ೫ ‖

ನವನಾಳದಿಂದೊಳಹೊಱಗೆ ಸೂಸುವ ಪ್ರಾಣ
ಪವನ ಮನವನೊಂದು ಮುಖವನೆ ಮಾಡಿ
ಅವಧಾನದಿಂದೂರ್ಧ್ವ ಪಥದ ಪಟ್ಟದೊಳು
ತವೆ ಸುಳಿದಾಡ ಬಲ್ಲರೆ ಪರದೇಶಿ ‖ ೬ ‖

ಪರಶಿವನಿಹಪರಾಮಂಡಲದೊಳಗೆ
ಪರಮ ಪದವು ತನಗಾಶ್ರಯವಾಗಿ
ಪರಿಣಾಮಿ ನಿಜಗುರುಶಾಂತಮಲ್ಲನೊಳು
ಪರಮಪದವನೈದಲು ಪರದೇಶಿ. ‖ ೭ ‖

❑ ❑

೧೬೫

ರಾಗ : ಮುಖಾರಿ

ಕಂಡೆ ಪುಸಿಯಲ್ಲ ತಿಳಿಯಲಿಕರಿಯದಗೆ ಸುಳ್ಳಂ(?)
ಪುಂಡರೀಕದಿ ಕನಕರಜತಾಚಲಗಳಂ ‖ ಪಲ್ಲ ‖

ನಳಿಯೊಳಗಣ ಕೊಳದಿ ತಿಳಿನೀರು ತುಂಬಿ ಸಂ–
ಚಳಿಸದಿರೆಯದರೊಳಗೆಯಳಿರತ್ನವ
ತಳೆದು ರವಿ ಶಶಿ ಶಿಖಿಯ ಬೆಳಗಿನ ಬಳಸಿನಂತೆ
ಪೊಳೆವಣಿಮುತ್ತ ಮಧ್ಯದಿ ತೋರುವಿರವ ‖ ೧ ‖

ಕಾಳೋರ[ಗ]ಗೇಳುಗಂಟಿಕ್ಕಿ ಬೆಂಕಿಯಪುರದಿ
ಕೋಳುಗೋಟೆಯೊಳು ಶಿರವಿಟ್ಟು ಲಾಂಗುಲವ
ಮೇಲು ಸೋಟೆಯೊಳಿರಿಸಿ ನೆಲಸುರಿಗೆ ಸೈರಿಸದೆ
ಏಳುತಲಿ ಮೂವೆಸರನಾಂತು ರಂಜಿಪುದ ॥ ೨ ॥

ಹುಟ್ಟುಬಂಜೆಯ ಮಗನು ಹಿರಿಯ ಬೀಜವ ಬೆಳೆದು
ಸುಟ್ಟು ಗಿರಿಗಳ ಮೊಲನ ಕೋಡಕಿತ್ತು
ಕಟ್ಟೀಗಗದಿ(?) ಕೆರೆಯ ತಿಳಿನೀರ ಕುಡಿದು ನೆರೆ
ಬಟ್ಟಬಯಲೊಳಗೆ ಸತ್ತವನ ನೆರೆದ ಪರಿಯ ॥ ೩ ॥

ತುಂಬಿದ ಕೆರೆಯೊಳಗಷ್ಟಕುಂಭಿಗಳು ಹರಿಯೊಡನೆ
ಬೆಂಬಿಡದೆ ಸೆಣಸುತಿರೆ ಎಳವನೊಬ್ಬ
ಕಂಬಳಿಯ ಮುಸುಕಿಟ್ಟು ಕಮಲಗುಣದಿಂ ಕಟ್ಟಿ
ಕುಂಭದೊಳು ಸೆರೆಗೆಯ್ದು ಖೇಚರಿಯೆನಿಪುದ ॥ ೪ ॥

ಬೇರು ಮೇಲಣ ಸಸಿಯು ನೀರಿನಿಂ ಕೊರಗುತಿರೆ
ಭೂರಿಗಂಟಿಕ್ಕಿ ಪೊರೆಯಲು ಬುಡದೊಳು
ಸಾರ ಫಲವಾಗೆ ಸವಿದವ ನಿರಂಜನಲಿಂಗ
ಓರಂತೆಯಾಗಿ ಉರಿವತಿಶಯವವನು ॥ ೫ ॥

## ೧೬೬

ಜಯ ಜಯ ಶ್ರೀ ವಿರೂಪಾಕ್ಷ
ಜಯ ಜಯ ಯಕ್ಷಪ ಪಕ್ಷ(?) ॥ ಪಲ್ಲ ॥

ಲಯ ಭಯ ರಹಿತ ಲಲನಾನುಹಿತ
ದಯಗುಣ ಭರಿತ ಧನಪತಿ ಸುಹಿತ
ರಯ ಸುಖದಾತ ರಸಿಕ ಪುನೀತ
ಕೈತವಘಾತ ಕನಕಸುರೇತ ॥ ೧ ॥

ವಾರಿಜಭವಸಿರಪಾತ್ರ
ವಾರಣಾನನ ವಿದ್ಯಾಧಾತ್ರ

ತಾರಕರೂಪ ತನುಗುಣ ಲೋಪ
ವಾರಿತ ತಾಪ ವಸುನಗ ಚಾಪ
ಭೂರಿತ ಗೋಪ ಭುಜಗ ಕಲಾಪ
ದೂರಿತ ಪಾಪ ಮಂತ್ರಾಲಾಪ ॥ ೨ ॥

ತಾವಕ ಸೇವಕ ದುರಿತ
ದಾವ ದಾವಾನಲ ಚರಿತ
ಭಾವಜವೈರಿ ಭವಸಂಹಾರಿ
ಯಾವರನದಿ(?) ಮಹಿಮಾಧಾರಿ
ಜೀವ ಶರೀರಿ ಜಿತ ಸಂಸಾರಿ ॥ ೩ ॥

ಗೋಪ ಚಾಪ ಸುಮಾಪ x
ತಾಪಸ ಹೃದಯ ದೀಪ
ತಾಪ ವಿದೂರ [ಪರಮಾಧಾರ]
ಗೋಪಯ ಧರ ಗೋಸ್ಮೃತಿ ಹರ
ಜ್ಞಾಪಕ ಪೂರ ಜನದುದಾರ ॥ ೪ ॥

ಇನಕೋಟಿತೇಜ ಪ್ರಕಾಶ
ಘನ ನಿರಂಜನಲಿಂಗ ವೇಷ
ಜನಿಮೃತಿ ನಾಶ ಜಂಗಮ ವಾಸ
ಕನಕನಗೇಶ ಕಮಲ ಸಂಭೂಷ
ಮುನಿ[ಜನ] ಪೋಷ ಮುಕ್ತಿ ವಿದೇಹ
ಮನುಗುಣಕೋಶ ದೃಹದಾಕಾಶ ॥ ೫ ॥

೧೬೭

ವರ ಮಹಾಶರಣನ ಸುದೇಹದೊಳಗಿಪ್ಪ ಸುರ–
ಚಿರದ ನವಚಕ್ರದೊಲು ಸಂಬಂಧವಾಗಿರ್ಪ
ಪರತರವೆನಿಪ್ಪ ಏಕೋತ್ತರಶತಸ್ಥಲದ ಪರಿಯ ವಿರಚಿಸುವೆನೊಲವಿಂ॥ ಪಲ್ಲ ॥

ಉರುತರದ ಪಿಂಡ ಪಿಂಡಜ್ಞಾನ ಸಂಸಾರ
ನಿರಸನಂ ಗುರುಕರುಣ ಗುರುಲಿಂಗತ್ರಿವಿಧ ಸು–
ಸ್ಥಿರದ ಶಿವಲಿಂಗಧಾರಣವು ಲಿಂಗತ್ರಯಂ ಭೂತಿ ರುದ್ರಾಕ್ಷಿಯೆನಿಪಾ

ನಿರುತವಹ ಪದಿಮೂರು ಸ್ಥಲಗಳಾಧಾರದೊಳು
ಪರತರ ಮಹೇಶ ಆಗಮ ಲಿಂಗತ್ರಯವು ಸುರ-
ಚಿರದ ಲಿಂಗದನಿಷ್ಠೆ ಕಾಯಲಿಂಗತ್ರಿವಿಧ ಪೂರ್ವಾಶ್ರಯದ ನಿರಸನಂ॥ ೧ ॥

ವಿನುತ ಪಾಗಾದ್ವೈತನಿರಸನಾಹ್ವಾನನಿರ
ಸನವಷ್ಟತನುಮೂರ್ತಿ ನಿರಸನಂ ಪನ್ನೆರಡು
ಅನುವಿನಿಂ ಸ್ವಾದಿಷ್ಠದೊಳ್ಸರ್ವಗತನಿರಸನಾಚಾರಲಿಂಗತ್ರಯಾ
ಘನ ಶಿವ ಜಗನ್ಮಯಂ ಭಕ್ತದೇಹಿಕಲಿಂಗ
ವೆನಿಪಸ್ಥಲ ಪಂಚಾಕ್ಷರಿಯು ಚರತ್ರಿವಿಧ ಚಿ
ದ್ಘನದ ಭಕ್ತಿಸ್ಥಲೋಭಯ ತ್ರಿವಿಧ ಸಂಪತ್ತು ಸ್ಥಲ ಚತುರ್ವಿಧಸಾರವು॥ ೨ ॥

ನೆಲೆಯೆನಿಪುಪಾಧಿ ನಿರುಪಾಧಿ ಸಹಜಗಳೆನಿ-
ಪ್ಪಲಘುಮಾಟತ್ರಯವು ಪದಿನೇಳೆನಿಪ್ಪವೀ
ಸ್ಥಲವು ಶಿಖೆಯಲ್ಲಿ ಸಂಬಂಧ ನಾಲ್ವತ್ತೆರಡು ಬಿಂದು ಸ್ವರೂಪೆನಿಪವು
ಲಲಿತಪ್ರಸಾದಿಯು ಅನುಗ್ರಹ ತ್ರಿವಿಧ [ವ]ವು
ಒಲವಿನಿಂ ಗುರುಲಿಂಗ ಚರಭಕ್ತ ಶರಣ ಸು-
ಸ್ಥಲ ಮಹಾತ್ಮೆಯರ್ಪಿತಲಿಂಗ ತ್ರಿವಿಧ ಪನ್ನೆರಡು
ಮಣಿಪೂರಕದೊಳು ॥ ೩ ॥

ವಿದಿತವಹ ಪ್ರಾಣಲಿಂಗಿಯವೊಲವು ಲಿಂಗತ್ರಯ
ಸದಮಲಪ್ರಾಣಲಿಂಗಾರ್ಚನೆಯು ಶಿವಯೋಗ
ಪುದಿದ ಸುಸಮಾಧಿಯು ನಿರೂಪ ಲಿಂಗತ್ರಯಂ ಲಿಂಗನಿಜವೆನಿಪಸ್ಥಲಂ
ಮುದದಿಂ ಪ್ರಸಾದ ಲಿಂಗತ್ರಯವೆನಿಪ್ಪ ಈ
ಪದಿಮೂರುಸ್ಥಲವನಾಹತದಲ್ಲಿಯಂಗಲಿಂ-
ಗದಸ್ಥಲಂ ಪಾದೋದಕತ್ರಯ ಪ್ರಸಾದ ಮಹಿಮೆಯು
ತನುಗುಣತ್ರಿವಿಧದಾ ॥ ೪ ॥

ಲಿಂಗಸ್ಥಲವಿವೆಂಟು ಪಶ್ಚಿಮದೊಳನುವಾಗಿ
ಸಾಂಗವಾಗಿಹವು ತೆತ್ತೀಸಸ್ಥಲಂಗಳಿವು
ಮಂಗಳಕಳಾ ಸ್ವರೂಪಹವು ಶರಣಸ್ಥಲಂ. ತ್ರಿವಿಧ ನಿಃಪತಿಲಿಂಗವು
ಹಾಂಗೆ ತಾಮಸ ನಿರಸನಸ್ಥಲಂ ನಿರ್ದೇಶ
ಕಂಗೊಳಿಪ ಆಕಾಶಲಿಂಗಸ್ಥಲ ತ್ರಿವಿಧಂ

ಹಿಂಗದೀ ಒಂಬತ್ತು ಸ್ಥಲಗಳು ವಿಶುದ್ಧಿಯೊಳು
ಸಂಬಂಧವಾಗಿರ್ಪವು ॥ ೫ ॥

ಮುಂದೆ ಕೇಳೈಕ್ಯ ಕೊಂಡುದು ಪ್ರಸಾದಿಸ್ಥಲಂ
ನಿಂದುದೋಗರ ಚರಾಚರನಾಸ್ತಿಸ್ಥಲಕಿನ್ನು
ಹೆಂದದಾಚಾರ ಸಂಪತ್ತುಸ್ಥಲಂ ಭಾಂಡ ಭಾಜನಂ ಅಂಗಲೇಪಂ
ಎಂದೆನಿಪ ಸ್ಥಲವಿವೆಂಟಾಜ್ಞೆಯೊಳು ಸ್ಥಿರದಿ ಸಂ-
ಬಂಧವಾಗಿಹವೇಕಭಾಜನಸ್ಥಲವು ಮುದ
ದಿಂದ ಸಹಭೋಜನಂ ಸ್ವಯಪರವರಿಯದ ಸ್ಥಲಭಾವಭಾವಾ
ನಷ್ಟವು ॥ ೬ ॥

ಮುಂತಿನ್ನು ಜ್ಞಾನಶೂನ್ಯಸ್ಥಲಂ ನೋಡಲ-
ತ್ಯಂತ ಘನತರ ಶೀಲಸಂಪಾದನಸ್ಥಲಂ
ಸಂತತ ಪ್ರಕಾಶಲಿಂಗತ್ರಯಂಗಳೊಂಬತ್ತುಸ್ಥಲ ಬ್ರಹ್ಮರಂಧ್ರದಲ್ಲಿ
ಇಂತು ಷಡ್ವಿಂಶತಿ ಸ್ಥಲ[ಂ]ಗಳಿವು ತಿಳಿಯಲೋ-
ರಂತೆ ನಾದಸ್ವರೂಪವಾಗಿರ್ಪವೆಂದು ಚಿ
ತ್ಕಾಂತನಹ ಗುರುನಿರಂಜನಲಿಂಗದೊಡವೆರದ
ಶರಣರವಧರಿ[ಸಿ]ವೊಲಿದು ॥ ೭ ॥

 

೧೬೮

ಕೇಳು ದೇವರದೇವ ಜಾಳು ಮಾಡಲಿಬ್ಯಾಡ
ಬಾಳಪರಿಯಲಿ ಬೇಡಿಕೊಂಬೆ
ಊಳಿಗವ ಮಾಡುವ ಆಳಿನ ಬಿನ್ನ[ಹವ]
ಬೀಳುಮಾಡಲಿಬ್ಯಾಡ ಗುರುವೆ ॥ ೧ ॥

ಕಾಕುಮನುಜನು ನಾನು ಏಕ ಗುಣದವನಲ್ಲ
ಸಾಕ್ಷಾತ್ ನೀನು ದಯವಾಗೊ
ಸಾಕಯ್ಯ ಬಳಲುವುದು ವಾಕುಪರುಷದ ನಿಧಿಯೆ
ಕಾಕುಮಾಡಲಿಬ್ಯಾಡ ಗುರುವೆ ॥ ೨ ॥

ಭಕ್ತವತ್ಸಲದೇವ ಬಡವರಾದ [ರೇನೈ]
ಮುಕ್ತಿ ಕೊಡುವ ದೇವ ನೀನೆ

ಯುಕ್ತಿ ತೋರಿಸಿ ಕರ್ತ ಗುರು ಉಪದೇ[ಶಿಸಿ]
ರಕ್ಷಿಸಲಿ ಬೇಕೆನ್ನ ಗುರುವೆ ॥ ೩ ॥

ಜಡದೈವದೊಡೆಯನೆ ಉಳುಹಿ ತಡಿಗೆ ಹಾಕು ನಿಮ್ಮ
ಅಡಿಯವಂದಿ[ಸುವೆ] ಬಿಡದೆ
ಬಿಡಗುರಿಯ ಮಾಡಯ್ಯ ಗುಣಮಣಿದೇವನೆ
ಒಡೆಯ ಎನ್ನಪರಾಧ ಕ್ಷಮಿಸಿ ಸೈರಿಸು ಗುರುವೆ ॥ ೪ ॥

ನಂಬಿದ ಭಕ್ತರನು ಇಂಬುದೋರಿ [ಸಿ] ನೀನು
ಶಂಭು ಶಂಕರಲಿಂಗ ಸಂಗಮೇಶ್ವರನೆ
ಡಂಬಕದಾಟವನು
ನಂಬು ನಂಬಿಗಿ ತೋರಿದಯ್ಯ ಗುರುವೆ ॥ ೫ ॥

ಕರುಣ ಕೃಪೆಯಲಿ ಸಲಹಯ್ಯ ಶರಣ ಮಹಾತ್ಮನೆ
ಮೊರೆಯಿಡುವೆ ನಾ ನಿಮಗೆ ಗುರುವೆ
ಚರಣಕಮಲಕ್ಕೆ ಶಿರಬಾಗಿ ಕರಮುಗಿವೆ ನಿಮ್ಮ
ನೆರೆ ನಂಬಿದೆನಯ್ಯ ಗುರುವೆ ॥ ೬ ॥

ಮಂದಮತಿ ಮಾಯಾಪಾಶದೊಳು ಬಿದ್ದು ಒರ-
ಳ್ಯಾಡುವೆನು ಶುದ್ಧ [ಸಿದ್ಧ] ಪ್ರಸಿದ್ಧವರಿಯದಲಿ
ಒಂದುಗುಣವನು ಬಿಡದೆ ಹೊಂದಿದೆನು ನಿಮ್ಮನು
ಕಂದನಿಗೆ ದಯವಾಗೊ ಗುರುವೆ ॥ ೭ ॥

ಆರುದರುಶನ ಮೀರಿ ಈ ಭುವನದೊಳು
ಮೂರು ಆರನು ಏಕಮಾಡಿ
ತೋರುವ ಘನಸೂತ್ರ ಮೀರಿದ ಪದವಿಯ[ದು]
ಆರಿಗಳವಲ್ಲ ಗುರುವೆ ॥ ೮ ॥

[ಭವಿಯ] ಜನ್ಮದಿ ಪುಟ್ಟಿ ಬಳಲಿ ಬೆಂದೆನು ನಾನು ಈ
ಭವಕೆ ಎನ್ನೊಡೆಯ ದಯವಾಗೊ
ತ್ರಿಜಗ ಬೈಳಗಿದಿ ಐಕ್ಯಸ್ಥಲದೊ[ಡೆಯ] ನೆ
ಅಜಾತ ನಿರ್ವಾಣಿಚೆನ್ನಬಸವ ಗುರುವೆ ॥ ೯ ॥

 

೧೬೯

ರಾಗ : ಶಂಕರಾಭರಣ

ಅರು ತಿಳಿಯಬಹುದೀ ಘನವ
ನೀರಜದೊಳಗೊಂದು[ಸಸಿಯುದಯವ ಕಂಡೆ] ॥ ಪಲ್ಲ ॥

[ಮುಪ್ಪುರಗಳ]ನೆ ಒಂದು
ಕಪ್ಪೆನುಂಗಿದುದ ಕಂಡೆ
ಸರ್ಪನ ಹೆಡೆಯ ಮೇಲೆ
ಕರ್ಪುರದುರಿಯ ಕಂಡೆ ॥ ೧ ॥

ಪಂಕಜನಾಳದೊಳು ಮಿ
[ನಾಂಕನ ಬಾಣವ ಕಂಡೆ
ಕಂಕಣದುಲು] ಹ ನಂದಿ
ಕಣ್ಣುದೆರೆದುದ ಕಂಡೆ ॥ ೨ ॥

ಏಳುಕಮಲದೊಳೊಂದು
ಹೂಳಿರ್ದ ವಸ್ತುವ ಕಂಡೆ
ಹೇಳಬಾ[ರದಗ್ಗಳೆಯ
ನಿಶ್ಚಿಂತಶಾಂತನ ಕಂಡೆ] ॥ ೩ ॥

೧೭೦

ರಾಗ : ಶಂಕರಾಭರಣ

ಎನ್ನ ಕಾಯವೆ ಸೆಜ್ಜೆವನೆಯಲ್ಲದೆ ಬೇರೆ
ಇನ್ನು ನಿಮಗೆ ಸೆಜ್ಜೆವನೆಯುಂಟೆ ದೇವ? ॥ ಪಲ್ಲ ॥

ಇದೆ ಶಾಂತಿಸಲಿಲ ಮಜ್ಜನಕೆರೆವರೆ ಗಂಧ–
ವಿದೆ ನಿಜವಸ್ತುವಕ್ಷತೆಯರೆರೆಹೊ(?)
ಇದೆ ಪುಷ್ಪ ನಿಜ ಸಹಸ್ರದಳ ಕಮಲ[ವ]
ಇದೆ ಸದ್ವಾಸನೆ ಸುಖ ನಿಜವಿದೆ ನಿಮಗೆ ... ॥ ೧ ॥

ಜ್ಞಾನಜ್ಯೋತಿಯೆ ದೀಪ ನಿರ್ಮಳವೆನಿಸುವ
ಧ್ಯಾನ ಮಹಾಮೃತ ನೈವೇದ್ಯವಿದಕೊ
ಏನೆಂಬೆ ಫಲಪದ ರಹಿತ ನಿರಾಸೆಯು
ತಾನೆ ತಾಂಬೂಲವಿಂತಿದೆ ನಿಜ ನಿಮಗೆ ॥ ೨ ॥

ಎಡೆದೆಱಹಿಲ್ಲದಾವಾಗ ಮಾನಸದಿಂದ
ಒಡೞಿಸುವಷ್ಟವಿಧದ ಪೂಜೆಯೊಮ್ಮೆ
ಬಿಡದೆನ್ನೊಳಗೆಯಿಹು[ದ]ಱದು ನೀಲಗ್ರೀವ
ಕಡೆಯಲಾವುದು ಪೂಜೆಯೆಂಬುದು ನಿಮಗೆ ॥ ೩ ॥

೧೭೧

ಬಸವ ಬಸವಯೆಂದರೆ
ಅಸಮಲಿಂಗಾಂಗಿಯಾತನಹುದೆಲೆಯಾತ್ಮ ॥ ಪಲ್ಲ ॥

ಬಸವ ತಾ ದೇಹ ಬಸವ ಪ್ರಾಣ ಸುಜ್ಞಾನ
ಬಸವ ನಿರ್ಮಲ ನಿಜ ಬಸವ ತಾ ನಿರವಯ ॥ ೧ ॥

ಬಸವಣ್ಣನಾದಿ ಬಸವಣ್ಣನನಾದಿಯು
ಬಸವಣ್ಣ ಪರಮಾತ್ಮ ಬಸವಣ್ಣ ಪರಬ್ರಹ್ಮ ॥ ೨ ॥

ಬಸವನೆ ಗುರು ಚೆನ್ನಬಸವನೆ ಲಿಂಗವಾ
ಬಸವನೆ ಚರ ಪರ ಬಸವ ನೀಲಗ್ರೀವ ॥ ೩ ॥

❑ ❑

೧೭೨

ಬಿಡಲಾರೆನಕ್ಕ ಈ ದೇವನ ಚೆಲ್ವ
ಕಡುಸ್ನೇಹದಿಂದೆನ್ನೊಡಗೂಡುತಿರ್ಪ
ನ್ನೊಡೆಯ ಕೊಟ್ಟೂರೇಶನಡಿದಾವರೆಯನು ॥ ಪಲ್ಲ ॥

ತನ್ನದಯದಿ ತಾನೆ ಬಂದನೆ ಕಣ್ಣ
ಸನ್ನೆಯಿಂದಲಿ ಎನ್ನ ಕರೆದನೆ
ರನ್ನದುಂಗುರವನು ತೋಱಿ ಎಮ್ಮವರಿಗೆ ಮಾಱಿ

ಎನ್ನಯ ಮಾತು ಮೀರಿ ಎಚ್ಚರವೆಂದು ಸಾರಿ
ಅದರಗಳ ಬೀರಿ ಮೈಯೊಲು ಮದವೇರಿ
ಕುಚಕೆ ನಖ ಊರಿ ಮೆಲ್ಲನೆ ಮಂಚವೇರಿದನಕ್ಕ ॥ ೧ ॥

ತೆಗದಪ್ಪಿಕೊಂಡು ಮುಂಡಾಡಿದ ಮುದ್ದು
ಮೊಗ ನೋಡಿ ಬುದ್ಧಿಯ ಹೇಳಿದ
ಜಗದೊಳು ಭಕ್ತರ ದೇವ ಈತಗೆ ಸರಿಯಾವ
ಇಷ್ಟಾರ್ಥವನೀವ ಲಿಂಗದ ಮೇಲೆ ಮೋಹ
ಜಂಗಮದಲ್ಲಿ ಜೀವ ಗುಣದ ಲೇಸಭಾವ
ಈರೇಳರ ಕಾಯ್ವ ಕಾಣಕ್ಕ ॥ ೨ ॥

ಸರಸಿಜವದನೆ ಬಾರೆಂದೆನ್ನ
ಅರೆಗಳಿಗೆ ಬಿಟ್ಟಿರಲಾರೆನೆಂದನ
ಬರುದೆ ಬಾಯಾರುವಳಲ್ಲ ವಿವೇಕವ ಬಲ್ಲ
ಪುರುಷರೊಳಗೆಲ್ಲಪಾಪಕೆ ಗುರಿಯಲ್ಲ [ನಂಬಿದ]
ವರ ಕೊಲ್ಲ ಸರ್ವರಿಗೆಲ್ಲ ಬೆಲ್ಲ
ಬಸವಲಿಂಗ ಚೆಲ್ವ ಕಾಣಕ್ಕ ॥ ೩ ॥

❑ ❑

೧೭೩

ಭಿಕ್ಷ ಬೇಡಿದನೆಂದು ನಿಂದಿಸುವ ಜಡ ನರರ
ಶಿಕ್ಷಿಸದೆ ಬಿಡುವನೆ ಗುರುವರ ಫಕೀರ ॥ ಪಲ್ಲ ॥

ಈರೇಳು ಲೋಕದರಸೆನಿಪ ಶ್ರೀ ಮಹಾದೇವ
ಈರೈದು ಮನಿಮನಿಯ ಕ್ಷೀರಿದುಂಡನು
ಸಾರಿಯಷ್ಟಾವರಣ ನಿಷ್ಠೆಯೊಳು ಮನ ಬಲಿದು
ಧೀರತನದಿಂ ರಾಜಯೋಗಿಯೆನಿಸಿದನು ॥ ೧ ॥

ವರ ಲಕ್ಷ್ಮಿಪತಿಯೆನಿಪ ಹರಿಯು ಕೊಳಲನು ಪಿಡಿದು
ಸರಿಗಮಪದನಿಸೆಂಬ ಸುಸ್ವರದ
ಪರಿಪರಿಯ ರಾಗ ರಚನೆಯದೋರಿ ನುಡಿಸುತ್ತ
ಹರುಷದಿಂ ಮನಿಮನಿಯು ತಿರಿದ ಮಹಮಹಿಮ ॥ ೨ ॥

ಭಿಕ್ಷ ಬೇಡುವ ಪಥವ ಮೋಕ್ಷಮಾರ್ಗವಿದೆಂದು ಭಾ
ಳಾಕ್ಷ ಪೇಳಿದ ಶ್ರುತಿಯ ನೋಡಿ ತಿಳಿದು
ತ್ರಕ್ಷಗಣ ಭಕ್ತ ಬಾಹದರಖಾನ ಭೂಮಿಪನು
ಭಿಕ್ಷವನು ಬೇಡಿ ಗುರುಚರವ ಪೂಜಿಸಿದ ॥ ೩ ॥



೧೭೪

ಬಂದು ಬಂದು ಪೋದನಮ್ಮ ನಿಂದುದಿಲ್ಲ ಒಂದು ಗಳಿಗೆ-
ನಿಂದು ಜೂಟ ಸಿದ್ಧಮಲ್ಲೇಶ
ಒಂದು ಕಣ್ಣು ಕಂಡಡೆ ಮತ್ತೊಂದು ಕಣ್ಣು ಕಾಣಲಿಲ್ಲ
ತಂದು ತೋರೆ ಪ್ರಾಣಕಾಂತನ ॥ ಪಲ್ಲ ॥

ಕಾಲ ರುಳಿಯ ಕೊರಳ ಕಂಠಮಾಲೆ ಮುತ್ತು ರನ್ನ ಪಚ್ಚೆ
ನೀಲಗಡುಕು ಕಿವಿಯೊಳೊಲೆವುತ
ನೀಲುವಲ್ಲಿಯನು ಕಟಿ ಮೇಲೆ ಹೊದ್ದು ತಾವರೆಯ
ಕೋಲು ಕುಸುಮಗಳ ತಿರುಹುತ ॥ ೧ ॥

ಸಣ್ಣ ಪಾಗು ಶಿಖೆಗೋರ್ಲೊನ ಬಣ್ಣದೊಲ್ಲಿ ಕಸ್ತುರಿಯ
ತಿಣ್ಣ ಬೊಟ್ಟು ಫಣೆಯೊಲೆಸೆವುತ
ಚೆನ್ನಸರ ಚವುಕುಳಿಯ ಕನ್ನಡಿಯಿಂದಲಿ ನೋಡಿ
ಪನ್ನೆ ಮೀಸೆಗಳ ತಿದ್ದುತ
ಹೊನ್ನ ಹಾವುಗೆಯು ನಲಿವುತಲ್ಲಿ ಕಣ್ಣುಸನ್ನೆಯನು ಮಾಡಿ
ಮನ್ಮಥ ಮಲ್ಲಿಕಾರ್ಜುನ ॥ ೨ ॥

ಸುತ್ತಿನ ಚಿಮ್ಮುರಿಮಾಲೆ ಮುತ್ತಿನ ಕುಚ್ಚು ಫಣೆಯೊಳು
ಕಸ್ತುರಿ ಲೇಪನ ಮೈಯ್ಯೊಳು
ಒತ್ತಿದ ಗಂಧವು ಗಲ್ಲ ಹಸ್ತದುಗುರು ದಂತ
ಹತ್ತಿವತ್ತಿಕೊಳುತ ವಿಲಾಸದಿಂದಲಿ
ಮತ್ತಯವ್ವನೆಯರು ಕಂಡು ಹತ್ತಗರೆದು ಹರುಷದಿಂದ
ವತ್ತಿಕೊಳ್ಳಲೆಂಬ ಸಮಯಕೆ
ಚಿತ್ತಜಾರಿಯರು ಬೆಂಬತ್ತಿ ಬಂದುವತ್ತಿಕೊಳ್ಳೆ
ಚಿತ್ತಜಾರಿ ಜಗುಳು ನಗುತಲಿ ॥ ೩ ॥

ಮಲ್ಲಿಗೆಮಾಲೆಯ ತಲೆಯಲ್ಲಿ ಸುತ್ತಿ ಚುಂಗು ಫಣೆಯಲ್ಲಿ
ಭಸ್ಮರೇಖೆ ರಾಜಿಸೆ
ವಲ್ಲಿಯಂ ಕಂಕುಳೊಳಿಟ್ಟು ಮೆಲ್ಲಡಿವಿಡಿದು ಬಿಗಿವ
ಚೆಲ್ಲಣವ ತಿದ್ದಿಕೊಳ್ಳುತ
ಗಲ್ಲದ ವೀಳ್ಯವು ಹಸ್ತಪಲ್ಲವದ ಬಿಳಿಯೆಲೆ
ಚೆಲ್ಲೆಗಣ್ಣು ಕೆಂಪು ಬೊಂಬೆಯ ಉಲ್ಲಾಸದಿಂದಲಿ ಕರ
ಹಲ್ಲು ಹೊಗಮುಖವ ಚೆಲ್ವ ಚೆಲ್ವಕೊಳುತ ಮಲ್ಲಿಕಾರ್ಜುನ ॥ ೪ ॥

ಸಾರ ಸಾರಲಿಕೆ ಸೂಳೆಗೇರಿಗೆಯ್ದು ಮೂರುದಿನ
ವಾರನಾರಿಯರ ಕೂಡಿದ
ತೋರಕುಚದವೆದೆಯ ಗಾಯ ಸಾರಗಂಧ ಕುಂಕುಮವ
ಸೂರೆಗೊಂಡನಂಗರಂಗವ
ಮಾರಕಲಹದಿಂದಲಿ ಮಾರುಕೊಂಡ ಮತ್ತ ಎನ್ನ
ಸಾರ ಹೃದಯ ಮಲ್ಲಿಕಾರ್ಜುನ ಸೇರಿಕೊಳ್ಳಲಿ ಬಂದು
ಸಾರಿದ ಬುಕ್ಕಾಂಬುಧಿ ಆರಾಧ್ಯ ಮಲ್ಲಿಕಾರ್ಜುನ ॥ ೫ ॥

❑ ❑

೧೭೫

ಲಿಂಗ ಬಂದಾನೆ ಗುರು ಚರಲಿಂಗಯ್ಯ ಬಂದಾನೆ
ಮಂಗಲಾತ್ಮಕ ಮುಕ್ತಿ ದಯ ಬುಕ್ಕಾಂಬುಧಿ ಸಂಗಯ್ಯ ॥ ಪಲ್ಲ ॥

ಬಾಲಕರ ಲೀಲೆಯಲಿ ಭಕ್ತರ ಆಲಯದೊಳು ಪೊಕ್ಕು
ಪಾಲು ಸಕ್ಕರೆಗಳ ಸವಿವುತ ತ್ರಿಜಗ ಪಾಲಿಪ ಗುರುರಾಯ ॥ ೧ ॥

ಅಮ್ಮವ್ವೆಯ ಮೊಲೆಯ ಉಂಬುತ ಅಮ್ಮಮ್ಮ
ಎಮ್ಮಯ್ಯನು ದಮ್ಮಯ್ಯನು ಮುಕ್ತಿಯ ಮುಮ್ಮ ಉಳ್ಳ ಸಿರಿವಂತ॥ ೨ ॥

ಅರಳೆಲೆ ಉರಿಗಣ್ಣು ಕುಂಡಲ ಕೊರಳಪದಕ ಹಾರ
ಬೆರಳುಂಗರ ಕಂಕಣ ಕಟಿಸೂತ್ರದವರ ಮೂರುತಿಗೊಲಿದ ॥ ೩ ॥

ಚೆಲ್ಲೆಗಂಗಳ ನೋಟ ಅಮೃತ ಚೆಲ್ಲುವ ಮುದ್ದು ಮೊಗ
ಗಲ್ಲದರೇಖೆಯು ವಲ್ಲಿಯ ಶೃಂಗಾರ ಲಲ್ಲೆಮಾತಿನ ಚೆದುರ ॥ ೪ ॥

ಕಿರುನಗೆ ನಗುವುತಲಿ ಮಂಡೆಯ ಕಿರುಜಡೆ ಒಲಿವುತಲಿ
ಝುಣಝುಣರೆಂಬ ಪಾದದ ಗೆಜ್ಜೆ ಗುರು ಬುಕ್ಕಾಂಬುಧೀಶ ॥ ೫ ॥

❑ ❑

೧೭೬

ಇಂದು ಎನ್ನ ರಕ್ಷಿಸಲ್ಕೆ ಬಂದ ಶಿವನೆಂದು
ಚಂದ್ರಧರ [ಮುರಿಗಿ]ಯ ಶಾಂತನ ಕಂದ
ಬೂದಿಯ ಬಸವರಾಜೇಂದ್ರ ॥ ಪಲ್ಲ ॥

ನಿತ್ಯ ಪವಾಡವ ಗೆಲಿದಂಥ ದೇವ
ನಿಶ್ಚೈಸಿದ ಭಕ್ತರಿಗೊಲಿದೊಲಿದೀವ
ಅಚ್ಯುತ ಅಜ ಸುರ ಅಖಿಳರ ಕಾವ
ಮಚ್ಚಿ ಮಾನಿನಿಯು ಮುಡಿಯೊಳಿಪ್ಪಭವ ॥ ೧ ॥

ಕರಿಗೊರಳ ಉರಿನಯನ ಕರದಿ ಕಪಾಲ
ಶಿಖಜಡೆಗೆ ಉರಗನ ಧರಿಸಿದ ಬಾಲ
ಕರಿಚರ್ಮಾಂಬರ ಪೊದ್ದ ಕರುಣದೆಲುಮಾಲ
ಮುರಿಗಿಯ ಶಾಂತನ ಮಗನಿವ ಲೋಲ ॥ ೨ ॥

ಕಾಮನನುರುಹಿದ ಸೋಮಧರೇಶ
ಭೂಮಿಗೆ ಜಾಳೇಂದ್ರನಾಳಿದ ಮಹೇಶ
ಪ್ರೇಮದಿ ತ್ರಿಪುರವನುರುಹಿ ಶಾಂತೇಶ
ಈ ಮಹಿಮೆಯನುಳ್ಳ ಬೂದಿಬಸವೇಶ ॥ ೩ ॥

ಚನ್ನಯ್ಯನೊಡನುಂಡ ಕನ್ನಪ್ಪಗೊಲಿದ
ಚೆನ್ನಿಯ ಪುರುಷನ ಪ್ರಾಣವ ಪಡೆದ
ಚೆನ್ನಬಸವನ ಭಕ್ತಿ ನೋಡಲ್ಲಿ ನಡದ
ತನ್ನ ಸಿರಕೆ ಸತ್ತ ಕರು ಹೊತ್ತು ಮೆರದ ॥ ೪ ॥

ಧರೆಯೊಳಧಿಕವಾದ ವರ ಗೊಬ್ಬೂರಿಂದ
ಮುರಿಗಿಯ ಶಾಂತನ ಮಗನಿವ ಕಂದ
ಹರಶರಣರ ಕಾಯ್ವುದು ಪರಿ ಚಂದ
ನೆರೆ ಧೂಳಿಬಸವನ ಸಲಹುತ ಬಂದ ॥ ೫ ॥

❑ ❑

೧೭೭

ಆರಿಗೆ ಆರಿಲ್ಲ ಲಿಂಗವೆ ಮತ್ತಿ
ನ್ನಾರಾದರೇನಯ್ಯ ಲಿಂಗವೆ
ಮಾರಹರ ನಿಮ್ಮ ಕರುಣ ತಪ್ಪಿದ ಮ್ಯಾಲೆ
ದೂರೆಷ್ಟು ನಾನಾದೆ ಲಿಂಗವೆ ॥ ೧ ॥

ತಂದೆ ತಾಯಿ ನೀನು ಲಿಂಗವೆ
ಬಂಧು ಬಳಗ ನೀವು ಲಿಂಗವೆ
ಬಂದಂಥ ದುರಿತವ ಪರಿಹಾರ ಮಾಡಯ್ಯ
ಚಂದ್ರಶೇಖರ ಲಿಂಗವೆ ॥ ೨ ॥

ಮುನ್ನಮಾಡಿದಕರ್ಮ ಲಿಂಗವೆ
ಎನ್ನ ಬೆನ್ನಟ್ಟಿ ಬಿಡದ್ಯೆಯ್ಯ ಲಿಂಗವೆ
ಇನ್ನಾದರೆ ನಿಮ್ಮ ಕೃಪೆಯಿಟ್ಟು ಸಲಹ್ಯೆಯ್ಯ
ಚನ್ನ ಚಿನ್ಮಯರೂಪ ಲಿಂಗವೆ ॥ ೩ ॥

ನೊಂದೆನು ಹಲವಂಗದಲ್ಲಿ ಲಿಂಗವೆ ಬಹಳ
ಬಂಧನ ಬಿಡಿಸ್ಯೆಯ ಲಿಂಗವೆ
ಬಂದಂಥ ನೋವುಗಳ ಪರಿಹಾರ ಮಾಡಯ್ಯ
ಇಂದ್ರಪೂಜಿತ ಲಿಂಗವೆ ॥ ೪ ॥

ಅರಿಷಡುವರ್ಗಕೆ ಲಿಂಗವೆ ಎನ್ನ
ಗುರಿಮಾ[ಡದಿ]ರಿಸ್ಯೆಯ ಲಿಂಗವೆ
ಗುರುಪಾದ ಗತಿಯೆಂದು ನಂಬಿದ ಭಕ್ತರ
ಚರಣದೊಳಿರಿಸ್ಯೆಯ್ಯ ಲಿಂಗವೆ ॥ ೫ ॥

ತೊಟ್ಟು ಹುಟ್ಟಿದ ಫಲವು ಲಿಂಗವೆ ಬಾಯಿ
ಬಿಟ್ಟರೆ ಸಲ್ಲವೇನೊ ಲಿಂಗವೆ
ಸಿಟ್ಟಿಲಿ ಶಿವನ ಬೈದರೆ ಆ ಪಾಪ ಬೆ–
ನ್ನಟ್ಟಿ ಬಿಡದ್ಯೆಯ್ಯ ಲಿಂಗವೆ ॥ ೬ ॥

ಅಡಿಯಲೋದರೆ ಇಲ್ಲ ಲಿಂಗವೆ ಮೇಲೆ
ಹಿಡಿಲಿಕ್ಕೆ ಕೊಂಬಿಲ್ಲ ಲಿಂಗವೆ

ನಡುಸಮುದ್ರದೊಳು ಹಡಗು ಮುಳುಗದಂತೆ
ತಡಿಯ ಸೇರಿಸಯ್ಯ ಲಿಂಗವೆ ॥ ೭ ॥

ಮನವೆ ಮಜ್ಜನಸಾಲೆ ಲಿಂಗವೆ ಎನ್ನ
ತನುವೆ ಧೂಪಾರ್ತಿಯು ಲಿಂಗವೆ
ಮನದೊಳಗಿರುವಂಥ ಎಳೆಯ ಹೊಂಬಾಳೆಯ
ನಿನಗೆ ತಂದರ್ಪಿಸುವೆ ಲಿಂಗವೆ ॥ ೮ ॥

ಗಂಧಾಕ್ಷತ ಪುಷ್ಪ ಲಿಂಗವೆ ನಾವು
ತಂದೀವಿ ಪುಷ್ಪವು ಲಿಂಗವೆ ಎಂದಿ–
ನಂದದಿ ನಿಮಗೆ ತಂದು ಅರ್ಪಿಸುವೆ
ತಂದೆಯಾಗಿ ಸಲಹೈಯ ಲಿಂಗವೆ ॥ ೯ ॥

ಕೋಳಿ ಕೂಗದಮುನ್ನ ಲಿಂಗವೆ ಇನ್ನು ಮಾನವ–
ರೇಳದ ಮುನ್ನ ಲಿಂಗವೆ
ಏಳೆಂಟು ವ್ಯಾಳ್ಯದಲ್ಲಿ ಶಿವಪೂಜೆ ಮಾಡುವರ
ಆಳಿನ ಆಳಾಗಿಯಿರಿಸೈಯ ಲಿಂಗವೆ ॥ ೧೦ ॥

ಇಕ್ಷುಚಾಪನ [ಗೆ] ಲಿದ ಲಿಂಗವೆ ಎನ್ನ
ರಕ್ಷಿಸು ಅನುದಿನ ಲಿಂಗವೆ
ಅಕ್ಷ[ಯ] ಪದ [ವೀವ] ಮಹಂತ ಮಲ್ಲೇಶ್ವರ
ಭಿಕ್ಷದ ಸೋಮೇಶಲಿಂಗವೆ ॥ ೧೧ ॥

❑ ❑

## ೧೭೮

## ರಾಗ : ನೀಲಾಂಬರಿ

ಮದಗಜಗಮನೆಯರೆಲ್ಲ ಪದಕೆರಗಿ ಸ್ತುತಿ ಮಾಡಿರೆ
ಹೃದಯದ [ಲಿ] ಧ್ಯಾನಿಸೆ ಫಲಪದವಿಯನೀವ
ಸದಯ ಸದ್ಗುರು ಪರಾತ್ಪರ[ನಾ]ಗಿ ಚರಿಸುವ ॥ ಪಲ್ಲ ॥

ರೂಪಿನಿಂದಿರುತಿಹನ ಸರ್ವಜೀವ ದಯಾಪರನಾಗಿಹನ
ತಾಪಸಜನಹೃದಯ ಸ್ಥಾಪನ ಜಗಜಾಲ
ಕಾಪಾಲಧರ ಪರಮಪಾವನಮೂರ್ತಿಯ ॥ ೧ ॥

ಧರ್ಮಾರ್ಥಿಕರ ಭಕ್ತರ ಕರ್ಮಪಾಶವ ಹರಿದ
ನಿರ್ಮಲ ಶಂಭುವ ಮರ್ಮಜ್ಞನೆಂದೆನಿಸಿ
ಮಹಾಮಹಿಮೆವಡೆದವನ ॥ ೨ ॥

ದೇಶಕಧಿಕವಾದಂಥ ಶೀಲದುರ್ಗದಿ
ವಾಸವಾಗಿರುತಿಹನ
ಶ್ರೀಷಡುಸ್ಥಲಾಧೀಶನಾದ ಮದ್ದಾನೀಶ
ಭಾಷೆಪಾಲಕದೇವ ಭವರೋಗವೈದ್ಯನ ॥ ೩ ॥

## ೧೭೯

ಮಂಗಲಂ ಮಂಗಲಂ ಭವಂತು ತೇ ಮಂಗಲಂ
ಮಂಗಲಂ ಮಾಂ ಪಾಲಯ ಮಂಗಲಂ ಮಂಗಲಂ ॥ ಪಲ್ಲ ॥

ಸುರಮುನಿಗಣಸುತ ಪರಮಪಾವನಕೃತ
ಹರಭಕ್ತ ಗಣರಿಗೆ ಕರುಣಿ ನೀ ಶಾಂತ
ವರ ಸದ್ಗುಣ ಧೃತ ಸದಯ ಸುಖಾಮೃತ
ಪರಿಪೂರ್ಣ ನಿಶ್ಚಲ ಪದವೀವ ಧಾತ ॥ ೧ ॥

ಕಾಷಾಯಾಂಬರ ಈಷಣತ್ರಯದೂರ
ಶೇಷಭೂಷಣ ಮಾಹೇಶ ಸರ್ವೇಶ
ಭೂಷಣ ಭಸಿತಾಕ್ಷ ಪ್ರಣವ ಸ್ವರೂಪನೆ
ಕೇಶವಾರ್ಚಿತ ಪರಮೇಶ ಪರಿತೋಷ ॥ ೨ ॥

ಪೊಡವಿಯೊಳ್ ಶೀಲದುರ್ಗಪುರವಾಸ ಶ್ರೀಗುರು
ಷಡುಸ್ಥಲಧೀಶ ಮದ್ದಾನೀಶ ಸಾಂಬ
ನಡಿಗಳಿಗೆರಗಿ ನಾ ಪಿಡಿವೆನಾರತಿಯನು
ಕೊಡು ವರಗಳ ನಿಮ್ಮ ಬೇಡುವೆನಭವ ॥ ೩ ॥

□ □

## ೧೮೦

ಶಿವನ ನೆನೆವನೆ ಅಜ್ಞಾನಿ ಪಾಪವ ಮಾಡಿ
ಭವಕ್ಕೆ ಸಿಲ್ಕುವನೆ ಸುಜ್ಞಾನಿ ॥ ಪಲ್ಲ ॥

ಪುಣ್ಯವ ಪಡೆವೊನೆ ಪಾಪಿ ಎರಡು
ಕಣ್ಣುಳ್ಳ ಚೆಲ್ವನೆ ಕುರುಡ ಕುರೂಪಿ
ಕಣ್ಣಿಲ್ಲದವನೆ ಸುರೂಪಿ ಮನ
ತಣ್ಣಗೆ ನುಡಿವನೆ ಹುಚ್ಚುಮುಂಗೋಪಿ ॥ ೧ ॥

ಮಾತ ಬಲ್ಲಾತನೆ ಮೂಕ ಬಹು
ನೀತಿ ಮಾರ್ಗದಲಿರುವನೆ ಬಹುಪೋಕ
ಜಾತಿಯ ನುಡಿವನೆ ಕೂಕ ರಣ
ಭೀತಿ ಗಂಜದೆ ನಿಲುವನೆ ಲಂಡಿಪಾಕ ॥ ೨ ॥

ಇಲ್ಲಯೆಂಬೋನೆ ಬಹುತ್ಯಾಗಿ ಕಾಮ
ವಿಲ್ಲದಿರುವನೆ ಹೆಣ್ಣುಗಳೊಳು ಭೋಗಿ
ಮಲ್ಲಿಕಾರ್ಜುನ ಭಕ್ತನಾಗಿ ಮುಕ್ತಿ
ವೊಲ್ಲೆನೆಂಬೋನೆ ಪರಮಾನಂದ ಯೋಗಿ ॥ ೩ ॥

೧೪೧

ಶಿವನು ಭಿಕ್ಷಕೆ ಬಂದ ನೀಡು ಬಾರೆ ತಂಗಿ
ಇವನಂಥ ಚೆಲುವರಿಲ್ಲ ನೋಡು ಬಾರೆ ॥ ಪಲ್ಲ ॥

ಒಂದು ಕೈಯಲಿ ಅಜನ ಕಪಾಲ ಕಾಣೆ ಬೆನ್ನ
ಹಿಂದೆ ಕಟ್ಟಿದ ತ್ರಿಶೂಲ ಕಾಣೆ
ನಂದಿಯಕೋಲು ಪತಾಕೆ ಕಾಣೆ ಮ
ತ್ತೊಂದು ಪಾದದಲ್ಲಿ ಒಂಟಿ ಜಂಗು ಕಾಣೆ ॥ ೧ ॥

ಅಲ್ಲಿಗಲ್ಲಿಗೆ ಮೃಗದ ಝುಲ್ಲಿ ಕಾಣೆ ಎದೆ
ತಲ್ಲಣಿಸುವ ಢಕ್ಕೆ ಪಾಶ ಕಾಣೆ
ಹುಲ್ಲೆಗಂಗಳ ಹುಸಿಯಲ್ಲ ಕಾಣೆ ಪಾದ
ದಲ್ಲಿ ಸುತ್ತಿರುವ ಗೆಜ್ಜೆಸರವು ಕಾಣೆ ॥ ೨ ॥

ಹೆಗಲಲ್ಲಿ ಮಾತಿನರಗಿಣಿಯು ಕಾಣೆ ಕೆ
ಮ್ಮುಗಿಲಂತೆ ಕಾವಿಯವಲ್ಲಿ ಕಾಣೆ

ನಗೆಮುಖದ ಮುಂಬಲ್ಲು ಚಂದ ಕಾಣೆ ಅರೆ
ತೆಗೆದ ವಿಭೂತಿ ಕಪ್ಪುಗೊರಳು ಕಾಣೆ ॥ ೩ ॥

ಹುಣ್ಣಿಮೆ ಚಂದ್ರಮ ಮುಡಿಯಲ್ಲಿ ಕಾಣೆ ಹೊಸ
ಹೆಣ್ಣು ಗಂಗಮ್ಮ ಜಡೆಯಲ್ಲಿ ಕಾಣೆ
ಕಣ್ಣು ಹತ್ತೈದು ಕೆಂಡಗಣ್ಣು ಕಾಣೆ ಸು
ವರ್ಣಮೆಟ್ಟಿರ್ದ ಸ್ತ್ರೀರತ್ನ ಕಾಣೆ ॥ ೪ ॥

ಮೈಯ್ಯೆಲ್ಲ ಹಾವಿನ ಪುತ್ತ ಕಾಣೆ ಬಲ
ಗೈಯ್ಯಲ್ಲಿ ನಾಗಬೆತ್ತ ಕಾಣೆ
ವೈಯ್ಯಾರಿ ಮೂರು ಲೋಕದಕರ್ತ ಕಾಣೆ
ತೈಯಿತ್ತೈಯೆಂಬೊಂದರ್ತಿ ಕಾಣೆ ॥ ೫ ॥

ಅಬ್ಬರಿಸುವ ರುಂಡಮಾಲೆ ಕಾಣೆ
ಹೆಬ್ಬುಲಿ ಚರ್ಮದ ಸಿದ್ಧ ಕಾಣೆ
ಒಬ್ಬಳೆ ನೋಡಲಂಜುವೆ ಕಾಣೆ ದೊಡ್ಡ
ಹಬ್ಬ ಊರೊಳಗೊಂದರ್ತಿ ಕಾಣೆ ॥ ೬ ॥

ಕಟ್ಟಿದಲಿಂಗ ಉರದಲ್ಲಿ ಕಾಣೆ ಅತ
ಮೆಟ್ಟಿದ ಪಾವುಗೆ ಪವಳ ಕಾಣೆ
ಬಿಟ್ಟ ಕೆಂಜೆಡೆ ಕೆಮ್ಮೀಸೆ ಕಾಣೆ ಅವರು
ಕೊಟ್ಟ ನಂಬುಗೆ ಸ್ಥಿರವಂತೆ ಕಾಣೆ ॥ ೭ ॥

ಕಟ್ಟಾಣಿಮುತ್ತಿನ ಕಂಥೆ ಕಾಣೆ ಅಳ
ವಟ್ಟ ಜವ್ವನ ಮದನರೂಪ ಕಾಣೆ
ನೆಟ್ಟನೆ ಪರಶಿವನಂತೆ ಕಾಣೆ ಅತ
ಪಟ್ಟದರಸು ತಾನಂತೆ ಕಾಣೆ ॥ ೮ ॥

ತೊಡರು ಪೆಂಡೆಯ ಸರಪಣಿಯು ಕಾಣೆ ಮೇಲೆ
ಹಿಡಿವಸತ್ತಿಗೆ ಮುನ್ನೂರು ಕಾಣೆ
ನಡೆವ ಪ್ರಮಥರ ಪರಿವಾರ ಕಾಣೆ ಮುಂದೆ
ಪೊಡೆವ ರಕಹುಡೆ ಜಾಗಟೆಯು ಕಾಣೆ ॥ ೯ ॥

ನಕ್ಷತ್ರ ಹೂವಿನಮಾಲೆ ಕಾಣೆಂದ
ಕಕ್ಷದೊಳಗೆ ಜೋಳಿಗೆಯು ಕಾಣೆ
ಭಿಕ್ಷಾಟಣಕೆ ಬಂದರಂತೆ ಕಾಣೆ ರು
ದ್ರಾಕ್ಷಿಸರವು ಕೊರಳಲ್ಲಿ ಕಾಣೆ ॥ ೧೦ ॥

ಉಗ್ಗಡಿಸುವ ರಣಗಾಳೆ ಕಾಣೆ ನೆಲ
ತಗ್ಗುವ ಗತಿಗೆ ಚಪ್ಪರ ಕಾಣೆ
ಕಗ್ಗದ ಕಲಿ ವೀರಭದ್ರನಂತೆ ಕಾಣೆ ಮೂರು
ದುರ್ಗವ ಗೆಲಿದ ಮಾಹೇಶ ಕಾಣೆ ॥ ೧೧ ॥

ಬಾಗಿದಹುಬ್ಬು ಸಿಂಗಾಡಿ ಕಾಣೆ ಅತ
ದೂಗಿನೋಡುವ ನೋಟ ಚಂದ ಕಾಣೆ
ಸೋಗೆಗರಿಯ ನವಿಲದೊಂದೆ ಕಾಣೆ ಮೈ
ಬಾಗಿನಡೆವದೊಂದರ್ತಿ ಕಾಣೆ ॥ ೧೨ ॥

ಆದಿಮಲ್ಲೇಶ್ವರನಂತೆ ಕಾಣೆ ನಡು
ಬೀದಿಯೊಳಗೆ ಬರುವ ಚಂದ ಕಾಣೆ
ಪಾದವ ತೊಳೆಯಬೇಕಂತೆ ಕಾಣೆ ಅಷ್ಟ
ಗಂಧವ ಪೂಸ ಬೇಕಂತೆ ಕಾಣೆ ॥ ೧೩ ॥

ಮನೆ ಮನೆ ಮುಂದೆ ಧಿಮ್ಮಿಸಾಲೆ ಕಾಣೆ ಈತಗೆ
ಹಣ ಹೊನ್ನ ಕೊಟ್ಟರೆ ಒಲ್ಲನಂತೆ ಕಾಣೆ
ತನಿವಣ್ಣ ನೀಡಬೇಕಂತೆ ಕಾಣೆ ಅವರು
ಮನಸು ಬಿಟ್ಟಿರಲಾರರಂತೆ ಕಾಣೆ ॥ ೧೪ ॥

ನೋಡಬಂದವರೊಂದು ಹಿಂಡು ಕಾಣೆ ಹಸ್ತ[ವ]
ನೀಡಿ ಪಾದವ ತೊಳೆಯಬೇಕಂತೆ ಕಾಣೆ
ನಾಡೆ ಹರಕೆಯ ಕೊಡುವರಂತೆ ಕಾಣೆ ಮಾತ
ನಾಡಿಸಿ ನಗಿಸುವರಂತೆ ಕಾಣೆ ॥ ೧೫ ॥

ತೋರ ಮಾದಲದಹಣ್ಣಿನಂತೆ ಕಾಣೆ ಫಲ
ಹಾರವ ನೀಡಬೇಕಂತೆ ಕಾಣೆ

ಆರತಿ ಎತ್ತಬೇಕಂತೆ ಕಾಣೆ ಉಪ
ಚಾರವ ಮಾಡಬೇಕಂತೆ ಕಾಣೆ ॥ ೧೬ ॥

ವರ ಹಿರಿ ಮುರಿಗೆವೊಡೆಯರಂತೆ ಕಾಣೆ ಅವರು
ಕರೆದು ಮೋಕ್ಷವ ಕೊಡುವರಂತೆ ಕಾಣೆ
ಕರುಣಾಸಾಗರ ಮಹಲಿಂಗ ಕಾಣೆ ನಮ್ಮ
ಗುರುವು ಮಲ್ಲೇಶ್ವರನಂತೆ ಕಾಣೆ ॥ ೧೭ ॥

❑ ❑

## ೧೮೨

ಎಂತು ಮರೆಯಲ್ಲಿ ಶಿವ ಶಿವ ಶ್ರೀಮನ್ಮ
ಹಂತಖಾನೇಂದ್ರನಿರವ ನಾನು
ಎಂತು ಮರೆಯಲಿ ಶಿವ ಶಿವ ॥ ಪಲ್ಲ ॥

ಕಂದ ಬಾರೆಂದು ಕರದು ಮುದವಿಡಿದು
ಛಂದದಿಂ ಪೂಜೆ ಮಾಡಿ ನೋಡಿ
ಕಂದುಗೊರಳನ ಗಣರಿಗೆ ಬಹುವಿಧದಾ
ನಂದ ಭೋಜನ ನೀಡುವ ಛಲವ ॥ ೧ ॥

ಹಿಂಡುಮನ್ನೆಯರ ಗಂಡ ಕಲಹ ಪ್ರ
ಚಂಡ ಎರಮಲೆ ಹೆಬ್ಬುಲಿಯೆಂದು
ಚಂಡಕೀರ್ತಿಗಳೀಗಲು ಘೋಷಿಪರು
ಪುಂಡ ವೀರಾಧಿವೀರ ವಜೀರ ॥ ೨ ॥

ಕೊಟ್ಟಭಾಷೆಗೆ ತಪ್ಪುವ ರಾಜರೆದೆ
ಮೆಟ್ಟನಿಲ್ಲುವುದಾರ ಧೀರ
ಕೆಟ್ಟ ಅರಿಭೂಪ ಬಲವ ಕಡಿದು ಸದೆ
ಗುಟ್ಟಿ ಅನತರ ಕಾಯ್ವ ಗೆಲುವ ॥ ೩ ॥

ಭಸಿತ ರುದ್ರಾಕ್ಷೆಗಳನು ಹಸನಾಗಿ
ಒಸೆದಂಗದಲಿ ಧರಿಸಿ ಸ್ಮರಿಸಿ
ಎಸೆವ ಪಂಚಾಕ್ಷರಿಯನು ನುಡಿನುಡಿಗೆ
ಪಸರಿಸುವ ರಾಜಯೋಗಿ ಭೋಗಿ ॥ ೪ ॥

ಪರಮಗುರುವೆಂದೆನಿಸುವ ಪರತರ ಪ
ಬೀರ ಪರಬ್ರಹ್ಮದಲ್ಲಿ ತನುವ ಬೆರದು
ಬೇರಿಲ್ಲದಂತೆ ಉರಿಯುಂಡ
ಕರ್ಪುರದ ತೆರದಿ ಖಾನ ಧ್ಯಾನ ॥ ೫ ॥

 

## ೧೮೩

ಮಂಗಳ ಮುದ್ವೀರದೇವಗೆ ಜಯ
ಮಂಗಳ ವಿಲಸ[ತ್] ಸಮ್ಮೋದಪ್ರದನಿಗೆ ॥ ಪಲ್ಲ ॥

ದ್ವಿಜರಾಜ ಜೂಟಗೆ ದ್ವಿಜರಾಜ ವದನಗೆ
ಗಜತನುಜಾರಿಗೆ ಜಯನಿಗೆ
ಗಜಮುಖಜನಕಗೆ ಗಜಕುಂಭ ಕುಚೆಯಳ್ಗೆ
ಭುಜಗ ಭೂಷಣಗೆ ಭುಜಗವೇಣಿಗೆ ॥ ೧ ॥

ಗಿರಿರಾಜಮಿತ್ರಗೆ ಗಿರಿರಾಜ ಪುತ್ರಿಗೆ
ಗಿರಿಕೋದಂಡಗೆ ಗಿರಿವರ ಶ್ರೋಣಿಗೆ
ಹರಿಣಕಾಲಬದ್ಧಗೆ ಹರಿಣಾಯತಾಕ್ಷಿಗೆ
ಪರಮ ಪುರುಷಗೆ ಪರಾಶಕ್ತಿಗೆ ॥ ೨ ॥

ಕಾಮೇಷ್ಟದಗೆ ಸುರರಮೌಳಿ ವರದಗೆ
ಶಮಗಾಳಿಗೆ (?) ಘನ ಶಾಮಾಂಗಿಗೆ
ಯೋಮಕೇಶಗೆ ಯಮನಿಭತನು ಮಧ್ಯಗೆ
ಕಾಮಹರಗೆ ಕಾಮಪಾಲಿನಿಗೆ
ಮಂಗಳ ಮುದ್ವೀರದೇವಗೆ ॥ ೩ ॥

 

## ೧೮೪

ಪಾಲಿತ ಸುರಮುನಿ ಜಾಲ ಪರಾಕು
ನೀಲಕಂಧರ ಕಾಲಕಾಲ ಪರಾಕು
ಮೂಲ ಪಂಚಾಕ್ಷರಿ ಲೋಲ ಪರಾಕು
ಭೀಲ ಭೀಲ ಭೂಷಿತ ವ್ಯಾಲ ಶೀಲ ಪರಾಕೆಂದು
ನೀಲಾಳಕಿಯರು ಹಸೆಗೆ ಕರೆದಾರು ॥ ಪಲ್ಲ ॥

ಪರತರ ಪರಮಗೌರೀಶ ಪರಾಕು
ಶರಣ ಹೃನ್ನಳಿನದೀಶ ಪರಾಕು
ಮರಣಾದಿರಹಿತ ಸರ್ವೇಶ ಪರಾಕು
ತರಣಿ ಶಾಂತ ಶರೀರ ಪರಾಕೆಂದು
ಹರಿಣಾಕ್ಷಿಯರು ಹಸೆಗೆ ಕರೆದಾರು ॥ ೧ ॥

ಕಮಲಸಂಭವ ನುತಿಮೋದ ಪರಾಕು
ಕಮಲಸಖವಾಹ ನುತವೇದ ಪರಾಕು
ಕಮಲವಾಹ ನುತವಿನೋದ ಪರಾಕು
ಕಮಲ ವಿರಾಜಿತ ಪಾದ ಪರಾಕೆಂದು
ಕಮಲಾಕ್ಷಿಯರು ಹಸೆಗೆ ಕರೆದಾರು ॥ ೨ ॥

ಕರುಣರಸಾಂಚಿತಾಪಾಂಗ ಪರಾಕು
ಪರಮತಭೇಕ ಭುಜಂಗ ಪರಾಕು
ಮುರಿಗೇಂದ್ರ ಕರಕಂಜತುಂಗ ಪರಾಕು
ಗುರುವರ ಮುದ್ವೀರಲಿಂಗ ಪರಾಕೆಂದು
ತರಳಾಕ್ಷಿಯರು ಹಸೆಗೆ ಕರೆದಾರು ಸೋಬನವೆ ॥ ೩ ॥

❑ ❑

## ೧೮೫

ಏನೆಂದು ತಿಳಿಯಲಮ್ಮ ಸದ್ಗುರುರಾಯ ಬಾರ–
ದೇತಕಗಲಿ ಪೋದ ನಾನು ನೀನೆನ್ನದೆ ಜ್ಞಾನಮಾರ್ಗವ ತೋರಿ
ತಾನೇಕೆ ಮುನಿದು ಪೋದ ಏನ್ಹೇಳಲಿ ॥ ಪಲ್ಲ ॥

ಸಾಧು ಸಜ್ಜನರ ಸಂಗ ಪೇಳುವ ಕೇಳುವದೀಕ್ಷಣದಿ
ನೀರೊಳು ತಾವರೆ ಉರಿವೈರಲು ಕಂಡು
ಸಾರೆವೈದರೆ ಮುಂದೆ ಪೇಳುವದೊಂದೆ ॥ ೧ ॥

ಸತ್ಯವ [ನುಡಿಯ] ಬೇಕು ಜಂಗಮದಲ್ಲಿ
ಭಕ್ತಿಯೊಳ್ಬಜಿಸಬೇಕು
ಸತ್ಯವಂತರ ಸಂಗ ಸಕಲ ವಿವೇಕದಿ
ಪ್ರತ್ಯೇಕವಾದಿತಲ್ಲ ಶಿವನೆ ಬಲ್ಲ ॥ ೨ ॥

ನರಮಾನವರ ಕೈಯ್ಯಲಿ ನಮ್ಮನ್ನು ಮುಂದೆ
ಬಿಡದೆ ಸಿಲ್ಕಿಸಬೇಡವೊ ಗುರುರಾಯ
ದೊರೆಗಳವೊಲಿದು ಪಾಲಿಸು ಕಂಡ್ಯ
ಗುರುವೆ ಪಾಲಿಸು ಮುದ್ವೀರಾತ್ಮಕ ಚೆನ್ನವೀರ ॥ ೩ ॥

 

## ೧೮೩

ಯೋಗಿ ಬಂದ ನೋಡೆ ಪರಮ ಶಿವಯೋಗಿ ಬಂದ ಕಾಣೆ
ರಾಗದಿ ಚನ್ನ ಕಿನ್ನರಿ ನುಡಿಸುತ
ಸಾಗಿರಲೇಕ ಭೈರವಸಿದ್ಧನೆನುತಲಿ ॥ ಪಲ್ಲ ॥

ಮೂಲಪೀಠವನೊಲಿದೊಲಿದು ಷೋಡಶಾಚಾರಧಾರಿಗಳ
ಸಾಲುಗೊಳಿಸಿ ಸುಸುಮ್ನದೊಳಹಿನೊಳು
ಕೀಲಿಸಿ ದೃಷ್ಟಿಯುಗಳವೆಂಬಲಾಬುವ ಯೋಗಿ ॥ ೧ ॥

ಮೂರು ತಂತಿಗಳ ಕುಂಭಕವೆಂಬ ಸಾರ ಸೂಲದ ಕಟ್ಟಿಗೆ
ಸೇರಿಸುತಾಗ ಸಾಕಾಣರೆಡೆಗಳ ನಾರೈದು
ಪ್ರಣವನಾದದ ಸುತಿಗೊಡುತ ॥ ೨ ॥

ಕರಣಾಂಗುಲಿಗಳನಿಟ್ಟು ರಾಜಿಸುತಿಹ ವರ
ಶಿರಪುರ ಮಧ್ಯದಿ ಮೆರವ ಸುಧಾರಸ ಭಿಕ್ಷವ ಗ್ರಹಿಸುತ
ಗುರು ಮುದ್ವೀರಾತ್ಮಕ ಚೆನ್ನವೀರ ಜೋಗಿ ಬಂದ ನೋಡೆ ॥ ೩ ॥

 

## ೧೮೭

ನಿಮ್ಮಯ ಕರ ಚರಣಕಮಲವೆಂಬುವ
ಬ್ರಹ್ಮಜ್ಞಾನದ ಕನಕರತ್ನದ್ದೂವನುತಂದು
ನಮ್ಮ ಸುಮಸ್ತಕ ಲಿಂಗದ ಪೀಠದಿ
ಸುಮ್ಮನೆ ಧರಿಧರಿಸೋಗಿರಯ್ಯ ಬಹುಮಾತೇನು ॥ ಪಲ್ಲ ॥

ಲಿಂಗವೆ ತಾನಾದ್ಯೋಗಿಯ
ಇಂಗಿತವನು ತಿಳಿದು ಸರ್ವಾಂಗುಪಚಾರವ
ಹಿಂಗದೆ ಮಾಡುವ ಆಪ್ತರ
ಸಂಗತೊಂದೆರಡು ಮಾತು ಬಹುಮಾತಿಲ್ಲ ॥ ೧ ॥

ಬಹುಮಂದಿಯು ಬಂದಾತನ
ಬಹು ಮಾತನಾಡಿಸಲು ಗಿರಿಜೆ ಯೋಗೀಶ್ವರನ
ಮಹಲಿಂಗದ ಸುಖ ತಪ್ಪದು
ಮಹದೋಷ ಬಂದಹ್ಹಾಂಗ ನೋಡ್ಹೋಗುವದು ॥ ೨ ॥

ನನ್ನ ಶಿವಾಂಗದ ಚೆನ್ನೂಮಲಾದ್ರಿಯ
ಉನ್ನತ ಶಿವಜ್ಞಾನ ಚೆನ್ನ ಬೃಹನ್ಮಠದೀ
ಚೆನ್ನಾಗಿರುವನು ಮುರಿಗಾಗರು ತಾ
ಇನ್ನೆಲ್ಲಿಯ ದುರ್ಗವಣ್ಣ ಹುಸಿ ದುರ್ಗಣ್ಣ ॥ ೩ ॥

ಖಂಡಿತವಾದರೆ ಇದ್ದಲ್ಲಿಯಿರುವನ–
ಖಂಡಿತ ಗುರುವು ತಾನು ಏಕಿಹನಲ್ಲಿ
ಮಂಡಿಸಿದಂ ಚಿದಬೃಹನ್ಮಠದೆನ್ನ
ಖಡ್ಗಿಲ್ಲದ ಒರೆಯಂತೆ ತಾನೆ ಬರೆ ಮಠವಿಹುದು ॥ ೪ ॥

ವರ ಕನಕಾಚಲ ಬುಡದ ಶಿವಪುತ್ರಗೆ
ಅರುಣಾಚಲಬುಡದ ರಾಮಾಪತಿಲಿಂಗೋದ್ಭವ
ಬರೆಯಲಿ ಬಹುದೆ ಹಿರೆತ್ರೈಜಗದ್ಗುರು
ಹರಹರ ಶ್ರೀ ಸ್ವಯಂಭು ಲಿಂಗೋದ್ಭವಗೆ ॥ ೫ ॥

❑ ❑

೧೮೮

ಹಾರವನು ಧರಿಸಿರೆ ಹರದಿಯರು ನೆರದು
ಮೂರುಲೋಕವನಾಳ್ವ ಮುಕ್ತಿದಾಯಕಗೆ ॥ ಪಲ್ಲ ॥

ಸರಸಿಜ ವದನೆಯರು ಸರ್ವರು ನೆರದು
ಥರಥರದ ಮೌಕ್ತಿಕ ಹರಿವಾಣ ಪಿಡಿದು

ಪರಮ ಶ್ರೀಗುರುಮೂರ್ತಿ ಧ್ಯಾನವನು ಬಲಿದು
ಧರಿಸಿ ಮೇನಕೆಯ ಆತ್ಮಜೆಯ ವರಗೊಲಿದು ॥ ೧ ॥

ಹಸ್ತಕಂಕಣ ಚೂಡೆ ಹರಡಿ ಕೈ ಕಟ್ಟು
ಮಸ್ತಕದಿ ಮೊಲ್ಲೆ ಮಲ್ಲಿಗೆ ಜಾಜಿನಿಟ್ಟು
ವಿಸ್ತರದಿ ಸೀರೆಗಳ ವಿನಯದಿಂದುಟ್ಟು
ಸ್ವಸ್ಥದಿಂ ಶಿವಗೆ ತನುಮನ ಧನವ ಕೊಟ್ಟು ॥ ೨ ॥

ಹರಗೆ ಶಂಕರಗೆ ಪುರಹರಗೆ ಪರಶಿವಗೆ
ಹರುಷದಿಂ ಗಿರಿಜೆ ಗುಹ ಗಣಪ ವೀರನಿಗೆ
ಪರಿಪರಿಯ ಪುಷ್ಪದಾಭರಣಗಳ ಧರಿಸಿ
ಕರುಣಿ ಶ್ರೀ ಗುರು ಮುರಿಗಾ ಗುರುಬಸವಯತಿವರಗೆ ॥ ೩ ॥

❑ ❑

೧೮೯

ಮುರಿಗಾಸ್ವಾಮಿಯೆಂಬುವರ್‍ಯಾರೆ ಸತಿಯರು ನೀವು ತೋರೆ
ಮುರಿಗಾಸ್ವಾಮಿಯೆಂಬುವರ್‍ಯಾರೆ ॥ ಪಲ್ಲ ॥

ಅಂದಣದೊಳು ಬಹು ಚಂದದಿ ಮೂರ್ತಿಸೆ
ಸುಂದರಗಾಂಬುವರೀಗೆ
ನೋಡು ತಡಮಾಡಬೇಡ ಬೇಗೆ
ಮುರಿಗಾಸ್ವಾಮಿಯೆಂಬುವರ್‍ಯಾರೆ ॥ ೧ ॥

ಮತ್ತೊಬ್ಬ ಕಾಮಿನಿ ಅತ್ಯಂತ ಹರುಷದಿ
ಚಿಂತಿಷ್ಟ ಕಾಣುತ ದೇಹಸ್ಮೃತಿದಪ್ಪಿಹೋಗೆ
ಮುರಿಗಾಸ್ವಾಮಿಯೆಂಬುವರ್‍ಯಾರೆ ॥ ೨ ॥

ಪ್ರಾಯದ ನೀರೇರು ಅವಸರದಲಿ
ಬಾಯ ತೆರದುಕೊಂಡು ನೋಡೆ ಇಂಥ ಭ್ರಾಂತಿಯ ಕೂಡೆ
ಮುರಿಗಾಸ್ವಾಮಿಯೆಂಬುವರ್‍ಯಾರೆ ॥ ೩ ॥

ಹಸಿವು ನೀರಡಿಕೆ ನಿದ್ರೆಯ ಬಿಟ್ಟು ನಾರಿಯ–
ರೊಸೆದು ಬರುವರಲ್ಲೆ ಕಾಂತೆ ಕೇಳೆ ಸದ್ಗುಣವಂತೆ
ಮುರಿಗಾಸ್ವಾಮಿಯೆಂಬುವರ್‍ಯಾರೆ ॥ ೪ ॥

ಧರೆಯೊಳು ಚಿನ್ಮೂಲಗಿರಿಯರಸರು ಮಹ
ಗುರು ಮುರಿಗೇಂದ್ರರು ರನ್ನೆ ರೂಪದಲಿ ಸಂಪನ್ನೆ
ಮುರಿಗಾಸ್ವಾಮಿಯೆಂಬುವರ್‍ಯಾರೆ ॥ ೫ ॥

❑ ❑

೧೪೦

ಚಂದವಾಯಿತು ಮುರಿಗೆ ಕರಿಬಸವರಾಜೇಂದ್ರ
ಬಂದ ಪ್ರಸ್ಥವು ಭಕ್ತಜನ ರಕ್ಷಿಸಲು ॥ ಪಲ್ಲ ॥

ಭಕ್ತವತ್ಸಲ ಮುರಿಗೆ ಭವರೋಗಹರ ಮುರಿಗೆ
ನಿತ್ಯ ನಿರ್ಮಲ ಮುರಿಗೆ ನಿಜದ ಮುರಿಗೆ ಸ–
ಚ್ಚಿತಾನಂದದಲಿ ತೊಳಗಿ ಬೆಳಗುವ ಮುರಿಗೆ
ಮಚ್ಚರಿಪರೆದೆಯ ಮರ್ದನ ನಿಮ್ಮ ಮುರಿಗೆ ॥ ೧ ॥

ಭವದಬಳ್ಳಿಯನೆಲ್ಲ ಹರಿಯಕುಟ್ಟುವ ಮುರಿಗೆ
ಶಿವನೊಳಗೆಕಾರ್ಥದಲಿ ಬೆರದ ಮುರಿಗೆ
ಕವಿ ಗಮಕಿ ವಾದಿ ವಾಗ್ಮಿಕರು ಕಾಣದ ಮುರಿಗೆ
ಭುವನತ್ರಯದದಧಿಪತಿಯು ಶಿವ ನಿಮ್ಮ ಮುರಿಗೆ ॥ ೨ ॥

ಅಷ್ಟದಿಕ್ಕಿನೊಳಧಿಕ ಶ್ರೇಷ್ಠನಾದಾಚಾರ್ಯ
ದೃಷ್ಟ ಮೂರುತಿಯು ಕರಿಬಸವರಾಜೇಂದ್ರ
ಮುಟ್ಟಿ ನುತಿಸಿದನು ಕವಿ ಶಿವಲಿಂಗದೇವರಿಗೆ
ಇಷ್ಟಾರ್ಥಸಿದ್ಧಿಗಳ ಕೊಟ್ಟು ರ[ಕ್ಷಿಸುವ ಮುರಿಗೆ] ॥ ೩ ॥

❑ ❑

೧೯೧

ಚೆಲುವ ಕೋವಿದ ರನ್ನ ನಿನ್ನ ನಂಬಿ
ದೊಲವಿಂದೆ ಸಲಹುವದೆನ್ನ
ಛಲದಂತೆ ಮಾಯೆಯ ಮುನ್ನ ಭಂಗ
ಗೊಳಿಸಿದ ಪ್ರಭುವೆ ಪ್ರಸನ್ನ ॥ ಪಲ್ಲ ॥

ರತಿಯ ರಮಣನಂಗಲೋಪ ಗೋಪ.
ಸುತನ ಜಾಡ್ಯೆಯ ಗೆಲಲಾಪ
ಮತಿವಂತ ಮಧುರ ಸಲ್ಲಾಪ ಸೈಪ
ಪ್ರತಿಪಾಲಸೆನಗೆ ಚಿದ್ರೂಪ ॥ ೧ ॥

ನಳಿನನಂದನ ನುತಿಪಾತ್ರ ಪಾದ
ಜಲಜ ನಿರ್ಮಲ ನಿಜಗಾತ್ರ
ಸುಲಲಿತ ಗುಣಮಣಿ ಸೂತ್ರ ಕಾಯೊ
ಕಲುಷ ತಿಮಿರ ಭಾನುನೇತ್ರ ॥ ೨ ॥

ಮುರಿಗೆ ಕರಿಬಸವೇಶ ಈಶ
ಪರತರ ಮಹಿಮಘನಾಶ
ಗುರುವೆ ರಕ್ಷಿಪುದು ಮಹೇಶ ಹೇಮ
ಗಿರಿಯದೇವನ ಗರ್ಭವಾಸ ॥ ೩ ॥

 

೧೯೨

ರಾಗ : ಕಲ್ಯಾಣಿ

ಎಂತು ನುತಿಸುವೆ ನಿನ್ನ ಯೋಗಿವರಿಯ
ಚಿಂತಿತಾರ್ಥನೆ ಮುರಿಗೆ ಗುರುಸಿದ್ಧದೇವ ॥ ಪಲ್ಲ ॥

ಕಾಮಮುಖ ಷಡ್ವರ್ಗ ತಿಮಿರ ಮಾರ್ತಾಂಡನೆ[ಂಬೆ]ನೆ
ಕಾಮಿನಿ ಕುವಲಯಕೆ ಮಿತ್ರನಾದೆ
ಸೋಮನಂದದಿ ಶಾಂತನೆಂಬೆನೆ ಬುಧವದನ
ತಾಮರಸಗಳ್ಗೆ ಉಲ್ಲಾಸಕರನಾದೆ ॥ ೧ ॥

ಪರವಾದಿ ಮತ್ತಗಜ ಮೃಗರಾಜನೆಂಬುದಕೆ
ಶರಭಾವತಾರ ಸ್ವರೂಪನಾದೆ
ಪರಮಪಾವನನಂತೆ ಪರಿಶುದ್ಧನೆಂಬೆನೆ
ಶರಣಾಗತರ್ಗೆ ಕರುಣಾಂಬುನಿಧಿಯಾದೆ ॥ ೨ ॥

ಮೇದಿನಿಯೊಳು ನೀನು ಕಲ್ಪತರುವೆಂಬೆನೆ
ಭೇದಮತಗೆ ಜಯವ ಕೊಡುವನಲ್ಲ
ಆದರದಿಂದೆನ್ನ ಅನುದಿನವು ರಕ್ಷಿಸೈ
ನಾದರೂಪನೆ ಮುರಿಗೆ ಗುರುಸಿದ್ಧದೇವ ॥ ೩ ॥

೧೯೩

ರಾಗ : ಆಹಿರಿ

ಪೊಡವಿಯೊಳಗೆಣೆಗಾಣೆ ನಿನಗೆ ಚೆಲ್ವ ಯಿ–
ರ್ಮಡಿ ಮುರಿಗೆ ಗುರುಸಿದ್ಧ ತಾಪಸವರೇಣ್ಯ ॥ ಪಲ್ಲ ॥

ಭೇದವಾದಿಸ್ತೋಮ ಭೂಮಿಧರ ಸುತ್ರಾಮ
ಬೋಧವಾದಿಗಣಕಾಂತಾರ ಭೇದ ಕುಠಾರ
ಬೋದವಾದಿವ್ರಾತ ಜಲಧಿ ಕಲಶೋದ್ಭೂತ
ಭೇದವಾದಿ ಮತ್ತಗಜೇಂದ್ರ ಕುಂಭ ಸಂ–
ಭೇದನ ವಿಚಕ್ಷಣ ಮೃಗೇಂದ್ರ ಗುಣಸಾಂದ್ರ ॥ ೧ ॥

ಸಕಲವಾದಿ ವಿತಾನ ತಿಮಿರ ಪರಿಹರಣಿನ
ಸಕಲವಾದಿಂದ್ರ ಘನನಿಕರ ಪಾಟನಪವನ
ಸಕಲವಾದಿ ವ್ಯಾಳನಿವಹ ಖಗ ಶಾರ್ದೂಲ
ಸಕಲವಾದೀಶೋತ್ತಮಾಂಗ ಸಂಸ್ಫುರ
ನ್ಮಕುಟ ಕೀಲಿತ ರತ್ನರಂಜಿತ ಪದಾಬ್ಜ ॥ ೨ ॥

ಪರವಾದಿ ಮುಖಕಮಲಸ್ತೋಮ ಶಿಕ್ಷಿತ ಕಾಮ
ಪರವಾದಿ ಪಕ್ಷಿಕುಲ ಸೇನ (ಶ್ಯೇನ ?) ರಕ್ಷಿತ ದೀನ
ಪರವಾದಿ ಕೇಸರಕಲಾಪ ಶರಭಸುರೂಪ
ಪರವಾದಿ ಹೃದಯ ದೃಢಶೂಲ ಭಳಿ[ರೆ]
ಮುರಿಗೆ ಗುರುಸಿದ್ಧೇಂದ್ರ ಮುನಿವಂಶಚಂದ್ರ ॥ ೩ ॥

□ □

೧೯೪

ಬೆಳಗಿರೆ ಆರತಿಯ ಸಖಿಯರು
ಬೆಳಗಿರೆ ಆರತಿಯ ಆರತಿ
ಬೆಳಗಿರೆ ಮೂಜಗದೊಡೆಯಗೆ ಮೂ
ರುಲೋಚನವನುಳ್ಳ ಮುರಿಗೆಯದೇವನಿಗೆ ॥ ಪಲ್ಲ ॥

ಭಾಮಿನಿ ಪೊತ್ತ ಭಕ್ತವತ್ಸಲ ಪರಾಕು
ಭಾವಾತೀತನೆ ಭವರೋಗವೈದ್ಯ ಪರಾಕು
ಭಾ[ವ]ಜನ ಸಂಹಾರ ಪರಾಕು
ಭಾವಜರಿಪು ವಂದ್ಯ ಪಾದ ಪರಾಕೆಂದು
ಬಾವನ್ನಗಂಧಿಯ[ರು] ಬೆಳಗಿರೆ ಆರತಿಯ ॥ ೧ ॥

ಕಮಲವೈರಿಯ ಕರನೈಯಿ xx
ಕಮಲಜ ವಂದಿತ ಪಾದ ಪರಾಕು
ಕಮಲರಿಪು ಕರಿಕಂಠ ಪರಾಕು
ಕಮ[ಲಜ ಸಖ] ವಿಮಲ ಪರಾಕೆಂದು
ಕಮಲಗಂಧಿಯರು ಬೆಳಗಿರೆ ಆರತಿಯ ॥ ೨ ॥

ನಾಗ [ಕುಂಡಲ] ಕರ್ಣಹಾರ ಪರಾಕು
ನಾಗಶಯನನ ಸುತನ ಸಂಹಾರ ಪರಾಕು
ನಾಗಸೂರನ ಚರ್ಮಾಂಬರನೆ ಪರಾಕು
ನಾಗಾರಿ ಇನ ವಹ್ನಿ ನಯನ ಪರಾಕೆಂದು
ನಾಗಾರಿಮುಖಿಯರು ಬೆಳಗಿರೆ ಆರತಿಯ ॥ ೩ ॥

ಪಂಕಜಸುತ ಶಿರ ಕಪ್ಪ ಪರಾಕು
ಪಂಕಜನಾಭ ಸು ಭೀಕರ ಶೂಲ ಪರಾಕು
ಪಂಕಜವೈರಿಯ
ಪಂಕಜಸಖಸುತ ಘನ ಪವನ xxx ಪರಾಕೆಂದು
ಪಂಕಜವಕ್ತ್ರೆಯರು ಬೆಳಗಿರೆ ಆರತಿಯ ॥ ೪ ॥

ಜಂಗಮ ಜಗದ್ವಂದ್ಯ ಪರಾಕು
ಗಂಗೆಯಧರನೆ ಘನಮಹಿಮ ಪರಾಕು

ಲಿಂಗವಂತರ ಸಂಗ ಪ್ರಿಯ ಪರಾಕು
ಮಂಗಳಮಯವಿಷ್ಟಲಿಂಗ ಪರಾಕೆಂದು
ಮಂಗಳಮುಖಿಯರು ಬೆಳಗಿರಾರತಿಯ ॥ ೫ ॥



## ೧೯೫

ಈತನೆ ತಂಗಿ ಈತನೆ ದೇವರದೇವ
ಈತನೆ ತಂಗಿ ಈತನೆ ಪರಮಪ್ರಖ್ಯಾತಮೂರ್ತಿ
ನೀತಿಯನರುಪಿದ ಕೀರ್ತಿ [ವುಳ್ಳ ರಾಯತಾನೀತನೆ ತಂಗಿ ಈತನೆ...]
ಮಂಗಳಮಯ ಮಹಿಮನೆ ತ
ದಂಗ ಮೃಡಾಂಗ ಸಂಗೀತಲೋಲನೆ
ಸಂಗನಶರಣರ ಅಂಗೈಯೊಳಿರುವನೆ
ರಂಗನ ನಯನ ಪಾದಾಂಘ್ರಿಯೊಳ್ ನಮಿಸಿ ಕೊಂ
ಡೀತನೆ ತಂಗಿ ಈತನೆ.......... ॥ ೧ ॥

ಎಲ್ಲ ದೇವರದೇವನೆ ಸಲ್ಲೀಲೆಯಿಂ–
ದಲ್ಲಮಪ್ರಭುರಾಯನೆ
ಬಲ್ಲಿದ ಮಾಯೆಯ ತಲ್ಲಣಗೊಳಿಸಿದ
ಅಲ್ಲಿ ಮದ್ದಳೆ ಬಿಟ್ಟು ನಿಲ್ಲದೆ ಪೋದಾತ–
ನೀತನೆ ತಂಗಿ ಈತನೆ.......... ॥ ೨ ॥

ಅಜನ ಕಪಾಲ ಮಹಿಮನೆ ನಿಜ ಗಿ–
ರಿಜೇಶ ಭುಜಗಭೂಷಣದೇವನೆ
ಗಜಚರ್ಮಾಂಬರವಿಷ್ಟಲಿಂಗ ನಿರಂಗ
ತ್ರಿಜಗವಂದಿತ ದೇವ ಮುರಿಗೆಯ ಮಹಾತ್ಮ
ನೀತನೆ ತಂಗಿ ಈತನೆ .......... ॥ ೩ ॥



## ೧೯೬

ನಂಜ ಬಾರನಲ್ಲೆ ಮನಿಗೆ ಏನ ಮಾಡಲಿ
ಮತ್ತೇನೆಂದು ಕರೆಯಲಮ್ಮ ರುದ್ರಗೀಶ್ವರನು
ನಮ್ಮ ಮುರಿಗೆಯ ಶಾಂತವೀರ ॥ ಪಲ್ಲ ॥

ಚಿಕ್ಕಂದುಮೊದಲು ತೋ
ತೆಕ್ಕೆಯೊಳೆನ್ನನಗಲಲಿಲ್ಲ
ಅಕ್ಕರು ಪುಟ್ಟಿತು ಸ್ವಾಮಿ
ಸಿಕ್ಕಿ ಮರುಳಾದೆನಮ್ಮ ॥ ೧ ॥

ನೆನ್ನೆ ಮೊದ[ಲಾಗಿ] ಎನ
ಗನ್ನವೆ ಸೇರದು
ತನ್ನಯ ಕಾಣದೆ
ಎನ್ನ ಮನಸು ತಲ್ಲಣಗೊಳುತಿದೆ ॥ ೨ ॥

ಧರೆಯೊಳಧಿಕವಾದ ನಿಜ
ವರದ ಚೆನ್ನಮಲ್ಲಿಕಾರ್ಜುನ
ತರಳ ಪ್ರಾಯದಿ ಎನ್ನ
ಮರುಳು ಮಾಡಿದ ಮುರಿಗೆಯ ರುದ್ರ ॥ ೩ ॥

 

೧೯೭

ಮಂಗಳಮೂರ್ತಿಗೆ ಮಂಗಳಂ ಶಾಂತ
ಲಿಂಗರಾಜೇಂದ್ರಗೆ ಮಂಗಳಂ ॥ ಪಲ್ಲ ॥

ಗರ್ವಾಂಧಕಾರಿಗೆ ಗುಣಮಣಿಹಾರಗೆ
ಪರ್ವತರಾಜಗೆ ಪಾವನಾಂಗಗೆ
ಸರ್ವಲೋಕೇಶಗೆ ಸರಸವಿತಾಗೆ[ನ]
ಗೀರ್ವಾಣವಂದ್ಯಗೆ ಮಂಗಳಂ ॥ ೧ ॥

ಗಂಗೆಯರಮಣಗೆ ಭಂಗವಿನಾಶಗೆ
ಭವದೂರಗೆ
ಲಿಂಗಾನುಭಾವಿಗೆ ಲಯಗಮ[ನ]ದೂರಗೆ
ಅಂಗಜವೈರಿಗೆ ಮಂಗಳಂ ॥ ೨ ॥

ಸುರಗಿರಿಚಾಪಗೆ ಸುಗುಣಕಳಾಪಗೆ
ತರುಣೇಂದುಮೌಳಿಗೆ ತಪದೂರಗೆ
ಪರತರಬ್ರಹ್ಮಗೆ ಪಾಪವಿಲೋಪಗೆ
ಮುರಿಗೆಯಸ್ವಾಮಿಗೆ ಮಂಗಳಂ ॥ ೩ ॥

☐ ☐

೧೯೮

ಕಾಣೆ ನಾನಯ್ಯೋ ಏಣಾಕ್ಷಿ ಪ್ರಾಣಕಾಂತನ
ಕ್ಷೋಣಿಯೊಳಗೆ ತ್ರಿಣಯನಂತೆ ಮೆರದನಾದಿಶರಣನ
ಜಾಣೆ ತೋರೆ ಮುರಿಗೆ ಶಾಂತವೀರ ಪ್ರಣಮರೂಪನ ॥ ಪಲ್ಲ ॥

ಚಿತ್ತಜಾರಿಯ ಚಿದ್ರಮಣ ನಿತ್ಯ ಮುಕ್ತಿಮೂರ್ತಿಯ
ಕರ್ತನಾಗಿ ಎನಗೆ ಪ್ರಣವಮಂತ್ರವಿತ್ತ ಮಹಿಮನ
ಎತ್ತ ಹೋದ ಯತಿಗಳರಸು ಸತ್ಯ ಸದಮಲಾತ್ಮನ
ಚಿತ್ತದಲ್ಲಿ ನೆನದು ಮತ್ತೆ ಮರೆಯಲಾರೆನಯ್ಯಯ್ಯೋ
ಸತ್ತು ಚಿತ್ತಾನಂದದಿಂದ ಮುಕ್ತನಾದ ದೇವನ ॥ ೧ ॥

ಪಂಥಗಾರನು ಭಾವಕಿ ತೋರೆ ಅಂತ[ಕಾಂತ] ಕಾರಿಯ
ಚಿಂತೆರಹಿತ ಹಿಡಿದ ಛಲವ ಬಿಡದ ಧೂಂತಕಾರಿಯ
ಎಂತು ಪೇಳೆ ಯತಿಸಂತತಿಗಳಂತರಂಗವಾಸನ
ಕಂತುಹರನ ಭಕ್ತಜನರ ಚಿಂತಿತಾರ್ಥವೀವನ
ಸಂತತೆನ್ನ ಸಲಹಿ ಮೂಲಮಂತ್ರದೊಳಗೆ ಬೆರದನ ॥ ೨ ॥

ಸಿಂಧುಜೂಟನ ಚಂದಿರುವದನೆ ಸೌಂದರಾಂಗನ
ಚಂದ್ರ ಸೂರ್ಯ ಅಗ್ನಿ ನೇತ್ರಾನಂದ ಜ್ಞಾನಚಂದ್ರನ
ಕಂದುಗೊರಲನು ಧರೆಗೆ ಬಂದ ಮಹಿಮಾಭರಣನ
ಚಂದವಾಗಿ ಯೋಗೀಶ್ವರರ ವೃಂದದೊಳಗೆ ಮೆರೆದನ
ಮುಂದೆ ಎನಗೆ ಲಿಂಗವಾಗಿ ಬಂದ ಪಾವನಾಂಗನ ॥ ೩ ॥

ಕಾಮನಾಶನ ಕಾಮಿನಿ ತೋರೆ ಸೋಮಭೂಷಣ[ನ]
ತಾಮಸದೆ ಕರ್ಮಹರ ನಿರ್ಮೋಹಿ ನಿತ್ಯ ತೃಪ್ತನ
ನೇಮದಿಂದ ನೆನೆದವರ್ಗೆ ಕಾಮಿತಾರ್ಥವೀವನ

ನಾಮರೂಪತೀತನೆನ್ನ ಸ್ವಾಮಿ ಭಾನುಜೂಟನ
ಪ್ರೇಮಿ ಎನ್ನೊಳಡಗಿ ಮುಕ್ತಿ ಸ್ತೋಮದಾಮವಾದನ ॥ ೪ ॥

ಮಂಗಳಾತ್ಮನ ಮಾನಿನಿ ಮಹಲಿಂಗದೇವನ
ಅಂಗವೆಲ್ಲ ಲಿಂಗವಾಗಿ ಹಿಂಗದೆನ್ನೊಳಿರುವನ
ತಿಂಗಳು ಸೂಡಿದದೇವ ಕಂಗಳು ಮೂರುಳ್ಳನ
ಲಿಂಗಸಂಗಿ ಬಸವಲಿಂಗರಾಜನಾಳ್ವ ರಮಣನ
ಲಿಂಗವಾದ ಮುರಿಗೆ ಶಾಂತವೀರ ಕರುಣಪಾಂಗನ ॥ ೫ ॥

೧೯೪

## ಮಂಗಳಾರತಿ ಪದ

ಮಂಗಳಾರತಿಯ ಬೆಳಗಿರೆ ಭವ
ಭಂಗ ಮುರಿಗೆ ಶಾಂತವೀರೇಶಗೆ
ಮಂಗಳಾರತಿಯ ಬೆಳಗಿರೆ ॥ ಪಲ್ಲ ॥

ದಕ್ಷಗೆ ದಕ್ಷ ವಿರೂಪಾಕ್ಷಗೆ
ಅಕ್ಷಯಗುಣ ನಿಟಿಲಾಕ್ಷನಿಗೆ
ಲಕ್ಷ ವಾಹನನಿಗೆ ರುಕ್ಷ ಥಾ
ಲಾಕ್ಷಗೆ ಶ್ರೀಯಕ್ಷ ಮುರಿಗೆ ಶಾಂತವೀರೇಶಗೆ ॥ ೧ ॥

ಸಗುಣ ನಿರ್ಗುಣನಿಗೆ ಅಗಣಿತಮಹಿಮಗೆ
ಖಗರುಚಿನಿಭ ಜಟಜೂಟನಿಗೆ
ನಿಗಮ ತುರಂಗಗೆ ನಗಜಾಸುಸಂಗಗೆ
ಸುಗುಣ ಮುರಿಗೆ ಶಾಂತವೀರೇಶಗೆ ॥ ೨ ॥

ಸುರನತಚರಣಗೆ ಹರಿಣಾಂಕಾಭರಣಗೆ
ತರಣೇಂದುಕೋಟಿ ಪ್ರಕಾಶನಿಗೆ
ಮರಣವಿದೂರಗೆ ಪರತರಧೀರಗೆ
ಮಂಗಳಾರತಿಯ ಬೆಳಗಿರೆ ॥ ೩ ॥

 

೨೦೦

ಊಟಕೆ ಬಂದೆವು ನಾವು ನಿಮ್ಮ ಕೋಟಳೆಗಳ
ಬಿಟ್ಟು ಅಡಿಗೆಮಾಡಮ್ಮ
ಊಟಕೆ ಬಂದೆವು ನಾವು ॥ ಪಲ್ಲ ॥

ಕತ್ತಲಿಟ್ಟವು ನಮ್ಮ ಕಣ್ಣು ಜು
ಮ್ಮಿಟ್ಟು ಬರುತಲದೆ ಕೈ ಕಾಲು ಜುಮ್ಮು
ಹೊತ್ತು ಹೋಗಿಸಬೇಡವಮ್ಮ ಒಂದು
ತುತ್ತನಾದರೆ ನೀಡಿ ನೀಕಳುವೇನಮ್ಮಮ್ಮ
ಊಟಕೆ ಬಂದೆವು ನಾವು ................ ॥ ೧ ॥

ಒಡಲೊಳುಕಿಚ್ಚದಾಗುವದು ಅರಗಳಿಗೆಯು
ತಡೆದರೆ ಪ್ರಾಣಹೋಗುವುದು
ನುಡಿದರೆ ನಿಮಗೆ ತಾಕುವುದು ಒಂದು
ಪಡಿಯಕ್ಕಿಗಾಗಿ ಅಪಕೀರ್ತಿ ಬಹುದು
ಊಟಕೆ ಬಂದೆವು ನಾವು .................. ॥ ೨ ॥

ಹೊನ್ನರಾಸಿಯ ತಂದು ಸುರಿಯೆ ಕೋಟಿ
ಕನ್ಯಾದಾನ ಮಾಡಿತ್ಯೆಸೆ ಧರೆಯರಿಯೆ
ಅನ್ನದಾನಕೆಯಿದು ಸರಿಯೆ ಪ್ರ-
ಸನ್ನ ಮುರಿಗೇಶ ಪಾಲಿಸೊ ಧರೆಯ
ಊಟಕೆ ಬಂದೆವು ನಾವು .................... ॥ ೩ ॥

೨೦೧

ಚಿಂತಿಪುದು ಘನವೆ ಮನವೆ ಕಂತುಹರ
ನೆಂತರಿಸಿದಂತೆ ಇರದೆ ಬರಿದೆ ॥ಪಲ್ಲ ॥

ಧನ ಕನಕ ವಸನಂಗಳು ವಾಹನವು
ಘನತೆ ವನಿತೆಯರ ಪರಮಸುಖವು
ತನುನರನುಜರ ಮಂದಿರ ಗಾಂಧರ್ವ
ಘನವಿದ್ಯ ಮೊದಲಾದವು ಬಯಸಿ ॥ ೧ ॥

ಪ್ರಾರಬ್ಧಕರ್ಮಫಲವು ಕಲ್ಪಗಳು
ನೂರುಕೋಟಿ [ಗ]ಳಾದರೆ ಉಣ್ಣದೆ
ಆರಿಗಾದರು ತೀರದುವಿಂ[ತಿ]ದು
ಸಾರುತಿಹ ಶಾಸ್ತ್ರತತಿಯು ಸತತ ॥ ೨ ॥

ಸುಳಿವ ತುದಿಯ ರಸ ಜೇನ ಇಚ್ಛೈಸಿ
ಬಳಲು [ತಿಹು]ದದೀ ಲೋಕದಿ ಭಾಗ್ಯ
ದೊಳು ಜೀವಿಸುವ[ವ]ರು ಕಳವಳ
ದೊಳಗೆ ಮುರಿಗೇಶನಡಿಯ ಮರದು ॥ ೩ ॥

## ೨೦೨

ಜಯ ಜಯ ಶ್ರೀ ಮುರಿಗೇಶ
ಜಯ ಜಯ ಜಂಗಮದೀಶ
ಶಯಧೃತಲಿಂಗ ಶಮಿತಾನಂದ
ಕುಯಮಿಭಂಗ ಕುಧರೋತ್ತುಂಗ
ವಿಯದಾಕಾರ ವಿದ್ಯಾಧಾರ
ಭಯತತಿದೂರ ಭಜಕಮಂದಾರ ॥ ಪಲ್ಲ ॥

ಕುಂಜರ ಗದ ಸುದಪಾದ
ಕಂಜಾರ ಕಲಿಮಲ ಭೇದ
ಮಂಜುಳಕಾಯ ಮಹಿಮ ನಿಕಾಯ
ಭಂಜಿತ ಬೌದ್ಧ ಭಯ ಮೃತಿ ಕೃದ್ಧ
ಪುಂಜಿ[ತ] ಪುಣ್ಯವ ಪುಂಗವಗಣ್ಯ
ಸಂಜಿತ ಕಾಲಸ ಕಲಿಕಾಲಾಲಾ[?] ॥ ೧ ॥

ನಿಂದಿ[ತ] ವಾದಿ ಸಿದ್ಧಾಂತ
ನಂದಿತ ಶೈವರಾದ್ಧಾಂತ
ಸುಂದರರೂಪ ಸುಜನ ಮಹಿಪ
ವಂದಿತ ಚರಣ ವರಗುರು ಶರಣ
ನಂದಿಪತಾಕ ನತಜನ ಶೋಕ
ವೃಂತ ಸಂಹರ ರವಿ ಬುಧೋದ್ಧಾರ ॥ ೨ ॥

ಚಿನ್ಮೂಲಶೈಲ ನಿವಾಸ
ಚಿನ್ಮಯ ಚಂದ್ರಿಕೆ ಹಾಸ
ಮನ್ಮಥರಾಜ ಮ[ನು]ಮುನಿರಾಜ
ಸ್ವನ್ಮನಿಸ್ತುತ್ಯ ಸಾಧಿತ ಸತ್ಯ
ಜನ್ಮಾತಿಕರಣ ನಿಜಾಂತಃಕರಣ
ಮನ್ಮದಿರಾಮ ಮುಕ್ತಿಸುರಾಮ ॥ ೩ ॥

೨೦೩

ಮಂಗಲ ಜಯ ಜಯ ಪಾರ್ವತಿನಾಥಗೆ ಪಾಪವಿನಾಶಗೆ ॥ ಪಲ್ಲ ॥

ಸುರವರನಾಥಗೆ ವರಗುಣಖ್ಯಾತಗೆ
ಭರಿತ ತ್ರಿಲೋಕಗೆ ಪರಮ ದಯಾಳಗೆ ॥ ೧ ॥

ಹರಿಯಜ ಸೇವ್ಯಗೆ ಸುರಮುನಿ ಭವ್ಯಗೆ
ಕರುಣಕಟಾಕ್ಷಗೆ ಗುರುಜನ ಮೋದಗೆ ॥ ೨ ॥

ಮುರಹರ ನಿರುತಗೆ ಪರತರ ಶೀಲಗೆ
ಪರಮ ವಿರಕ್ತರ ಗುರು ಮುರಿಗೇಶಗೆ
ಮಂಗಲ .................................... ॥ ೩ ॥

೨೦೪

ಮುತ್ತಿನಾರತಿ ಎತ್ತಿರಿ ಮುಕ್ತಿವರಗೆ ಸರ್ವೇಶ್ವರಗೆ
ಮುತ್ತಿನಂತೆ ಥಳಥಳಿಸುವ ಧವಲಾಂಗನಿಗೆ ಯತಿತುಂಗನಿಗೆ ॥ ಪಲ್ಲ ॥

ಜಡೆಮುಡಿಯೊಳು ಗಂಗೆಯ ಧರಿಸಿದ ನಿರ್ಜರಗೆ ನಿರ್ಮಲ ಮೃಡಗೆ
ಎಡದೊಡೆಯೊಳು ಗೌರಿಯ ಮಡಗಿದ ಶಂಕರಗೆ ಭೃತ್ ಕಿಂಕರಗೆ
ಬಡವರ ಭಕ್ತಿಗೆ ಮೆಚ್ಚಿದ ದಯವಂತನಿಗೆ ನಿಶ್ಚಿಂತನಿಗೆ
ಪೊಡವಿಯೊಳು ಕಡುಗಲಿಯೆನಿಸಿಹ [ಹ]ರಿಶರಗೆ ಪುರಹರಗೆ ॥ ೧ ॥

ಶ್ರುತಿತತಿಗತಿ ದುರ್ಲಭನೆನಿಸಿದ ಈಶನಿಗೆ ಭಾವ[ಜ]ನಾಶನಿಗೆ
ನುತಿಸಿದ ಬುಧ ಸನ್ನುತ ಗುಣಮಣಿಹಾರನಿಗೆ ಸತತ ಸೂರನಿಗೆ

ಕ್ಷಿತಿಯರಿಯಲು ಚೆನ್ನಯ್ಯನ ಕೂಡುಂಡನಿಗೆ ಚಿತ್ಪಿಂಡನಿಗೆ
ಕ್ರತುಭುಜ ತನುದಹಿಸುವ ಗಳವಳವನಾಂತನಿಗೆ ಬಹುಶಾಂತನಿಗೆ ॥ ೨ ॥

ಧರಣಿಯ ರಥವನು ಮಾಡಿದ ಗಣನಾಯಕಗೆ ಫಲದಾಯಕಗೆ
ಸ್ಮರನಂಗವ ನಿಮಿಷದಿ ಕೋಪದಿ ಸುಟ್ಟನಿಗೆ ಬಹು ಧಿಟ್ಟನಿಗೆ
ಹರಿ ಪರಮೇಷ್ಠಿ ಸುರಾಸುರನತ ಚರಣನಿಗೆ ಜಿತ ಮರಣನಿಗೆ
ವಿರೂಪಾಕ್ಷೇಶ್ವರನೆನಿಸಿದ ಮುರಿಗೇಂದ್ರನಿಗೆ ಧೃತಚಂದ್ರನಿಗೆ ॥ ೩ ॥



೨೦೫

ಜ್ಯೋತಿ ಬೆಳಗುವೆ ದೀಪದ ಕಲಿಯರಿಗೆ ಮುರಿಗೇಂದ್ರರಡಿಗೆ
ಜ್ಯೋತಿ. ಬೆಳಗುವೆ
ಮಾತುಮಾತಿಗೆ ಮಂತ್ರವ ನುಡಿವ ನೀತಿವಂತ ಅಜಗಣಯ್ಯನಿಗೆ
ಓ[ತು] ಸೂಲಿಗೆ ಪುಷ್ಪವ ತರುವರಿಗೆ ನಿಜಲಿಂಗೈಕ್ಯರಿಗೆ ॥ ಪಲ್ಲ ॥

ಗುಡ್ಡದ ಬ್ರಹ್ಮದೇವಯ್ಯಗಳಿಗೆ ಸಗರದ ಬ್ರಹ್ಮನಿಗೆ
ಖಡ್ಗದ ಬ್ರಹ್ಮ ಓಲೆ ಬ್ರಹ್ಮನಿಗೆ ಸೂನಿಯ ಬ್ರಹ್ಮನಿಗೆ
ಎಡ್ಡ ಸೋಮ ರಕ್ಕಸ ಬ್ರಹ್ಮಯ್ಯನಿಗೆ ಕೆರೆವೂರ ಬ್ರಹ್ಮನಿಗೆ
ಮಿಂಡಸಂಗನ ರಾಜಾನ್ನ ಬ್ರಹ್ಮಗೆ ದೊಡ್ಡ ಕನ್ನದ ಬ್ರಹ್ಮನಿಗೆ
ಸೊಡ್ಡಳ ಬಾಚರಸರೆ ಮೊದಲಾದ ಶರಣರಡಿಗಳಿಗೆ ಈ ಗಣತಿಂತಿಣಿಗೆ॥ ೧ ॥

ಮಾಟಕೂಟ ಮಲ್ಲಿಯನಾಥಯ್ಯನಿಗೆ ಬಳ್ಳೇಶ ಮಲ್ಲನಿಗೆ
ಜ್ಯಾಟೂಲ ಸೋಮಯ್ಯದೇವರಿಗೆ [ಮೊ]ಲ್ಲೆಯ ಬ್ರಹ್ಮನಿಗೆ
ಕಾಟಕೂಟ ಗೊಲ್ಲಳರಾಯನಿಗೆ ಮೋಳಿಗೆ ಮಾರನಿಗೆ
ಜಟ್ಟಿಯ ಮಾರಗೆ ಶಂಕರದಾಸ್ಯಗೆ ಕಾಟಕೂಟ ಕಾಲಾಗ್ನಿಯ ರುದ್ರಗೆ
ನೋಟ ಪರುಷದ ಸಂಗಯ್ಯಗಳಿಗೆ ಈ ಶಿವಶರಣರಿಗೆ ॥ ೨ ॥

ಸಲ್ಲಲಿತ ಕಲ್ಯಾಣದ ಬಸವನಿಗೆ ಚೆನ್ನಬಸವೇಶ್ವರಗೆ
ಎಲ್ಲ ಪ್ರಮಥಗಣಂಗಳ ಪಾದಕ್ಕೆ ರುದ್ರ ವೃಷಭರಿಗೆ
ಎಲ್ಲಗುಂಡದರುವತ್ತುಮೂವರಿಗೆ ಷೋಡಶಮರರಿಗೆ
ಬಲ್ಲಿದ ತೇರಸಗಣಂಗಳು ಇಲ್ಲಿ ಮೋಟಗಿ ಸಿದ್ಧಲಿಂಗಗೆ
ನಿಲ್ಲದೆ ಮೋಕ್ಷವ ಕೊಟ್ಟಂಥವರಿಗೆ ಈ ಹರಶರಣ[ರಿ]ಗೆ ॥ ೩ ॥



## ೨೦೩

ಬಸವಪುರಾಣವನುಸುರಿದ ಕವಿಗಳ
ಪೆಸರ್ಗೊಂಬುವೆನಾನಂದದಲಿ
ಪಶುಪಮತಾರ್ಣವ ಶಶಿಗಳ ಪದಸಾ
ರಸಗಳಿಗೆರಗುವೆ ಛಂದದಲಿ ॥ ೧ ॥

ಬಸವಪುರಾಣವನಾಂಧ್ರದಿ ರಚಿಸಿದ–
ನಸಮ ಸೋಮನಾಥೇಂದ್ರಕವಿ
ಕುಶಲ ಭೀಮಕವಿ ಷಟ್ಪದಿ[ಯಲಿ]ನಿ
ರ್ಮಿಸಿದ ಕುಕವಿ ಕುಲಕುಧರ ಪವಿ ॥ ೨ ॥

ಸೂರಿಗಳಿಗೆ ಸವಿ ಸೂಱೆಕೊಡುವ ಸುಖ
ಸಾರ ಸನ್ನುತರೊಳೊಲಿದು
ಧೀರ ಶಂಕರಾರಾಧ್ಯ ಕವೀಶ್ವರ
ಪೂರ ಪೇಳ್ದ ಕವಿತೆಯ ನಲಿದು ॥ ೩ ॥

ಬಾಲಚಂದ್ರನಗರಾಲಯ ಶಿವ
ಮೌಲಿ ಷಡಕ್ಷರಿವರನಂದು
ಮೇಲೆನಿಸಿದ ವಸ್ತುಕದಿಂ ವಿರಚಿಸ
[ಲೊಲ್ದು] ನಲಿಯೆ ಪಂಡಿತ ವೃಂದ ॥ ೪ ॥

ಚತುರ್ವಿಧ ಸುಪುರಾಣಗಳಿಗೆ ಶ್ರುತಿ ಸ–
ಮ್ಮತಿಯಹ ಗ್ರಂಥಾರ್ಥವ ನಯದಿ
ಚತುರ ಬಸವಲಿಂಗಾಖ್ಯರು ಪೇಳ್ದರು
ಯತಿಪುರ ಸಿದ್ಧೇಶನ ದಯದಿ ॥ ೫ ॥

 

## ೨೦೭

### ರಾಗ : ಆಹರಿ

ಕೊಂಡಾಡಲರಿಯೆ ನಿಮ್ಮಿರವ ಮಾಯ
ಖಂಡಿತನೆ ಬಸವಪ್ರಭುದೇವ ಸಂಜೀವ ॥ ಪಲ್ಲವಿ ॥

ಅಷ್ಟಮದಗಳ ತುಳಿದೆ ಆರುಭ್ರಮೆಗಳ ಕಳಿದೆ
ಇಷ್ಟಲಿಂಗವ ಪಿಡಿದೆ ಈಶ್ವರಾರ್ಚನೆವಿಡಿದೆ
ದುಷ್ಟಮಾಯೆಯ ಗೆದ್ದೆ ದೂಷಕರ ನೀ ಹೊದ್ದೆ
ಕಷ್ಟಕರ್ಮಕೆ ಸೋಲೆ ಕಾಲನೆದೆಯನು ಮೇಲೆ
ಮೆಟ್ಟಿ ಸೂಲದೊಳಿರಿದೆ ಮೆರದು ಮುಂದಕೆಪರಿದೆ
ಸುಟ್ಟು ಮನ್ಮಥನ ಭಸ್ಮವ ಭಸಿತ ವಿಲೇಪ
ವಿಟ್ಟು ನೀ ಮೆರದು ನಿಂದೆ ದೇವ

ನಿಷ್ಠೆ ನಿಬ್ಬೆರಗಾದ ಕಾಯ ಎನಗೆ
ಇಷ್ಟಾರ್ಥವೀವ ಉಪಾಯ ಎಂದು
ಹುಟ್ಟುವುದು ಇದಕೇಳೊರಾಯ ನಿನ್ನ
ಬಿಟ್ಟು ಜೀವಿಸಲಾರೆ ಜೀಯ್ಯ ಎನ್ನ
ಕಟ್ಟವನು ಬಿಡಿಸಯ್ಯ ಕರುಣಿ ಗುರುರಾಯ ॥ ೧ ॥

ಕಾಲಕರ್ಮವ ಕಳಿದೆ ಕಾಲನಂಡಲೆ ಗೆಲಿದೆ
ಬಾಲೆಯರ ಶೃಂಗಾರ ಬಯಸದ ಚರಿತ ಧೀರ
ಮೂಲೋಕದೊಳ್ಮೆರೆದೆ ಮೂರುಬಲೆಗಳ ಪರಿದೆ
ಸಾಲುಮುಖಪಿತನ ಸಾಂಪ್ರದಾಯಕ ಜತನ
ಮೇಲ ನಿಟ್ಟಿಸಿ ನಿಂದು ಮೆರದು ಮರ್ತ್ಯಕೆ ಬಂದೆ
ಲೀಲೆಯಿಂದ್ವೈತಂದು ಲಿಂಗದೊಳ್ಮನಸಂದು
ಬಾಲರಂದದಿ ನುಡಿದೆ ಭಕ್ತಜನರೊಳು ನಡೆದೆ
ಮೂಲೋಕ ವಂದಿತಾಧೀಶ ಕೋಟಿ
ಬಾಲಾರ್ಕ ತೇಜಪ್ರಕಾಶ ಜಗಕೆ
ಲೀಲೆಯಿಂ ಬಂದೆ ಮಾಹೇಶ ಎನ್ನ
ಪಾಲಿಸುವುದೈಯ್ಯ ಭವನಾಶ ಸರ್ವೇಶ ॥ ೨ ॥

ಗುರುವೆ ಜಂಗಮರೂಪದಿರವೆ ನೆನವರ ಮನದೊ–
ಲಿರುವೆ ಮರ್ತ್ಯರನೆಲ್ಲ ಪೊರೆವೆ ಲಿಂಗಾಂಗದೊಳು
ಬೆರವೆಯೆನ್ನಯ ಭವವ ಪೊರವೆ ಮಾಯಾಂಸಿಕವ
ಹರಿವೆ ವಿಕಾರಗಳ ತೊರವೆ ದೂಷಕರನು
ಜರವೆ ದೇಹದ ಹಮ್ಮು ಮರೆವ ಜ್ಞಾನಾನಂದ–
ದಿರವೆ ಭಕ್ತರಿಗೆ ಕೃಪೆಗರವೆ ಮೂಲೋಕವನು
ಹೊರವೆ ನೀನೊಲಿದು ಬಂದೆ ದೇವ

ಕರುಣದಿಂದಲಿ ಎನ್ನ ನೋಡೊ ನಿಮ್ಮ
ಚರಣಕಮಲದೊಳೆನ್ನ ಕೂಡೊ ಮುಕ್ತಿ–
[ಯಿ] ರವ ಕಾಣಿಸುವಂತೆ ಶಾಂತ–
ಗೊರವಿತ್ತ ದಯ[ದಿ] ನೀ ನೋಡೊ ರಂಗ
ಪುರವಾಸ ಬಸವಪ್ರಭುದೇವ ಕೃಪೆ ಮಾಡೊ ॥ ೩ ॥

 

೨೦೮

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥
ಕೊಲ್ಲಿಪಾಕಿಯ ಮಹಾಲಿಂಗದ ಕುಮಾರನಿಗೆ

ಕೊಲ್ಲಾಪುರದ ದೈತೆಯ ಗೆಲಿದ [ನಿ]ಗೆ
ಅಲ್ಲಾಡುತಿರೆ ಕಂಚಿ ಅಲ್ಲಾಳನ ನಿಲಿಸಿದಗೆ
ಕಲ್ಲಿಸೆಟ್ಟಿಗೆ ಕಣ್ಣನಿತ್ತಾತಗೆ ॥ ೧ ॥

ಕುಂಭ[ಜಗೆ] ಶಾಂಭವಯೋಗಂಗಳನರುಹಿದಗೆ ತ್ರಿ
ಯಂಬಕಾತ್ಮಜ ಶಂಕರಾರ್ಚಕಗೆ
ಶಂಭುಗೌರಿಯನಿತ್ತ ಗುರುವರಗೆ
ಕುಂಭಿನಿಪತಿ ವಿಕ್ರಮಾರ್ಕಗೊಲಿದವಗೆ ॥ ೨ ॥

ಗೋರಕ್ಷನಂ ಶಿಕ್ಷೆಗೈದು ರಕ್ಷಿಸುತಿಹಗೆ
ಚಾರು ನವಕೋಟಿಸಿದ್ಧರ ಪೊರೆದಗೆ
ಕ್ರೂರ ಬಿಜ್ಜಳನ ಭಂಗಿಸಿ ಶರಣು ಹೊಗೆ ಕಾಯ್ದ
ವೀರಶೈವಾಂಬುನಿಧಿ ತಾರೇಶಗೆ ॥ ೩ ॥

ಏಳನೊರೆಪ್ಪತ್ತು ನಿಜಸತಿಯರಿಗೆ ಮೆಚ್ಚಿ
ಭಾಳಲೋಚನಪುರವ ಕಾಣಿಸಿದಗೆ
ಪಾ[ಳಿಯಿಂ]ಲಂಕಪುರದ ವಿಭೀಷಣಗೆ ಶಶಿ
ಮೌಳಿಯ ತ್ರಿಕೋಟಿಲಿಂಗವ[ರ್ಚಿ]ಸಿದಾತಗೆ ॥ ೪ ॥

ಧರೆಯೊಳಧಿಕವಾದ ಹೊಸಪುರದ ನೆಲೆವಾಸ
ದೃಢಭಕ್ತ ಜನರ ರಕ್ಷಿಪ[ಗೆ]

ಗುರುವರನು ರೇವಣಯತಿ ತೋಂಟದ ಸಿದ್ಧಲಿಂಗೇಶ್ವರಗೆ
ಸರಸಿಜಾಕ್ಷಿಯರಾರತಿಯೆತ್ತಿರೆ ॥ ೫ ॥



೨೦೯

ಹೂವ ಕೊಡೊ ವೀರ ಹೂವ ಕೊಡೊ ॥ ಪಲ್ಲ ॥

ಲಿಂಗಲಿಂಗಾವೇಯೆಂದು ಅಂಗದೊಳಗೆ ಹುಟ್ಟಿದ
ಮಂಗಳಮೂರುತಿ ನೀನೆ ಹೂವ ಕೊಡೊ
ಸಂಗನ ಶರಣೆ ನಮ್ಮ ಕೆಳದಿ ಚೆನ್ನವ್ವಗೆ
ಲಿಂಗಕಿಚ್ಛೆಯದೊಂದ ಹೂವ ಕೊಡೊ ॥ ೧ ॥

ಹರನಕಟಾಕ್ಷದಿ ಕಿಡಿಗಣ್ಣಿನಿಂದಲಿ ಹುಟ್ಟಿದ
ಪರಮ ವಿರತೈಯ್ಯನೆ ಹೂವ ಕೊಡೊ
ಧರೆಯೊಳಧಿಕವಾದ ಕೆಳದಿ ಚೆನ್ನವ್ವಗೆ
ಕರಿಮುಖದೈಯ್ಯನೆ ಹೂವ ಕೊಡೊ ॥ ೨ ॥

ಬಸುರಿಲಿಂದ ಬಂದು ಬಗೆಬಗೆಯಲಿ ನಿಂದು
ವಿಶೇಷ ಮೂರುತಿಯೆ ನೀನೆ ಹೂವ ಕೊಡೊ
ಧರೆಗಧಿಕವಾದ ಕೆಳದಿ ಚೆನ್ನವ್ವಗೆ
ಲೇಸು ವಿಜಯದೊಂದ ಹೂವ ಕೊಡೊ ॥ ೩ ॥

ಲಕ್ಷದಮೇಲೆ ತೊಂಬತ್ತಾರು ಸಾವಿರಕ್ಕೆ
ಭಿಕ್ಷವ ನೀಡುತಾಳೆ ಹೂವ ಕೊಡೊ
ಲಕ್ಷಣವುಳ್ಳ ನಮ್ಮ ಕೆಳದಿ ಚೆನ್ನವ್ವಗೆ
ನಿಚ್ಚ ಪೂಜೆಯದೊಂದ ಹೂವ ಕೊಡೊ ॥ ೪ ॥

ಧರೆಯೊಳಧಿಕವಾದ ಸೋಮಶೇಖರಭೂಪಾಲ
ನರಸಿ ಬಂದೆಯಿದಳೆ ಹೂವ ಕೊಡೊ
ಕರಿಮುಖದೈಯ್ಯ ಹೂವ ಕೊಡೊ ಏ ವೀರ
ಕರಿಮುಖದೈಯ್ಯ ಹೂವ ಕೊಡೊ ॥ ೫ ॥



## ೨೧೦

ಮಾರಿ ಬಂದಿತಲ್ಲ ಮದಮುಖದಜ್ಞಾನ
ಘೋರಪಾತಕ ದುರಿತ ಕಾರಣವೆಂಬ ॥ ಪಲ್ಲ ॥

ಹೊಱವೇಷದೆ ಕೊರಲೊಳು ಲಿಂಗವ ಕಟ್ಟಿ
ಬಱಿದೆ ಭಕ್ತನೆಂದು ಬೆರತು ಕೊಂಡು
ಮಱೆಯದೆ ಮನೆಯೊಳಗನ್ಯದೈವವ [ನೋಂ]ತು
ಬಱಿದೊಱೆಯಲಿ ಹೋಹಲಿಂಗವಂತರಿಗೆಲ್ಲ ॥ ೧ ॥

ಕೊಂಡವ್ರತವ ಬಿಟ್ಟು ತೀರ್ಥ ಪ್ರಸಾದಕ್ಕೆ
ದಿಂಡೆಯತನದಿ ಮನವು ಹೇಸಿ
ಕಂಡ ಕಾಮಿನಿಯರೊಳುಂಡು ತೊಂಬುಲ ತಿಂಬ
ಬಂಡ ಜನಂಗಳ ನೋಡಿ ಕೊಂಬುತ ॥ ೨ ॥

ಗುರುಸಹಯೋ[ಗ]ಕ್ಕೆ ಕರ್ಣಮಂತ್ರವ ತುಂಬಿ
ಪರದೈವ [ವೊ]ಲ್ಲದ ಕಂಕಣವ ಕಟ್ಟಿ
ವರ ಗುರುಶಂಕರನಾಜ್ಞೆಯಂ ಮೀಱುವ
ದೊರೆಗರ್ವದಲ್ಲಿ ನಡವ ಲಿಂಗವಂತರಿಗೆಲ್ಲ ॥ ೩ ॥

## ೨೧೧

ಎಮ್ಮಯ್ಯ ದಮ್ಮಯ್ಯ ನಾ ನಿಮ್ಮ
ಸೊಮ್ಮಯ್ಯ ಎನ್ನ ಕರಪೀಠಕೆ ಬಾ ಬಾ ॥ ಪಲ್ಲ ॥

ಅರವಿನಿಂದದ ಮಕರಂದದ ಮಾಲೆಯು
ಸುರಗಿಯ ನನೆ ಮರುಗದ ಕೊನೆಯು
ಇರವಂತಿಗೆ ಸೇವಂತಿಗೆಯರಳಿನ
ಪರಿಮಳವೀವೆ ಕರಪೀಠಕೆ ಬಾ ಬಾ ॥ ೧ ॥

ಸುಕರವೆನಿಪ ಕೆಂದಳಿರಿಂದಣದಿಂ
ಅಕುಳ ಬಕುಳ ಮಾದಳದರಳಿಂ
ಶುಕ ಪಿಕ ಮಧುಕರ ನಿಕರದ ರವದಿಂ
ಅಕುಟಿಲ ಕರಪೀಠಕೆ ಬಾ ಬಾ ॥ ೨ ॥

ಆರತಿಯಂಗನೆ ಸಾರಥಿ ಪಾರ್ಥನೆ
ಆರತಿ ಮಾಣಿಕದಾರತಿಯಿಂದ
ಈ ರತಿಯಿಂದಲಿ ಪಿಡಿದ್ಯೆದನೆ ಶರ
ಣರತಿ ಮಮ ಕರಪೀಠಕೆ ಬಾ ಬಾ ॥ ೩ ॥

ಹರಿಯಜರೆಡಬಲದಲ್ಲಿ ನಡೆ ಸಾಹೋ
ದರುರೆ ಧೀರರುರೆಯೆಂದುಗ್ಘಡಿಸೆ
ಸುರಪತಿ ಜಯ ಜಯ ನಮೊಯೆನೆ ಸೆಜ್ಜೆ
ಯರಮನೆಯಿಂ ಕರಪೀಠಕೆ ಬಾ ಬಾ ॥ ४ ॥

ಲಾಲಿಸಿ ಪಾಲಿಸಿ ಕರಕಮಲದೊಳೊ
ಡ್ಡೋಲಗವಿತ್ತು ಜಗತ್ರಯವ
ಆಳುತ ಬಾಳುತ ಶಂಕರಲಿಂಗವೆ
ಲೀಲಾಸುಖಿಯಾಗಿಹ ಬಾ ಬಾ ॥ ೫ ॥

೨೧೨

ಬಂದೆನ್ಯೆಯ್ಯ ಶಿವ ಶಿವ ನೊಂದೆನ್ಯೆಯ್ಯ ಭವಭವದಿ
ಬಂಧನದ ಸಟೆಯ ಸಂಭ್ರಮದ ಸಂಸಾರದಿಂದ ॥ ಪಲ್ಲ ॥

ಮನೆಗೆ ಮಕ್ಕಳಿಗೆ ಮಾನಿನಿಗೆ ದಾಯಾದ್ಯರಿಗೆ
ಜನನಿ ಜನಕರು ಸಕಲರಿಗೆಲ್ಲ
ಅನುದಿನ ಕುದಿದು ಕೋಟಲೆಗೊಳಗಾದೆ ನಿಮ್ಮ
ನೆನೆಯಲೀಯದಿಹ ಬಿನುಗು ಸಂಸಾರದಿಂದ ॥ ೧ ॥

ಹೊತ್ತಾರೆದ್ದು ಬೈಗುತನಕ ಅತ್ತ ಹೋದೆ ಇತ್ತ ಬಂದೆ
ಸುತ್ತಿ ಸುಳಿದ ಮೇಲೆ ಇಟ್ಟು ತೊಟ್ಟೆನು
ಉತ್ತರಕುತ್ತರ ಕೊಟ್ಟೆನು ಬಲ್ಲರ ಬಾಯ
ಎತ್ತಲೀಸ [ಲಾಗ] ದಿಹ ವ್ಯರ್ಥಸಂಸಾರದಿಂದ ॥ ೨ ॥

ಊರ ಮುಂದೆ ಕುಳಿತೆ ಕೆರೆಯ ಮುಂದೆ ಸುಳಿದೆ ವಿ
ಚಾರಿಸಿ ಇದನೆ ಎನಿತವಾರವ ತಿದ್ದಿದೆ (?)
ಕಾರಿದೆ ಹೋರಿದೆ ಸಲೆ ಉಂಡು ಗೆಲಬಾಳ್ದೆ ಎನಗಿನ್ನು
ಆರು ಸರಿಯಿಲ್ಲೆಂಬ ಅಹಂಕಾರಿ ಸಂಸಾರದಿಂದ ॥ ೩ ॥

ನಾಡ ಬೀಡ ನೋಡಿದೆ ನಾನಾ ವ್ಯವಹಾರಗಳ
ಮಾಡಿದ ಕೂಡಿದೆ ಕೋಟಿ ಧನವನು
ಆಡಿದೆ ನೋಡಿದೆ ಲೆತ್ತ ಚದುರಂಗ ಪಗಡೆಯ
ಆಡಿ ಸೋಲಿಪರಿಲ್ಲೆಂಬ ರೂಢಿ ಸಂಸಾರದಿಂದ ॥ ೪ ॥

ಆಟಮಟ ಕುಟಿಲ ಕುಹಕದ ಸಂಸಾರದಿಂದ
ತಟತಟನೆ ತೊಳಲಿ ಬಳ [ಲದ]ಂತೆ
ನಿಟಿಲಲೋಚನ ನಿಮ್ಮ ಪಾದಕಮಲವೆಂಬ
ಮಟದೊಳಗಿರಿಸು ಕಂಡಯ್ಯ ಶಂಕರಲಿಂಗ ॥ ೫ ॥

೨೧೬.

ಹುಸಿಯೊ ಹುಸಿಯೊ ಹುಸಿಮನವೆ
ಹುಸಿದು ಹುಸಿದು ನೀನು ಮಸಿಮಣ್ಣಾದೆಲೊ ॥ ಪಲ್ಲ ॥

ಗುರು ಹಿರಿಯರ ಕೂಡೆ ಸಾಧು ಸತ್ಯರ ಕೂಡೆ
ಪರಮ ಪತಿವ್ರತೆಯರ ಕೂಡೆ
ಶರಣರ ಕೂಡೆ ಸುಧರ್ಮ ಶೀಲರ ಕೂಡೆ
ಸ್ವರಹಿ ಸ್ವರಹಿ ನೀನು [ಸೋರೆ] ಯೊಡಲಾದೆಲೊ ॥ ೧ ॥

ನಿನಗೇಕೆ ಗುರು [ಸೇ]ವೆ ನಿನಗೇಕೆ ಲಿಂಗಪೂಜೆ
ನಿನಗೇಕೆ ಜಂಗಮ ದಾಸೋಹ
ನಿನಗೇಕೆ ತ್ರಿವಿಧ ತೀರ್ಥ ಪ್ರ[ಸಾದವು]
ನಿನಗೇಕೆ ಸತ್ಯ ಸದಾಚಾರವು ॥ ೨ ॥

ಒಂದಲ್ಲ ಎರಡಲ್ಲ ಎಂಬತ್ತುನಾಲ್ಕು ಲಕ್ಷ
[ವೆಂದು] ಜನಿಸಿದೆ ಯೋನಿಮುಖದೊಳಗೆ
ಬಂದುದ ಸಾ[ಲದೆ ಮತ್ತಿನ್ನೇಕೆ] ಮರದೆಯೊ
ತಂದೆ ಶಂಕರಲಿಂಗನವತಾರವ ॥ ೩ ॥

 

೨೧೪

ಗಣಾಷ್ಟೋತ್ತರ

ಶಿವಪೂಜೆಯಿಂ ಮಾಡು ಶೀಘ್ರದಿಂ ಭಕ್ತಿಯಿಂ
ಶಿವನೆ ಗುರುಲಿಂಗಜಂಗಮವೆಂದು ಸಲೆ ಸಂದು
ಶಿವನ ಸದೃಶರಪ್ಪ ಶಿವಶರಣಗಣಾಂಘ್ರಿಯನು ಸದ್ಭಾವದಿಂ
ನೆನವುತ ॥ ಪಲ್ಲ ॥

ಪರಮಗುರು ಬಸವರಾಜನು ಚೆನ್ನಬಸವಣ್ಣ
ನಿರುಪಮಾನಂದನಿಧಿ ಮಹಿಮ ಮಡಿವಳದೇವ
ಪರಮ ಪ್ರಭುರಾಯ ಪಾವನಮೂರ್ತಿ ಶಿವಸಿದ್ಧರಾಮ ನಿಜಗುಣದೇವನು
ಮೊರಟದ ಬಂಕಿದೇವನು ಮೊರನ ರೇಮಯ್ಯ
ಇರಿಭಕ್ತ ವೀರಗುಂಡಯ್ಯ ಬ್ರಹ್ಮಯ್ಯಗಳ
ಸುರಿಗೆಯ ಚವುಡಯ್ಯ ಶೂಲದ ಬ್ರಹ್ಮಯ್ಯಗಳ ಚರಣ ಕಮಲವ
ನೆನವುತ ॥ ೧ ॥

ಅಲ್ಲಯ್ಯನಗಜಣ್ಣನಾದಯ್ಯನಿಳೆಹಾಳ
ಕಲ್ಲಯ್ಯ ಕಾಚಿರಾಜನು ಕದಿರ ರೇಮಯ್ಯ
ಕೊಲ್ಲಿಪಾಕದ ಮಾರಿದೇವಯ್ಯ ಮಧುವರಸ ಮಲುಹಣನು ಮಾನಕಂಜರ
ಬಿಲ್ಲೇಶಬೊಮ್ಮಿದೇವನು ಬಿಬ್ಬಿಬಾಚಯ್ಯ
ಗೊಲ್ಲಾಳ ಸ್ವೆಚ್ಛ ಚಾರಮ ನಂಬಿ ಬಳ್ಳೇಶ
ಮಲ್ಲಯ್ಯ ಜಗದೇವ ಮಲ್ಲಿಬೊಮ್ಮಣ್ಣಗಳನೆಲ್ಲರ
ಪ್ರಿಯ[ದಿ] ನೆನವುತ ॥ ೨ ॥

ಕನ್ನದ ಮಾರಯ್ಯ ಕೈಕೂಲಿ ಚಾಮಯ್ಯ
ಕಿನ್ನರಿಯ ಬೊಮ್ಮಿತಂದೆಯು ಕೇಶಿರಾಜಯ್ಯ
ಮನ್ನಣೆಯ ಬಹುರೂಪಿ ಚವುಡಯ್ಯ ಶಬರೇಶ ಕನ್ನಯ್ಯ ಕಲಖ್ಯಾತನು
ನನ್ನಯ್ಯ ನಾಗಿದೇವಯ್ಯ ನಮಿತಾಂಡಿಯರು
ಉನ್ನತದ ಮಹಿಮನುದ್ಭಟನೋಹಿಲಗ್ಘಣೆಯ
ಹೊನ್ನಯ್ಯ ಮಾದಾರ ಚೆನ್ನಯ್ಯ ಪರಮಪ್ರಸನ್ನರಾಂಘ್ರಿಯ
ನೆನವುತ ॥ ೩ ॥

ಕಕ್ಕಯ್ಯ ಕಲಿಕಾಮದೇವಯ್ಯ ನಿಜಲಿಂಗ
ಚಿಕ್ಕಯ್ಯ ಚೇಲಾಳಶೆಟ್ಟಿ ಸಿರಿಯಾಳಯ್ಯ
ಒಕ್ಕಲಿಗ ಮುದ್ದಯ್ಯ ವಾಗೀಶ ನೈಸರು ಡಕ್ಕೆಯಾ ಮಾರಯ್ಯನ
ಚಿಕ್ಕಲಿಗೆ ನಾಗಿದೇವಯ್ಯ ಚಂದಿಮರಾಜ
ಬೊಕ್ಕಸದ ಸಂಗಯ್ಯ ಭೋಗಿದೇವಯ್ಯ ನಾ
ಯ್ದಕ್ಕಿಯಾ ಮಾರಯ್ಯ ಅಮರನೀತಿಗಳಡಿಯ
ಅಕ್ಕರಿಂದಲಿ ನೆನವುತ ॥ ೪ ॥

ಬಾವೂರ ಬ್ರಹ್ಮಯ್ಯ ಬಡಿಹೋರಿ ಬ್ರಹ್ಮಯ್ಯ
ಕೋವೂರ ಬ್ರಹ್ಮಯ್ಯ ಕೋಡಗದ ಮಾರಯ್ಯ
ದೀವಿಗೆಯ ಕಲಿಯಾರು ಧೀರನೇಣಾಧೀಶದೇವ ಕಲಿಗಣನಾಥನ
ಸೋವಣ್ಣ ಸೊಡ್ಡಳಯ್ಯನು ಸೋಮಧರನಣುಗ
ರೇವಣ್ಣ ರೇಚಿದೇವನು ರಾಚಮಲ್ಲಯ್ಯ
ಗೋವಿಂದಭಟ್ಟಾರ್ಯ ಗೊಗ್ಗಿದೇವಯ್ಯರಡಿ
ದಾವರೆಗಳಂ ನೆನವುತ ॥ ೫ ॥

ಅಂಕದಾ ಮಾರಯ್ಯ ಆಚಾರ ಭೀಮಯ್ಯ
ಸುಂಕದಾ ಬಂಕತಂದೆಯು ಪಾಲಗುರ್ಜರನು
ಶಂಕರದಾಸಿಮಯ್ಯಂ ಸತ್ಯ ಸರವೂರ ಬಂಕಯ್ಯ ಶಿವರಾತ್ರಿಯಾ
ಸಂಕಣ್ಣ [ಶ್ವಪಚಯ್ಯ] ಸಾಮವೇದಿ[ಗಳು] ಶಿವ
ಲೆಂಕಮಂಚಣ್ಣ ಶ್ರೀಧರಪಂಡಿತಾರಾಧ್ಯ
ಶಂಕರನ ಭಯಕ್ಕೆ ಭಯಂಕರರೆನಿಪ್ಪ ನಿಶ್ಶಂಕರಂಘ್ರಿಯ ನೆನವುತ ॥ ೬ ॥

ಹಡಪದಪ್ಪಣ್ಣಯ್ಯ ಹರಿಗೋಲ ಚವುಡಯ್ಯ
ಪಡಿಹಾರಿ ಬಸವಯ್ಯ ಪಾರೆಯಾ ಸಂಗಯ್ಯ
ನಿಡುಗುಡಿಯ ಮಾರಯ್ಯ ನೀಲಕಂಠಯ್ಯ ವಿಂಗಡದ ಗುಪ್ತಮಂಚಣ್ಣನ
ಹೊಡೆಹುಲ್ಲ ಬಂಕತಂದೆಯು ತೆಲುಗು ಜೊಮ್ಮಯ್ಯ
ಮೃಡನೊಳೇಕಾಂತರಾಮಯ್ಯ ಮೈದುನರಾಮ
ದೃಢ ಲಿಂಗಸಂಗಿ ಸತ್ಯಣ್ಣ ಶಾಂತಯ್ಯಗಳ ಅಡಿದಾವರೆಯ ನೆನವುತ॥ ೭ ॥

ಹಂದಯ್ಯ ಹಂಪಿದೇವಯ್ಯಂ ಹಲಾಯುಧನು
ಸುಂದರದ ನಾಚಯ್ಯ ಸಗರದಾ ಬ್ರಹ್ಮಯ್ಯ

ಕಂದುಲಿಗಿ ನಾಗಿದೇವಯ್ಯ ಕಾಮಣ್ಣಯ್ಯ ಸಿಂಧುಬಳ್ಳಾಳ ನುಲಿಯ
ಚಂದಯ್ಯ ಚಾಮಿದೇವಯ್ಯ ಚರಮೂರ್ತಿ ಸಾ–
ನಂದಮುನಿ ಸಿಂಗಿರಾಜನು ವೀರಸಂಗಯ್ಯ
ನಂದೀಶ ನಗೆಮಾರಿತಂದೆಗಳ ಚರಣಾರವಿಂದ[ಂ] ಗಳಂ ನೆನವುತ ॥ ೮ ॥

ಮೇದರಾ ಕೇತಯ್ಯ ಮೆರೆಮಿಂಡದೇವಯ್ಯ
ಹಾದರದ ಬ್ರಹ್ಮಿತಂದೆಯು ಬಾಲಸಂಗಯ್ಯ
ಮಾದಾರ ಧೂಳಿದೇವಯ್ಯ ಮಳೆಯರಾಜಯ್ಯ ಸೇದಿರಾಜನು ಜೈನರ
ವಾದದೊಳು ಉರಿಲಿಂಗವನು ಮಾಡಿ ಮೆರೆದಾ ವಿ
ನೋದಿ ದೇವರದಾಸಿಮಯ್ಯ ದಸರಯ್ಯ ನಿಜ
ಸಾಧು ಸಜ್ಜನ ಸತ್ಯೇಂದ್ರಚೋಳ ಸಮೇಳರ
ಪಾದಪದ್ಮವ ನೆನವುತ ॥ ೯ ॥

ಜಾತಿಸೂತಕವಳಿದ ಜಾಣ ಮಧುವಯ್ಯನು[ಂ]
ಪ್ರೀತಿಯೊಡಸಂದ ಹರಳಯ್ಯನೇಲೇಶ್ವರದ
ಕೇತಯ್ಯನಮುಗಿದೇವಯ್ಯ ಲದ್ದೆಯ ಸೋಮನಾಥ ವೇಮನಾರಾಧ್ಯರು
[ಸಾ]ತಿಶಯಮೂರ್ತಿ ರಕ್ಕಸ ಬೊಮ್ಮಿತಂದೆ ನಿ
ರ್ಮಿತ ಜೂಜಿನ ಮಾರಿದೇವ ನಿರ್ಗುಣಭವ[ನ]
ನೀತಿ ನಿಜಭಕ್ತಿಯೊಳುವೋತಿರ್ಪ ಪರಮಪ್ರಖ್ಯಾತ
ರಂಘ್ರಿಯ ನೆನವುತ ॥ ೧೦ ॥

ಹೆಂಡದಾ ಮಾರಯ್ಯ ಹೇರೂರ ನಾಗಯ್ಯ
ಪಂಡಿತಾರಾಧ್ಯ ಪಾವನ ಭಕ್ತಿ ಚಾರಿತ್ರ
ಮಂಡಗಿಯ ಮಾದಿರಾಜನು ಮರುಳಸಿದ್ಧೇಶ ಗಂಡುಗತ್ತರಿ ನಾಚನು
ಇಂಡೆಯಾ ಶಾಂತಿದೇವನು ವೀರಗೊಲ್ಲಾಳ
ಚಂಡೇಶ ಚಿಕ್ಕಮಾದಣ್ಣ ಮಸಣಯ್ಯಗಳ
ಖಂಡಶಶಿಧರನನುದರದೊಳಗಾಂತ ಕೀರ್ತಿ
ಪ್ರಚಂಡರಂಘ್ರಿಯ ನೆನವುತ ॥ ೧೧ ॥

ರುದ್ರಪಶುಪತಿ ವೀರಭದ್ರಯ್ಯ ಬಲದೇವ
ಸಿದ್ಧ ಗುರುಭಕ್ತಾಂಡಾರಿಯು ಅನುಪಮ ಧೈರ್ಯ
ಮುಗ್ಧನಿಧಿ ಸಂಗಯ್ಯ ಮೋಳಿಗೆಯ ಮಾರಯ್ಯ ಶ್ರದ್ಧ ಘನ ಘಟ್ಟಿವಾಳ

ಮುದ್ದಣ್ಣ ಮರುಳಶಂಕರದೇವನುರಿಲಿಂಗ
ಪೆದ್ದಣ್ಣ ಪೆರುಮಾಳೆಯರು ಪ್ರೇಮಿದೇವ ಜಗ
ದಾದ್ಯರಂ [ವೇದ್ಯರಂ ಸಾಧ್ಯರಂ] ಕರುಣಾಸಮುದ್ರ
ರಂಘ್ರಿಯ ನೆನವುತ ॥ ೧೨ ॥

ಮಾರಾರಿಯೊಲವಿಂದ ಧಾರುಣಿಯೊಳವತರಿಸಿ
ವೀರಶೈವಾಗಮಾಚಾರ ಮಾರ್ಗದಿ ನಿಂದು
ಸಾರ ಸದ್ಗುರು ಲಿಂಗ ಚರಕೆ ತನು ಮನ ಧನವ ಪೂರಾಯದಿಂ ಸಲಿಸುತ
ಆರುಮತ ಮೊದಲಾದ ಕ್ರೂರದರುಷನಕೆಲ್ಲ
ಬೀರಿ ಪವಾಡ[ಂ]ಗಳ ತೋರಿ ಜಗದೊಳ್ಮೆರೆವ
ಧೀರರಗಣಿತರನ್ಯಾಚಾರಮತವಡಗಿಸಿದ[ವ]ರ ಚರಣವ
ನುತಿಸುತ ॥ ೧೩ ॥

ಇಂತು ಶಿವಗಣರಂಘ್ರಿಯನು ನುತಿಸಿ ಸ್ತೋತ್ರವನು
ಮುಂತೆ ಬರದೋದಿ ಪಠಣೇಯ ಮಾತ್ರದೊಳತುಳ
ಸಂತೋಷದಿಂದೆ ಸ್ವರಗೈದು ಪಾಡಿದರಿಗತ್ಯಂತ ಸುಖ ಭೋಗಂಗಳು
ಚಿಂತೆಯಿಲ್ಲದಲಿಂತು ಸ್ಥಿರಕಾಲ ನಿಜಮುಕ್ತಿ
ಕಾಂತೆಯನು ಕೈಗೊಳಿಸಿ ಕರುಣದಿಂ ರಕ್ಷಿಸುವ
ಶಾಂತಮಹಲಿಂಗಮಲ್ಲೇಶ್ವರನು ಸತ್ಯ ಸಿದ್ಧಾಂತವೆಂದು
ನಂಬಿರುವುದು ॥ ೧೪ ॥

# ಗಣಾಷ್ಟೋತ್ತರದ ಅಕಾರಾದಿ

| | |
|---|---|
| ಶಿವಲೆಂಕ ಮಂಚಣ್ಣ | ೬ |
| ಶ್ರೀಧರಪಂಡಿತಾರಾಧ್ಯ | ೬ |
| ಶೂಲದ ಬ್ರಹ್ಮಯ್ಯ | ೧ |
| ಸಗರದ ಬ್ರಹ್ಮಯ್ಯ | ೮ |
| ಸತ್ಯಣ್ಣ | ೨ |
| ಸತ್ಯೇಂದ್ರಚೋಳ | ೯ |
| ಸರವೂರ ಬಂಕಯ್ಯ | ೬ |
| ಸಾನಂದಮುನಿ | ೮ |
| ಸಾಮವೇದಿ | ೬ |
| ಸಿದ್ಧರಾಮ | ೧ |
| ಸಿರಿಯಾಳಯ್ಯ | ೪ |
| ಸಿಂಗಿರಾಜ | ೮ |
| ಸಿಂಧುಬಲ್ಲಾಳ | ೮ |
| ಸುರಿಗೆಯ ಚವುಡಯ್ಯ | ೧ |
| ಸುಂಕದಾ ಬಂಕತಂದೆ | ೬ |
| ಸುಂದರರದ ನಾಚಯ್ಯ | ೮ |
| ಸೇದಿರಾಜ | ೯೦ |
| ಸೈಚ್ಯ(?) | ೩ |
| ಸೊಡ್ಡಳಯ್ಯ | ೫ |
| ಸೋವಣ್ಣ | ೫ |
| ಹಡಪದಪ್ಪಣ್ಣ | ೨ |
| ಹರಳಯ್ಯ | ೧೦ |
| ಹರಿಗೋಲ(ಅಂಬಿಗ) ಚವುಡಯ್ಯ | ೨ |
| ಹಲಾಯುಧ | ೮ |
| ಹಂದಯ್ಯ | ೮ |
| ಹಂಪಿದೇವಯ್ಯ | ೮ |
| ಹಾದರರದ ಬ್ರಹ್ಮಿತಂದೆ | ೯ |
| ಹೆಂಡದ ಮಾರಯ್ಯ | ೧೧ |
| ಹೇರೂರ ನಾಗಯ್ಯ | ೧೧ |
| ಹೊಡೆಹುಲ್ಲ ಬಂಕತಂದೆ | ೨ |

 

೨೧೫

ತೆಕ್ಕೆಯನಗಲದಿರ್ಲೈಯ್ಯ ಏ ದಮ್ಮಯ್ಯ ಬಾರೆ
ನ್ನಕ್ಕರವಾಗಿ ಅರಸ ದಮ್ಮಯ್ಯ
ತೆಕ್ಕೆಯನಗಲದಿರ್ಲೈಯ್ಯ ದಮ್ಮಯ್ಯ ॥ ಪಲ್ಲ ॥

ಕರಣಂಗಳರೆಯಟ್ಟಿ ಮದಕರಿಗಳ ಸುಟ್ಟು
ಅರಿಷಡುವರ್ಗವ ಪರಿಹರಿಸಿ
ನೆರೆ ಸಪ್ತವ್ಯಸನವ ತುರುಗಳ ಬಂಧಿಸಿ
ಕರುಣದಿಂದಪ್ಪೆನ್ನ ಕರಸ್ಥಲದರಸೆ ॥ ೧ ॥

ಪಿಂತಣ ಜಲ್ಮದಿ ಸ್ತುತಿಸಿದ ಕಾರಣದಿಂದ
ಶಾಂತಲಿಂಗನ ಕಂಡೆ ಕರದಿ
ಮುಂತಣಗತಿಗೆ ಸಾಯುಜ್ಯಪದವೀವ
ಕಂತುಮರ್ದನ ಸಲಹೆನ್ನ ಪ್ರಸನ್ನ ॥ ೨ ॥

ಪಂಚಕಳಸ ಅಯಿರಣಿವೊಡ್ಡಿ ಪ್ರಮಥರ
ಪಂಚಾಕ್ಷರಿ ಸೇಸೆಯ ಮಂತ್ರದಿಂದ
ಸಂಚಲವಳಿದು ದರ್ಭೆಯ ಕಂಕಣವ ಕಟ್ಟಿ
ಪಂಚಮುಖನೆ ನೀನು ಪತಿಯಾದ ಬಳಿಕಿನ್ನು ॥ ೩ ॥

ಎಸಳುಗಳೆಂಟುಳ್ಳ ಮಿಸುಪ ಕಮಲದೊಳು
ಪಸುಪತಿಯೆ ನಿಮ್ಮ ಚರಣವನು
ಕುಸಲದಿಂದರ್ಚಿಪೆ ಶರಣನ ಉರದ ಮೇ
ಲೆಸೆವ ಸದ್ಗುಣವಂತ ಕೇಳು ಪ್ರಾಣಕಾಂತ ॥ ೪ ॥

ಬ್ರಹ್ಮರಂಧ್ರದೊಳಿರ್ಪ ಅಮೃತವ
ನಿರ್ಮಲಮೂರ್ತಿ ನೀ ಸಲಿಸೆನುತ
ನಿರ್ಮೋಹ ಕವಿಸಿದ್ಧವೀರನ ಪೊರೆವ
ಧರ್ಮಸ್ವರೂಪ ಬಾರೈಯ್ಯ ಶಾಂತಯ್ಯ ॥ ೫ ॥
ತೆಕ್ಕೆಯನಗಲದಿರ್ಲೈಯ್ಯ...

 

೨೧೬

ರಾಗ : ದೇಶಿ

ಎನ್ನಿಂದ ಸಿರಿವಂತರಿನ್ಯಾರು ಮರ್ತ್ಯದೊಳು
ಪನ್ನಗಧರ ಜನಕನಾದ ಬಳಿಕ || ಪಲ್ಲ ||

ಗಿರಿಕುವರಿ ಎನ್ನನೊಲವಿಂದ ರಕ್ಷಿಪ ಮಾತೆ
ಕರಿವದನ ಗುಹರೀರ್ವರಣ್ಣೇಂದ್ರರು
ವರ ಭದ್ರಕಾಳಿಯತ್ತಿಗೆಯಕ್ಕಮಹದೇವಿ
ಹಿರಿಯಕ್ಕನಮ್ಮವ್ವೆ ಹೆತ್ತಮ್ಮನು || ೧ ||

ಸೋದರರದ ಮಾವ ಮೈದುನರಾಮನೆನ್ನ ಪ್ರಿ
ಯದ ನಾದಿನಿಯು ಹೇರೂರ ಹೆಣ್ಣು ಕೊಡಗೂಸು
ಸೋದರರದೊಳಕ್ಕನಾಗಲೆ ಗಂಗೆ ನೀಲಮ್ಮ
ಭೇದವಿಲ್ಲದೆ ಪೊರೆವ ಸಲುವ ಅತ್ತೆಯರ || ೨ ||

ದಂಡನಾಯಕ ಚೆನ್ನಬಸವ ಕುಲದೈವವು–
ದ್ದಂಡಲ್ಲಮಪ್ರಭುವೆ ಗುರುರಾಯನು
ಖಂಡೇಂದುಧರ ಶಾಂತವೀರೇಶನೊಚ್ಚ[ತ]
ಗೊಂಡಖಿಲಶರಣರೆ ಮಿತ್ರ ಬಂಧುಗಳು || ೩ ||

❑ ❑

೨೧೭

ರಾಗ : ಸೌರಾಷ್ಟ್ರ

ಮಾಜದೆನ್ನೊಳು ಪೇಳು ಮಾರಾರಿ ನೀ ಕೇಳು
ಸೋಜಿಗವ ಕಂಡೆ ನಿನ್ನೊಳಿಂದು
ರಾಜೀವಾನನೆ ಕೇಳು ನೈಜವನುಸುರುವೆ
[ಮೋ]ಜುವಾಕ್ಯದ ಜಾಣೆ ನಿನ್ನಾಣೆ || ಪಲ್ಲ ||

ಜಡೆಯ ಮಧ್ಯದೊಳೊರ್ವ್ ಮಡದಿಯನಡಗಿಸಿಕೊಂಡು
ಬೆಡಗ ಬೀರುವೆ ಅವಳ್ಯಾರಯ್ಯ ?

ಕುಡಿತೆಗಂಗಳೆ ಕುಂಭಕುಚದ ಕೋಮಲೆಯದು
ಕಿಡಿಗಣ್ಣುಷ್ಣಕೆ ಪೊತ್ತ ಪೊಳೆಯೆ ॥ ೧ ॥

ಪೊಳೆಯಾದೊಡೆ ಪಾದವು ಕರ ಚರಣಗಳುಂಟೆ ?
ಅಳುಕದೆ ಪೇಳು ಎನ್ನೊಳು ನಲ್ಲ
ತಿಳಿಗಾಳಿಯಿಂದೊತ್ತಿದ ಸುಳಿ ತೆರೆ ಕಮಲವು
ಗಳಹಂಸ ಗಮನೆ ಕೇಳೊಲಿದು ॥ ೨ ॥

ಗನ್ನ ಗದುಕು ಬೇಡ ಚನ್ನಿಗನೆನ್ನ ಕೂಡ
ಚೆನ್ನೆಯೊಳ್ ಕೂಡಿರು ಹೋಗಯ್ಯಯ್ಯ
ಸನ್ನುತ ಜನರ ಪೊರೆವ ಗಿರಿರಾಜಪುತ್ರೆ
ನಿನ್ನಾಧವೆ (?) ಗಂಗೆಯವಳು ॥ ೩ ॥

ಬೇರ ಬಲ್ಲರ ಮುಂದೆ ಎಲೆಯ ತೋರಲಾರೆನು
ನೀರ ನಿನ್ನ ನೀತಿ ಪೊಸದಾಯಿತು
ವಾರಿಜಗಂಧಿ ನಿನ್ನನಲ್ಲದೆನ್ನ ಮನವು
ಬೇರೆ ಮತ್ತೋರ್ವಳಿಲ್ಲ ॥ ೪ ॥

ಬಟ್ಟಬೈಲಿಗನೆಂದರಿಯದೆ ನೆರದೆನು
ಮುಟ್ಟದಿರೆನ್ನ ಕೈಯ್ಯ
ದಿಟ್ಟಿಸಿ ನೀವಿರ್ವರೊಂದಾಗಿ ಶಾಂತವೀರೇಶನ
ಮುಟ್ಟಿ ಪೂಜಿಸಿ ಮನಸನಳಿಯಿರೆ ॥ ೫ ॥
❑ ❑

೨೧೮

ನೋಡಿ ಬಾ ನೋಡಿ ಬಾ ಮುದ್ದುಗಿಳಿಯೆ
ನೋಡಿ ಬಾ ನೋಡಿ ಬಾ ॥ ಪಲ್ಲ ॥

ಅಂಗವೆ ಲಿಂಗವಾದಮಳ ಚರಿತನ ಲಿಂಗ
ಸಂಗಿಗಳ ಸಂಗಡದೊಳಿರುವನ
ಜಂಗಮಲಿಂಗಾವತಾರ ಶಂಕರನ
ಮಂಗಳಮೂರ್ತಿ ಮುರಿಗೆಯದೇಶಿಕನ ॥ ೧ ॥

ಬಾಲೆಯ[ರೆ]ಸವ ಜಾಲಕೆ ಸೋಲದವನ
ಕಾಲನ ಗೆಲಿದ ಸುಶೀಲ ಮಹಿಮನ
ಮೇಲೆನಿಸುವ ಮುಕ್ತಿಲೋಲ ವಿರತನ
ಮೂಲೋಕದಯ್ಯ ಮುರಿಗೆಯದೇಶಿಕನ ॥ ೨ ॥

ಆದಿ ಷಟ್ಸ್ಥಲದ ಹಾದಿ ತೋಱಿಸಿದನ
ಬೋಧಿಸಿ ಶರಣಸಂತತಿಯ ಪಾಲಿಪನ
ವೇದವೇದಾಂತಾದಿ ಶಾಸ್ತ್ರಕೋವಿದನ
ಮೂದೇವರಾಧ್ಯ ಮುರಿಗೆಯದೇಶಿಕನ ॥ ೩ ॥

ಕೋಪ ಮದವನತಿಗಳದ ಗರುವನ
ತಾಪತತಿಗೆ ನಿಲುಕದ ನಿರುಪಮನ
ಪಾಪರಹಿತ ಪುಣ್ಯಪುಂಜ ರಂಜಿತನ
ಶ್ರೀ ಪರಂಜ್ಯೋತಿ ಮುರಿಗೆಯದೇಶಿಕನ ॥ ೪ ॥

ಅಂತರಂಗದೊಳು ಪೂಜಿತ ಪುರಹರನ
ಬೆಂತರ[ರ]ಹಿತ ಶಿವಯೋಗಿ ಚೆನ್ನಯನ
ಸಂತತ ಸರಸಾನುಭಾವಭರಿತನ
ಶಾಂತವೀರೇಶ ಮುರಿಗೆಯದೇಶಿಕನ ॥ ೫ ॥

☐ ☐

೨೧೯

೯೬. ಸಕೀಲದ ಜೋಗುಳದ ಪದ

ಜೋ ಜೋ ಎನ್ನ ಇಷ್ಟಲಿಂಗೇಶ
ಜೋ ಜೋ ಎನ್ನ ಪ್ರಾಣಲಿಂಗೇಶ
ಜೋ ಜೋ ಎನ್ನ ಭಾವಲಿಂಗೇಶ ಮೂರು
ಕಾಯ ಸ್ವೀಯತ ಗುರುಸಿದ್ಧಲಿಂಗೇಶ ಜೋ ಜೋ ॥ ೧ ॥

ಜೋ ಜೋ ಎನ್ನಾಚಾರ ಗುರುವೆ
ಜೋ ಜೋ ಎನ್ನ ಶಿವಜಂಗಮದಿರವೆ
ಜೋ ಜೋ ಎನ್ನ ಪ್ರಸಾದ ಮಹದರುವೆ
ಜೋ ಜೋ ಎನ್ನ ವರದಿಷ್ಟ ಗುರುವೆ ॥ ೨ ॥

ವೃತ್ತವು ಕಟಿಯು ವರ್ತುಳವೆನಿಪ
ಮತ್ತೆ ಗೋಮುಖ ನಾಳ ಮಸ್ತಕವೆನಿಪ
ನಿತ್ಯ ನಿರ್ಮಲ ಷಡುಸ್ಥಾನಗಳೆನಿಪ ಹೊಂದಿ
ದತ್ಯಂತ ಷಡ್ಬ್ರಹ್ಮ ಮಹದಿಷ್ಟಲಿಂಗ ಜೋ ಜೋ ॥ ೩ ॥

ತಾರಕ ದಂಡಕ ಕುಂಡಲಾಕೃತಿಯ
ತಾರೇಶ ದರ್ಪಣ ಜೋತಿರಾಕೃತಿಯ
ಸಾರ ಷಡಕ್ಷರಮಂತ್ರದ ನೆಲೆಯ ಕೂಡಿ
ಭೋರನೆಯೊಪ್ಪುವ ಮಹದಿಷ್ಟಲಿಂಗ ಜೋ ಜೋ ॥ ೪ ॥

ಚಕ್ರವಾಧಾರ ಸ್ವಾಧಿಷ್ಠ ಚಕ್ರ
ಚಕ್ರ ಮಣಿಪೂರಕನಾಹತ ಚಕ್ರ
ಚಕ್ರ ವಿಶುದ್ಧ್ಯಾಜ್ಞೆ ವರ ಷಡುಚಕ್ರ ಇಂತೀ
ಚಕ್ರಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ ॥ ೫ ॥

ಭಕ್ತ ಮಾಹೇಶ ಪ್ರಸಾದಿಗಳಂಗಮುಸುಲಿಂಗಿ
ಶರಣೈಕ್ಯ ಸಂಗ
ಪೃಥ್ವಿ ಜಲಾಗ್ನಿ ಮಾರುತವಿಯದಂಗ ಆತ್ಮ
ಗೊತ್ತುಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ ॥ ೬ ॥

ಹಸ್ತ ಹಸ್ತ ಸುಚಿತ್ತ ಸುಬುದ್ಧಿಯು ಹಸ್ತ
ಹಸ್ತ ನಿರಹಂಕಾರ ಸುಮನ ಹಸ್ತ
ಹಸ್ತ ಸುಜ್ಞಾನ ಸದ್ಭಾವದ ಹಸ್ತ ಷಡು
ಹಸ್ತಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ ॥ ೭ ॥

ಹಿಂಗದಾಚಾರಲಿಂಗ ಗುರುಲಿಂಗ
ಸಂಗ ಶಿವಲಿಂಗ ಜಂಗಮಲಿಂಗ
ಸಾಂಗ ಪ್ರಸಾದಲಿಂಗ ಮಹಲಿಂಗ ಷಡು
ಲಿಂಗಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ ॥ ೮ ॥

ಮುಖಘ್ರಾಣ ಮುಖಜಿಹ್ವೆ ಮುಖನೇತ್ರ
ಮುಖತ್ವಕ್ಕು ಮುಖಶ್ರೋತ್ರ ಗೋಪ್ಯದಮುಖವ

ಸುಖಮಯ ಸುಖ ಷಡುತೃಪ್ತಿಯನರಿವ ಷಡು
ಮುಖಗಳನೊಳಕೊಂಡ ಮಹದಿಷ್ಟಲಿಂಗ ಜೋ ಜೋ || ೯ ||

ಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿಯ
ಶಕ್ತಿ ಇಚ್ಛಾಶಕ್ತ್ಯಾದಿ ಶಕ್ತಿಯ
ವ್ಯಕ್ತದ ಪರ ಚಿಚ್ಛಕ್ತಿಯ ನೆಲೆಯ ಷಡು
ಶಕ್ತಿಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ || ೧೦ ||

ಭಕ್ತಿಯು·ಶ್ರದ್ಧಾ ನೈಷ್ಠಿಕ ಭಕ್ತಿಯ
ಭಕ್ತಿಯು ಸಾವಧಾನ ಸುಭಾವ ಭಕ್ತಿಯು
ಭಕ್ತಿಯಾನಂದ ಸಮರಸಭಕ್ತಿಯು ಷಡು–
ಭಕ್ತಿಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ || ೧೧ ||

ಸುಗಂಧ ಪದಾರ್ಥ ಸುರಸಪದಾರ್ಥ
ಸೊಗಯಿಪ ಸುರೂಪು ಸುಸ್ಪರ್ಶನಪದಾರ್ಥ
ಮಿಗಿಲಾದ ಸುಶಬ್ದ ಸುತೃಪ್ತಿಪದಾರ್ಥ ಷಡುಪದಾ
ರ್ಥಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ || ೧೨ ||

ಗಂಧ ಪ್ರಸಾದ ರಸಪ್ರಸಾದ
ಚಂದದ ರೂಪು ಸ್ಪರ್ಶನ ಪ್ರಸಾದ
ಬಂಧುರ ಶಬ್ದ ತೃಪ್ತಿಪ್ರಸಾದ ಷಡುಪ್ರ
ಸಾದಾರ್ಥಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ || ೧೩ ||

ಕಲೆಯು ನಿವೃತ್ತಿ ಕಲೆ ಪ್ರತಿಷ್ಠೆಯ–
ಕಲೆ ವಿದ್ಯಾಕಲೆ ಶಾಂತಿ ಶಾಂತತೀತೆಯ
ಒಲವಿನ ಕಲೆ ಶಾಂತತೀತ್ತೋರಕಲೆಯ ಷಡು
ಕಲೆಗಳನೊಳಕೊಂಡ ಮಹದಿಷ್ಟಲಿಂಗ ಜೋ ಜೋ || ೧೪ ||

ಸಾದಾಖ್ಯ ಕರ್ಮ ಕರ್ತೃ ಸಾದಾಖ್ಯ
ಸಾದಾಖ್ಯ ಮೂರ್ತಿಯಮೂರ್ತಿ ಸಾದಾಖ್ಯ
ಸಾದಾಖ್ಯ ಶಿವಮಹಾಮಹಿತ ಸಾದಾಖ್ಯ ಷಡು–
ಸಾದಾಖ್ಯ[ಗಳ]ನೊಳಗೊಂಡ ಮಹದಿಷ್ಟಲಿಂಗ ಜೋ ಜೋ || ೧೫ ||

ಲಕ್ಷಣ ಸತ್ತು ಚಿತ್ತು ಲಕ್ಷಣವ
ಲಖಣಾನಂದ ನಿತ್ಯ ಲಕ್ಷಣವ
ಲಕ್ಷಣ ಪರಿಪೂರ್ಣಖಂಡಲಕ್ಷಣವ ಷಡು-
ಲಕ್ಷಣವನೊಳಕೊಂಡ ಮಹದಿಷ್ಟಲಿಂಗ ಜೋ ಜೋ ॥ ೧೬ ॥

ಸಂಜ್ಞೆಯು ಪರವೆಂಬ ಗೂಢ ಸಂಜ್ಞೆಯ
ಸಂಜ್ಞೆ ಶರೀರ ಸುಲಿಂಗಕ್ಷೇತ್ರ ಸಂಜ್ಞೆಯು
ಸಂಜ್ಞೆಯನಾದಿವನ್ನಹದ ಸಂಜ್ಞೆಯ ಷಡು
ಸಂಜ್ಞೆಯನೊಳಕೊಂಡ ಮಹದಿಷ್ಟಲಿಂಗ ಜೋ ಜೋ ॥ ೧೭ ॥

ಬೋಧಿಪ ಋಗ್ವೇದೆಜುರ್ವೇದವ
ವೇದ ಸಾಮಥರ್ವಣೆನಿಪ ವೇದವ
ಸಾಧಿಪ ಅಜಪೆಗಾಯತ್ರಿವೇದವ ಷಡು
ವೇದಗಳೊಳಕೊಂಡ ಮಹದಿಷ್ಟಲಿಂಗ ಜೋ ಜೋ ॥ ೧೮ ॥

ಇಂತು ತೊಂಬತ್ತಾರು ಸಕೀಲವನೆಲ್ಲ
ಸಂತತ  ಬೆರದು ಮೆರವುದ ಬಲ್ಲ
ಶಾಂತ ಸದ್ಗುರು ಸಿದ್ಧಲಿಂಗೇಶನೆಲ್ಲ ಎ-
ನ್ನಂತರಂಗದೊಳಿರ್ದವನಿಯ ರಕ್ಷಿಪುದುದೆಲ್ಲ ಜೋ ಜೋ ॥ ೧೯ ॥

ಜೋ ಜೋ ಗುರುಲಿಂಗ ನಿಜಾಂಗ
ಜೋ ಜೋ ಶಿವಲಿಂಗ ಚಿದಂಗ
ಜೋ ಜೋ ಚರಜಂಗಮಲಿಂಗ  ನಿತ್ಯ
ಜೋ ಜೋ ಎನ್ನ ವರದಿಷ್ಟಲಿಂಗ ಜೋ ಜೋ ॥ ೨೦ ॥

ಜೋ ಜೋ ಗುರುಶಾಂತವೀರೇಶ
ಜೋ ಜೋ ಗುರುಚೆನ್ನಬಸವೇಶ
ಜೋ ಜೋ ಗುರುಮಹಂತದೇವೇಶ ನಿತ್ಯ
ಜೋ ಜೋ ಗುರುಶಾಂತಮಲ್ಲೇಶ ಜೋ ಜೋ ॥ ೨೧ ॥

ಗುರುಸಿದ್ಧಲಿಂಗನ ಕರುಣವ ಪಡದು
ಗುರುಲಿಂಗಜಂಗಮ ಭಕ್ತಿಯ ತಳೆದು

ಪರಿಣಾಮಿಸುವ ಭಕ್ತ ಮಾಹೇಶ್ವರರೊಲಿದು ನಮ್ಮ
ಪೊರೆವುದು ಪರಿಭವಭವಗಳ ಹರಿದು ಜೋ ಜೋ ॥ ೨೨ ॥

ಇಂತು ತೊಬತ್ತಾರುಸಕೀಲದ ಪದವ
ಸಂತತ ಬರದೋದಿ ಅರ್ಥೈಸಿ ಕೇಳುವ–
ರಂತರಂಗದೊಳಿರ್ದು ಚಿಂತೆಯು ಹರಿವ ನಮ್ಮ
ಶಾಂತ ಸದ್ಗುರು ಸಿದ್ಧಲಿಂಗೇಶದೇವ ಜೋ ಜೋ ॥ ೨೩ ॥

❑ ❑

೨೨೦.

ಗೋಪತಿ ಶಿವಕರ ಗೋಕರ್ಣಕುಂಡಲ
ಗೋಪವಾಹನ ಗೋಧರನೆ
ಗೋಪದವಾಂತ ಗೋಪದಾರ್ಚಿತದೇವ
ಗೋವಾಸಿ ದಿವಿಜರೊಂದಿತನೆ ॥ ೧ ॥

ಹರಿಯಸತಿಯೊಳೊಡಹುಟ್ಟಿದವನ ನುಂಗಿ
ತಿರುಗುಗುಳ್ದವನ ವೈರಿಯನು
ನೆರೆವಾಹನದಿಂದೆ ಮೆರೆವಾರುಮುಖದವನ
ವರ ಪಿತಗೆರಗಿ ವಂದಿಸುವೆ ॥ ೨ ॥

ಹರಿಯಹಾರವ ಮಾಡಿಕೊಂಡ ಹರಿಯರರು
ವೆರಳುಂಗುರಕೆ ಮನವೆಳಸಿ
ಧರಿಸಿ ಮೆರವ ದೇವಿಗರೆಮೆಯ್ಯನಿತ್ತ ಶಂ
ಕರಲಿಂಗ ಸಲಹು ಸತ್ಯದೊಳು ॥ ೩ ॥

ನಾಗಾಸುರನ ಚರ್ಮಾಂಬರ ದೇವನೆ
ನಾಗಕಂಕಣ ನಾಗಧರನೆ
ನಾಗಲೋಚನ ಲಲಾಮದಿ ಸುಟ್ಟವನ ಭಸಿತವಿಟ್ಟ
ನಾಗಭೂಷಣ ಸಲಹೆನ್ನ ॥ ೪ ॥

ಲಲಾಮಪತಿಯ ಪಿತನ ನೇತ್ರಾರ್ಚಿತಪಾದ
ಲಲಾಮ ವಹನ ಲಲಾಮ

ಲಲಾಮನೇತ್ರ ಎನ್ನ ಕರಸ್ಥಲದಯ್ಯ
ಲಲಾಮವಿತ್ತು ಸಲಹೆನ್ನ ॥ ೫ ॥

ಹರಿಯ ಹದಿನಾರನು ಹಸಮಾಡಿಕೊಂಡು ತಾ
ಮೆರೆವ ಮನ್ಮಥನ ಸುಟ್ಟವನ
ಉರೆ ಕರಸ್ಥಲಕೆನ್ನ ಗುರುತೋರಿಕೊಟ್ಟಗೆ
ನೆರೆ ನಂಬಿದೆನು ಶಂಕರನ ॥ ೬ ॥

ಸತ್ವಪತಿಯ ಸತ್ವ ಮುಡಿಯೊಳಗಿಂಬಿಟ್ಟು
ಸತ್ವವಧರನ ಪೊತ್ತವನ
ಸತ್ವಚಾಪಕೆ ಶರನಿಟ್ಟು ಹರಿಬಾಣದಿಂ
ಸತ್ವದಿಂದೆಚ್ಚ ತ್ರಿಪುರವ ॥ ೭ ॥

ಕಾಳಂಬವಾಹನನ ಸಿರವ ಚಿವುಟಿದದೇವ
ಕಾಳಂಬಸಖನೇತ್ರ ಗಾತ್ರ
ಕಾಳಂಬನ ವೈರಿಯ ಆಭರಣ ತ್ರಾಣ
ಕಾಳಂಬನೇತ್ರಗೆ ಚಕ್ರವಿತ್ತೆ ॥ ೮ ॥

ಮಾರನ ಪಿತನ ಮಡದಿಯನುಜನ ಪೆತ್ತ
ಸಾರ ಹೃದಯಳ ಸವತಿಯ
ತೋರದೊಡೆಯೊಳಿಟ್ಟು ಮೂರೂರ ನೆರೆ ಸುಟ್ಟು
ತೋರಿದೆನ್ನಯ ಕರಸ್ಥಲದಿ ॥ ೯ ॥

ಹರಿಯವಾಹನನ ಮಾತೆಯ ಸೆರೆವಿಡಿದೊಯಿದು
ತರುವನದೊಳಗಿಟ್ಟವನ
ಪುರವನು ಸುಟ್ಟವನ ತಂದೆಯಸಖನೇತ್ರದಿಂ
ಮೆರೆವ ಶಂಕರನೆ ಸಲಹೆನ್ನ ॥ ೧೦ ॥

ಮಾವನಳಿಯನ ಪಿತನಸತಿಯನುಜನ
ಭಾವದಣ್ಣನ ಸಖನಾದ
ತಾವರೆಗಣ್ಣನ ತನುಜನ ಶಿರಕರ
ದೇವ ನೀನಹುದೊ ಲಿಂಗಯ್ಯ ॥ ೧೧ ॥

ಪಂಕಜಮುಖಿ ಪಾರ್ವತಿಯ ಪತಿಯೆ ಮೀ
ನಾಂಕನ ಸುಟ್ಟ ಭಸಿತವ
ಶಂಕೆಯಿಲ್ಲದೆ ಸರ್ವಾಂಗಕ್ಕೆ ಧರಿಸಿದ
ಶಂಕರನೆ ಎನ್ನ ರಕ್ಷಿಪುದು ॥ ೧೨ ॥

ಪುಂಡರೀಕಾಜನ ಶಿರಕರಪಾತ್ರನೆ
ಪುಂಜರೀಕನ ಸಖನೇತ್ರ
ಹೆಂಡಿರು ಮಕ್ಕಳು ಸೊಸೆ ದಾಸಿ ಬಂಟನಿಂ
ತೊಂಡರಾದವರಿಗೆರಗುವೆಂ ॥ ೧೩ ॥

ದಶಾವತಾರದಿಂದೆಸೆವನ ಸಿಸುವನು
ನೊಸಲಕಣ್ಣಿಂದೆ ಸುಟ್ಟವನೆ
ಬಸವ ಮುಂತಾದ ಭಾವದ ಭಕ್ತರೆಡಕಾದ
ಕುಶಲ ನೀನಹುದೊ ಲಿಂಗಯ್ಯ ॥ ೧೪ ॥

ಭೀಮನನುಜನೊಳು ಭೀಮ ರೂಪಿಲಿ ಕಾದಿ
ಭೀಮನ ಬಿಲ್ಲ ಪೆಟ್ಟಿನೊಳು
ಪ್ರೇಮದಿಂ ನೊಂದೆನೆಂದು ಕರದೊಳಿಡಿ
ದಾ ಮಹಿಮಂಗೆರಗುವೆನು ॥ ೧೫ ॥

ಕ್ಷೀರಾಬ್ಧಿಯೊಳು ಪುಟ್ಟದ ಲಕ್ಷ್ಮಿಯನುಜನ
ಮೂರರೊಳೊಂದು ನೇತ್ರವನು
ತೋರಿ ಮೆರೆದದೇವ ವೀರಶೈವದಭಾವ
ದಾರೂಢನಹುದೊ ಲಿಂಗಯ್ಯ ॥ ೧೬ ॥

ಕಂಸಹಾರನ ಕರ್ಣಕುಂಡಲ ಧರಿಸಿದ
ಕಂಸಗಮನ ನಿಜಪಿತಗೆ
ಕಂಸಸಖನೇತ್ರಗಾತ್ರನ ಕರದೊಳಗಾಂತ
ಕಂಸತೇಜಂಗೆರಗುವೆನು ॥ ೧೭ ॥

ಹರಿನಾಲ್ಕು ಮೂರನು ಹರುಷದಿಂ ರಥಕಿಟ್ಟು
ಹರಿವೇಗದಿಂ ಚರಿಸುವನ

ನೆರೆ ಧರಿಸಿದವನ ನೇಮದ ಕರದೊಳಗಾಂತ
ಪರಮಭಕ್ತಗೆರಗುವೆನು ॥ ೧೮ ॥

ಶಿಖಿಯನಯನನ ಕೊದವನೆಂದು ಕೋಪದೆ
ಶಿಖಿಕುಂಡವ ರಚಿಸಿದನ
ಮುಖವ ಬದಲಿಸಿಟ್ಟವನಣ್ಣನ ನಿಜಪಿತ
ನೆನ್ನ ಕರಸ್ಥಲದ್ಯೆಯ್ಯ ॥ ೧೯ ॥

ವನಧರನ ಕಂಡು ಪಾತ್ರವನಾಡು
ವನವೈರಿವೈರಿಯಾದನ
ವನಜನಯನಾರ್ಚಿತಪಾದವುಂಟಾದ
ತ್ರಿಣೆಯನೆನ್ನ ಕೈವಶವಾದ ॥೨೦॥

ಕಮಲಬಾಣನ ಸುಟ್ಟ ಕ್ರಮದಿಂದೆ ಭಸಿತವ
ವಿಮಲಾಂಗದೊಳು ಧರಿಸಿದನೆ
ಸುಮನಸ ವಂದಿತ ಸುಗುಣ ಸ್ವಯಂಜ್ಯೋತಿ
ಉಮಾವರನೆ ಸಲಹೊ ಶಾಂತೇಶ ॥ ೨೧ ॥

❑ ❑

೨೨೧

ಹತ್ತುಸಾವಿರಶಾಸ್ತ್ರವನೋದಿ ಫಲವೇನು
ಚಿತ್ತದಲಿ ಲಿಂಗ ನಾಟ ನೆಲೆಗೊಳ್ಳದನಕ ॥ ಪಲ್ಲ ॥

ಕಡು ಚಪಳತೆಯಿಂದ ಬಹುಪಾತಕನಾಗಿ
ನುಡಿದಲ್ಲಿ ಫಲವೇನು ಬಯಲದ್ವೈತವ ॥ ೧ ॥

ಅಗಣಿತ ನದಿಯು ಇರೆ ಜಲವೆಲ್ಲ ಸಮವೆಂದು
ಅಗಳ ನೀರನೆ ಪೊಕ್ಕು ಮೊಗದೊಳೆವಂತೆ ॥ ೨ ॥

ಘನ ಶಾಂತೇಶ ನಿಮ್ಮನರಿಯದವನ ಭಕ್ತಿಗೇನು ಕಡಮೆ
ಅಗಳ ದಾಂಟಿ ಝುರಿಯ ಬಿದ್ದಂತೆ ॥ ೩ ॥

❑ ❑

೨೨೨

ಬಸವನೆ ಗುರುವೆನಗೆ ಸಂಗನ
ಬಸವನೆ ಪರ[ವೆನಗೆ] ॥ ಪಲ್ಲ ॥

ಭಕ್ತಿಯ ಮಾಡೆಂದು ಸಾರಿದನು ನಿಜ
ಮುಕ್ತಿಯಿದೆಯೆಂದು ತೋರಿದನು
ತೀರ್ಥಪ್ರಸಾದವನರುಹಿದನು ಶಿವ
ಶರಣರ ಚರಣದೊಳಿರಿಸಿದನು ॥೧॥

ಹರಣದಿ ಲಿಂಗವ ಧರಿಸಿದನು
ಕರಣೇಂದ್ರಿಯಗಳ ಕೆಡಿಸಿದನು
ಪರಮ ಪದವನರುಹಿದನು ಶಿವ
ಶರಣರ ಚರಣದೊಳಿರಿಸಿದನು ॥ ೨ ॥

ನಾದ ಬಿಂದು ಕಳೆಗತಿಶಯನು
ವೇದಪುರಾಣಕ್ಕೆ ನಿಲುಕದನು
ಮೂದೇವರುಗಳ ಕಾಣ್ಬುದನು
ಭೇದಿಸಿ ಕೊಟ್ಟನು ಶಾಂತೇಶ್ವರನು ॥ ೩ ॥

❑ ❑

೨೨೩

ರಾಗ : ದ್ವಿಜಂತಿ

ಪಾಲಿಸು ಪರಮದಯಾಳು ಪಾವನ ಗುರು
ಮೂಲಮೂರುತಿ ಮುನಿಲೋಲನೆ
ಕಾಲಗೆ ಭಯವೀವ ಮುರಿಗ್ಯಾ ಶ್ರೀ ಶಿವಲಿಂಗಾ
ಪಾಲಿಸು ಎನ್ನಯ ಸ್ತುತಿಯನು ಕರುಣದಿ
ಪಾಲಿಸು ಪರಮದಯಾಳು ಪಾವನ ಗುರು
ಮೂಲಮೂರುತಿ ಮುನಿಲೋಲನೆ ॥ ಪಲ್ಲ ॥

ಆನಂದನಾಮ ವತ್ಸರ ಚೈಯಿತ್ರ ಶುದ್ಧದ
ಭಾನು ಉದಯ ಭರ್ಗವಾಸರ

ನೀನು ಪ್ರತಿಪದೆಯಲ್ಲಿ ಬಯಲನ್ನೈದಿದೆ ದೇವ
ಮಾನಸದಿಯೆ ನಾನು ಮರೆಯದೆ
ಧ್ಯಾನಿಸುತಿರುವೆನು ಆನಂದಸಿಂಧುವೆ
ಕೂನೇನು ಅರಿಯೆನು ಖುಹಕಿ ನಾನೆಲೆ ದೇವ
ಪಾಲಿಸು ಪರಮದಯಾಳು ಪಾವನ ಗುರು
ಮೂಲಮೂರುತಿ ॥ ೧ ॥

ಬಂದ ಭಕ್ತರು [ಬಾಗಿಲಲಿ] ನಿಂದಿಹುದೀಗಳು
ಚಂದದಿ ನೋಡ್ಯೆನ್ನ ತಂದೆಯೆ
ಸಂದೇಹವಿಲ್ಲದೆ ವರವಿತ್ತು ಪಾಲಿಸು
ಸುಂದರಾಂಗನೆ ಮುನಿಪುಂಗ[ವ]ನೆ
ಬಂದೆನು ನಾನು ದಯದಿಂ ಕರೆದು ನೀನು
ಹೆಂದದಾನಂದವೀವೆನು ಭಯ ಬ್ಯಾಡೆಂದು
ಪಾಲಿಸು ಪರಮದಯಾಳು ॥ ೨ ॥

ಭಾವ ಸುದ್ಧದಿ ಭಜಿಸುವ ಭಕ್ತವಾಸನೆ
ಮಾವರಾಜನ ಗುಣವಿನಾಶನೆ
ಜಾವ ಜಾವಕ್ಕೆ ನಿಮ್ಮ ಚರಣವ ಸ್ಮರಿಸುವ
ಸಾವಧಾನರಿಗಿಷ್ಟವೀವನೆ
ಪಾವನ ಮೂರುತಿ ಪರತರ ಶಿವಪೂಜೆ
ದೇವ ವೃದ್ಧಾಖ್ಯನ ಬಿಡದೆ ಪೊರೆವುದೈಯ್ಯ
ಪಾಲಿಸು ಪರಮದಯಾಳು ಪಾವನ ಗುರು ॥ ೩ ॥
❑ ❑

೨೨೪

ರಾಗ : ನೀಲಾಂಬ[ರಿ]

ಕಾಂತೆ ಕರದು ತಾರೆ ಕಾಂತನ ನಾ ತಾಳಲಾರೆ
ಚಿಂತೆ ಬಿಡಿಸೆ ನನ್ನ ಮನಸಿನ
ಭ್ರಾಂತಿ ಬಿಡಿಸಿ ಕೊಡುವಂಥ ಹೊಂತಕಾರಿ ಕಾಮಶರಕೆ
ಇಂತಾ ಗುರಿಯ ಮಾಡುದೊಳ್ಳಿತೆ ನೀ ಕೇಳೆ ವನಿತೆ ॥ ಪಲ್ಲ ॥

ಸಾರ ಹೃದಯಧೀಶನಂಗವ ಕೊಡದೆ ಈಗ
ಸೂರೆಯಾದೆ ಕ್ರೂರ ಕಾಮುಗೆ
[ಸಾ]ರಿ ಅವನ ಬಳಿಗೆ ಬ್ಯಾಗದಿಂದೆ ವನಿತೆ ನೀನು
ಶೂರಗೆರೆಗಿ ಪೇಳೆ ಮಾತನು
ಧೀರತನದಿ ಬಂದು ತಾನು
ಪೋರಿ ನನ್ನ ಕುಚವಮುಟ್ಟಿ–
ಪಾರ ಸುಖವ ಕೊಟ್ಟು ಪೋಗದೆ ಹೀಗಿರುವುದೇನೆ ? ॥ ೧ ॥

ಜಾರತನದ ನಾರೆರಲ್ಲಿಯೇ ತಾ ಸುಗುಣೆಯೆಂದು
ತೋರಿ ಮೆರೆವ ಗ[ರ್ವ]ದಲ್ಲಿಯೇ
ಶೌರಿ ಗೆಲುವ ಎಂದ ಕಾಂತನು ತಾ ಬಾರದಾದ
ಮಾರನಾನೆ xxಕೆ ತಾರೆಲೆ
ಮೂರು ಮನೆಯ ಮಧ್ಯದಲ್ಲಿ
ಧೀರ ತಾನು ಬಂದು ನೆರೆಯೆ
ಕಾಂತೆ................. ॥ ೨ ॥

ಮೂರು ಮೊದವೆ ರತ್ನ ತೋರಿದ ಅಂತ್ಯಲ್ಲ ಕೂಡಿ
ಬ್ಯಾರೆನೊಂದನೆಸಗಿ ಸಾರಿದ
ನಾರಿ ಅಧರ ನಾರ ಮಾಡಿದ ಮತ್ಯಲ್ಲ ತಾನು
ಸಾರವ್ಯಾಕೆಯೆಂದು ಇರಿಸಿದ
ಪೋರಿ ನಿನಗೆ ಒತ್ತೆಯೆಂದು
ನಾರಿ ಕರಕೆ ಕೊಟ್ಟು ಮೆರೆದ
ಪೂರ ಗಾರುಡವನು ಬೀರಿದ ಅತ್ತಿತ್ತ ಸಾರಿದ ॥ ೩ ॥

ತನ್ನ ಕರುಣ ಇಲ್ಲವೇನೆ ಸಖಿ ಇಂತಾದುದ್ಯೆನಗೆ
ಇನ್ನು ಮನಕೆ ಮಚ್ಚಿದ[ವ]ನಿಗೆ
ಸನ್ನುತದಲಿ ಸಾರ್ವಭೌಮನು ಘಾತಕವ ಮಾಡಿ
ನನ್ನ ಜರಿದು ಪೋಪುದೊಳ್ಳಿತೆ ?
ಮನ್ನಣೆಯಲಿ ಬಂದು ತಾನು
ಎನ್ನ ಕರವ ಪಿಡಿದರೊಳಿತು
ಚೆನ್ನ[ನಿ]ನಗೆ ಪೇಳ್ವೆ ಕೇಳೆಲೆ ಹಿರಿಯರೊಳು ದೂರುವೆ ॥ ೪ ॥

ಧಾತ್ರೆಯುಪರಿಯಲ್ಲಿ ಶೋಭಿಪ ತಾವರೆಯ ಒಳಗೆ
ಚಿತ್ರಧಾರಿ [ವ]ರವ ನೀಡ
ಆರ್ತಿಗೃಹದ ಅಂತರಾಳದಿ ಮಾರ್ಪೊಳೆವುತಿರುವ
ಸೂತ್ರಧಾರಿಯೇಕೆ ಬಾರನೆ ?
ಗಾತ್ರಿಮರೆವ ಗೋತ್ರಸ್ಥಾನದಲಾತ್ಮ ನುಡಿಯೆ
ಕಾಂತೆ ನೀನು ಕರ್ತು ಶಿವಪೂಜೇಶನಡಿಯ
ತೋರುವುದು ನೀನು ಕಾಂತೆ ಕರದು ॥ ೫ ॥

❑ ❑

೨೨೫

ಕಂಡೆನು ಶಿವಲಿಂಗವ ಗಣಂಗಳಪಾದವ ನೆನವುತ ॥ ಪಲ್ಲ ॥

ದಂಡನಾಯಕ ಬಸವೇಶನಪ್ಪಣ್ಣ ಬ್ರ–
ಹ್ಮಾಂಡಭರಿತ ಪ್ರಭುವಿನ ಪಾದವ
ಮಂಡೆಯೊಳಗೆ ಪೊತ್ತು ಮರಣ ಭಯವ ಗೆದ್ದು
ಕೊಂಡಾಡಿ ಅನುದಿನ ನೆನವುತ ॥ ೧ ॥

ಮೋಳಿಗೆ ಮಾರಯ್ಯ ಮಡಿವಳ ಮಾಚಯ್ಯ
ಏಲೇಶ್ವರದ ಕೇತಯ್ಯನ
ಹೇಳಲೆನ್ನಳವಲ್ಲ ಮಳೆಯರಾಜಯ್ಯನ
ಆಳಿನಾಳೆಂದು ನೆನವುತ ॥ ೨ ॥

ಚಂದಯ್ಯ ಕಲಿಕಾಮದೇವನು ನಿಜಗುಣ
ಚಂದಿಮರಸನಜಗಣ್ಣನ
ಹಂದಯ್ಯ ಸಿಂಧುಬಲ್ಲಾಳನ ಮೋಹದ
ಕಂದನು ನಾನೆಂದು ನೆನವುತ ॥ ೩ ॥

ಕಕ್ಕಯ್ಯ ಕಣ್ಣಪ್ಪ ಕಲಿಗಣನಾಥನು
ಚಿಕ್ಕಲಿಗೆಯ ನಾಗಮ್ಮಯ್ಯನ
ರಕ್ಕಸಬ್ರಹ್ಮಯ್ಯ ನಿಜಲಿಂಗಚಿಕ್ಕನ
ಅಕ್ಕರದಿಂದಲಿ ಕೊಂಡಾಡುತ ॥ ೪ ॥

ಕನ್ನದಮಾರಯ್ಯ ಕಲಕೇತಬ್ರಹ್ಮಯ್ಯ
ಸೊನ್ನಲಿಗೆಯ ಸಿದ್ಧರಾಮಯ್ಯನ
ಕಿನ್ನರಯ್ಯನು ಕೇಶಿರಾಜನು ಮಾದರ
ಚೆನ್ನನ ಪದವ ನೆನವುತ || ೫ ||

□ □

೨೨೬

ಬಾರೊ ಬೋ ಇಷ್ಟಲಿಂಗ ನೀ ಎನ್ನ ಧ್ಯಾನಕೆ
ಬಾರೊ ಬಾ ಶಿವಲಿಂಗ
ಪರಮಪಾವನ ನಂದಿಯನೇರಿ
ವರ ಭೃಂಗೀಶ್ವರ ಪ್ರಮಥರುಗೂಡಿ
ಹರಗಣ ತಿಂಥಿಣಿ ಉಘೆ ಉಘೆ ಎನುತಲಿ
ನಿರುತ ಎನ್ನ ಶ್ರೀಕರಕಮಲಕೆ
ಬಾರೊ ಬಾ ಇಷ್ಟಲಿಂಗ ||೧ ||

ಕಾಲ ಕರ್ಮವಿನಾಶ
ಶೂಲಧರ ತ್ರಿಪುರಾರಿಯೆ
ಭಾಳಲೋಚನ ವ್ಯಾಳಾಭರಣ
ನೀಲಕಂಠ ನಿತ್ಯಾನಂದ
ಬಾರೊ ಬಾ ಇಷ್ಟಲಿಂಗ || ೨ ||

ಸತ್ತು ಚಿತ್ತು ನಿತ್ಯಾನಂದ ಭಕ್ತ–
ವತ್ಸಲ ಭವಗಿರಿ ವಜ್ರ ಭಕ್ತಿ
ಮುಕ್ತಿ ಸಂಪದಗಳ ಕೊಡುವ
ಕರ್ತು ಎನ್ನ ಗುರು ಇಷ್ಟಲಿಂಗ
ಬಾರೊ ಬಾ ಇಷ್ಟಲಿಂಗ ಎನ್ನ ಧ್ಯಾನಕೆ
ಬಾರೊ ಬಾ ಶಿವಲಿಂಗ || ೩ ||

□ □

೨೨೭

ಶರಣರಾಚರಣೆಗಳ ಪರಿ ಬೇರೆ ಛೋದ್ಯ
ಪುರಹರನಲ್ಲದುಳಿದ ಮಾನವರರಿವರೆ ? || ಪಲ್ಲ ||

ಸ್ಮರನಪೂವಿನಂಬ ಮುರಿದು ಧರೆಯೊಳು
ಮೆರದ ಗುರುಸಿದ್ಧರಾಮಯ್ಯ ನಂಬೆಣ್ಣನು
ತರುಣಿಯರ ಸುರತಸುಖದನುಭವದೊಳಾಗಲಘ
ಹರನ ಕೈಯಿಂದ ಹಡಪವ ಹೊರಿಸಿದ ॥ ೧ ॥

ಪ್ರಾಣಿಗಳು ನೋವವೆನುತಾರೈವುತಡಿಯಿಡುವ
ಜಾಣ ದಸರಯ್ಯನು ಜೊಮ್ಮಣ್ಣನು
ಪ್ರಾಣಿಯಂಗಳ ಕೋಟಿಯನು ಕೊಂದು ಶರಜಿತ ಪಂಚ
ಬಾಣನ ಶರಣರ ಕವಳಿಗೆಗೆ ಸಂದ ॥ ೨ ॥

ಹರಪೂಜೆಯುಪಕರಣ ತಾಗೆ ತರಿದನು ತನ್ನ
ಚರಣಗಳ ಮುನಿದು ಮಾರಗೊಂಡನು
ಧರೆಯರಿಯೆ ಕೆರಹುಗಾಲಲಿ ಲಿಂಗಮಸ್ತಕವ
ನರಸಿ ಕಣ್ಣಪ್ಪ ಸಲೆ ಕಣ್ಣಿತ್ತು ಮೆರವ ॥ ೩ ॥

ಕಾಲಹರನೊಳಷ್ಟವಿಧ ಪೂಜೆಗೈವನು
ಕಾಲಕಾಲದಿ ಕೇಶಿರಾಜಯ್ಯನು
ಕಾಲಿನೊಳು ಲಿಂಗವನು ಕಟ್ಟಿಲದನಡೆಸಿದ ಸರ್ವ
ಕಾಲದೊಳು ಸಲೆ ಘಟ್ಟಿವಾಳಯ್ಯನು ॥ ೪ ॥

ಲಿಂಗವಂಗವನಗಲೆ ಪೋಗಿರೆ ಬಂದನು
ತುಂಗ ಸತ್ಯಣ್ಣನಸುವಿಳೆಯರಿಯಲು
ಲಿಂಗ ಮಡುವಿನೊಳಳಿಯೆ ಬಿಟ್ಟು ಬಂದನು ತನ್ನ
ಜಂಗಮಾರ್ಚನೆಗೆಂದು ಚಂದಯ್ಯನು ॥ ೫ ॥

ವಿವಿಧ ಭಾವವನಳಿದು ವಿರತಿಯನೆ ಕೈಕೊಂಡು
ಶಿವನನರ್ಚಿಸಿದನೋಹಿಲದೇವನು
ವಿವಿಧ ಭೋಗದೊಳಿರ್ದು ಯುವತಿಯರನೊಡಗೂಡಿ
ಶಿವಪುರವ ಪೊಕ್ಕ ಗುರ್ಜರರಾಯನು ॥ ೬ ॥

ಮೆಚ್ಚುವೆಣ್ಣುಗಳೊಳೊಂದು ಪರಿ ಬೇಟಗಳು
ಮೆಚ್ಚಿರ್ದ ಪತಿಗೆ ಸುಖವಪ್ಪ ತೆರದಿ

ಅಚ್ಚ ಶರಣರ ಫಲವು ವಿವಿಧ ಚಾರಿತ್ರಗಳ
ಸಚ್ಚಿದಾನಂದ ಶಿವಲಿಂಗಕೊಪ್ಪಿಹುದು ॥ ೭ ॥
❑ ❑

೨೨೮

ರಾಗ : ಯರಕಲ ಕಾಂಬೋದಿ

ಕರದು ತಂದು ತೋರೆ ಸೈರಿಸಲಾರೆ ಸರಸಿಜನಯನೆ
ಹರಿ ವಿಧಿ ಸುರ ವಂದ್ಯ ಗುರುಕುಲತಿಲಕನ
ವರ ಮುನಿಗಳ ಮನೋವನಜ ದಿನೇಶನ ॥ಪಲ್ಲ ॥

ಚಿಕ್ಕಪ್ರಾಯದೊಳು ಎನ್ನನು ತನ್ನ ತೆಕ್ಕೆಯೊಳಮರ್ದು
ಚೊಕ್ಕ ಸಕಲಕಲೆಗಳು ಉಕ್ಕಿ ಸೂಸುತೆ
ಅಕ್ಕರಿಂದಲಿ ತಾಂಬೂಲವ ಗುಟುಕೀವನ ॥ ೧ ॥

ರಾಜಾಧಿರಾಜ ನಮಿತ ಸುರಭೂಜನೆನಿಪನ
ವೋಜೆಯಿಂ ಕರತಾರೆ ನಾ ಸೈರಿಸಲಾರೆ
ಸೋಜಿಗವಾಗಿದೆ ಸುಗುಣ ಸಂಪನ್ನನ ॥ ೨ ॥

ಪರಸತಿಯರನು ಮುಟ್ಟದ ಪಂಥಗಾರನೆಂದೆನಿಪ
ಮರೆಹೊಕ್ಕರನು ಕಾಯ್ವ ಮಾರಾಂತರನುಗೆಲ್ವ
ಪರವಾದಿಗಿರಿವಜ್ರದಂಡ ಪ್ರಚಂಡನ ॥ ೩ ॥

ಪಂತವೆ ತನಗೆ ನಂಬಿದಂಥ ಹೊಂತಕಾರಿಯೊಳು
ಕಾಂತೆ ನೀ ಕರತಾರೆ ನಾ ಸೈರಿಸಲಾರೆ
ಅಂತರಾಂತರದಜರಂಧ್ರ ನಿವಾಸಕೆ ॥ ೪ ॥

ಸತ್ಯದಾಚರಣೆಯ [ನನ]ವರತ ನಿತ್ಯವೆಂದರಿದು
ಕೃತ್ಯದಕೃತ್ಯಗಳ ನೋಡಿ ಮುರಿದ ವಿ-
ರಕ್ತ ಮುರಿಗೆ ಗುರುಸಿದ್ದೇಶ ಚಿತ್ಕೋಶನ ॥ ೫ ॥
❑ ❑

೨೨೯

ಜಯ ಜಯ ಮಂಗಳಮಹಿಮಗೆ ಗೌರೀ
ಪ್ರಿಯ ವರ ವರ ಮುರಿಗೆಯ ಸಿದ್ದೇಶ್ವರನಿಗೆ ॥ ಪಲ್ಲ ॥

ಪಂಚಬಾಣನ ಸುಟ್ಟು ತಿಲಕವನೊಲಿದಿಟ್ಟು
ಪಂಚವರ್ಣದ ಮಂತ್ರದೊಳಳವಟ್ಟು
ಪಂಚಮುಖದೊಳ್ಳೈದು ಸತ್ತ್ವಂಗಳ ಪೆತ್ತು
ಪಂಚಮಹಾಬ್ರಹ್ಮವೆನಿಸಿದಗೆ ॥ ೧ ॥

ಚಂದ್ರಕಳಾಪಗೆ ಚಂದ್ರಾದ್ರಿಚಾಪಗೆ
ಚಂದ್ರಧವಳ ಶುಭಕೀರ್ತಿಗೆ
ಚಂದ್ರಮಾತುಳ ಹೋಮ ಸಂಹರನಿಗೆ ರಾಮ
ಚಂದ್ರಗೆ ಶಿವಗೀತೆಯನರುಹಿದಗೆ ॥ ೨ ॥

ಕೃಷ್ಣನಿಗೀಶ್ವರಗೀತೆಯ ತಿಳುಪಿದ
ಕೃಷ್ಣಪುರೋಗಮ ಮುನಿವಂದ್ಯಗೆ
ಕೃಷ್ಣಗರಳ ಬಂಧುರ ಕಂಧರನಿಗೆ ಬಾಲ
ಕೃಷ್ಣ ನೀರಾಜಿತ ಕರಕಂಜಗೆ ॥ ೩ ॥

ನಾಗಭೂಷಣನಿಗೆ ನಗೆಮೊಗದೈಯ್ಯಗೆ
ನಾಗಚರ್ಮಾಂಬರಧರನಿಗೆ
ನಾಗವದನ ಶಿಖಿವಾಹನ ಜನಕಂಗೆ
ನಾಗಶಯನ ನೇತ್ರ ಪಾದನಿಗೆ ॥ ೪ ॥

ದಕ್ಷಿಣ ಕೈಲಾಸವೆನಿಪ ಚಿಮ್ಮುಲಗಿರಿ
ಸುಕ್ಷೇತ್ರದಲ್ಲಿ ನೆಲಸಿ ಶರಣ
ರಕ್ಷ ಕಣ್ಣಪ್ಪನ ಕುಲದೀಪ ಜಂಗಮ
ಪಕ್ಷ ಶ್ರೀ ಬ್ರಹ್ಮಭೂಪಾಲ ವರದನಿಗೆ ॥ ೫ ॥

□ □

೨೩೦

ಮಾತೆ ಪೊರೆ  ಗಿರಿಜಾತೆ ನೀನೆನ್ನ
ಜಾತಿ ಲಲನಾಜನ ಶಿರೋಮಣಿ
ನೂತನಾತುಳ ರೂಪಿಣಿ ॥ ಪಲ್ಲ ॥

ಕುಂದದತಿಶಯದಿಂದ ರಾಜಿಪ
ಮಂದಗಮನೆ ಮುಕುಂದ ವಂದಿತೆ
ಮಂದರಾಚಲ ಮಂದಿರೆ ॥ ೧ ॥

ಸೀಮಾರಹಿತೆ ಸುತ್ರಾಮ ಸೇವಿತೆ
ಕಾಮಹರ ಕಮನೀಯ ಶಂಕರ
ವಾಮಭಾಗ ವಿರಾಜಿತೆ ॥ ೨ ॥

ಬಿಂಬಾಧರೆ ನೆರೆ ನಂಬಿದೆ ನಾ ನಿನ್ನ
ಕಂಬುಕಂಧರೆ ಕಮಲಲೋಚನೆ
ತುಂಬೆಗುರುಳ ನಿತಂಬಿನಿ ॥ ೩ ॥

ಧೀರೆ ವರ ಗುಣಹಾರೆ ನಿರುಪಮ
ನೀರಜಾನನೆ ನಿಗಮ ಸನ್ನುತೆ
ಸೂರಿಜನ ಸುರವಲ್ಲರಿ ॥ ೪ ॥
ಶಾಂತವೀರ ನಿಶ್ಚಿಂತ ಕಾಂತನ
ಕಾಂತೆ ಕೋಕಿಲವಾಣಿ ಕರುಣೆಯ
ನಂತರಸ ಪರಿಪೂರಿತೆ ॥ ೫ ॥

❑ ❑

೨೩೧

ಕೂಸ ಕಂಡಿರ ಜ್ಞಾನಿಗಳೆಲ್ಲ ಕೂಸ ಕಂಡಿರ
ಸಾಸಿರನಾಮದ ಶತಕೋಟಿತೇಜದ
ಸೂಸುವ ಜ್ಞಾನದ ಸುಖದಲಿದ್ದನ ॥ ಪಲ್ಲ ॥

ಜ್ಞಾನ ಸಮುದ್ರದೊಳಾಡುವ ಕೂಸು
ಜ್ಞಾನಿ ಹೃದಯದೊಳಡಗಿದ ಕೂಸು

ಏನೆಂದರಿಯದ ಮೋನದ ಕೂಸು
ತಾನೆ ಬಲ್ಲುದು ತನ್ನ ಮಹಿಮೆಯ ಕೂಸು ॥ ೧ ॥

ಲೋಕತ್ರಯವನೆಲ್ಲ ನೋಡುವ ಕೂಸು
ಬೇಕಾದ ಮನೆಯೊಳಾಗಾಡುವ ಕೂಸು
ಆಕಾರಬಿಟ್ಟ ನಿರಾಕಾರ ಕೂಸು
ಸಾಕಾರ ದೃಷ್ಟಿಗೆ ನಿಲುಕದ ಕೂಸು ॥ ೨ ॥

ಅನುದಿನ ಮನೆಯೊಳು ಕುಳಿತಿದ್ದ ಕೂಸು
ಘನವಾದ ಹೆಚ್ಚಿನ ಚೆಲುವಿನ ಕೂಸು
ಬಿನುಗುಬುದ್ಧಿಗಳಿಗೆ ನಿಲುಕದ ಕೂಸು
ಘನ ಗುರು ಶಾಂತವೀರೇಶನೆಂಬ ಕೂಸು ॥ ೩ ॥

❑ ❑

೨೩೨

ತೋರಿಸೆ ಶ್ರೀ ಗುರುದೇವನ ಚೆಲ್ವ ನೀರೆ ನೀನೆನ್ನಯ ಪ್ರಾಣನ
ವಾರಿಜವದನೆ ವೈಯಾರಿ ಮುನಿದು ಮೊಗ
ದೋರದೆ ಮಾತನಾಡದೆ ಹೋದ [ಕಂಡಾ] ॥ ಪಲ್ಲ ॥

ಹೃದಯಸರಸಿಯೊಳಗಾಡುವ ದಿವ್ಯ
ಸದಮಳ ಹಂಸನ ನೋಡುವ
ವಿದಿತಾನಂದದೊಳುವೋಲಾಡುವ ಎಮ್ಮ
ಹದುಳದೆ ಮುಕುತರ ಮಾಡುವ
ಹದಿರು ಚದಿರು ನುಡಿಯದವರೊಡನಾಡುವ
ಮದವಿರಹಿತ ಭಕ್ತಿರಸದೊಳು ಕೂಡುವ ॥ ೧ ॥

ಉರಿವಜ್ಯೋತಿಯ ನೋಡಿ ಪಾಡುವ ಬಲು
ಬೆರಗಿನೊಳು ಮೂಡಿ ಮುಳುಗುವ
ತಡೆವಿಲ್ಲದೆಡೆಯಾಡುವ ಲಜ್ಜೆ
ವೊಡೆಯದೆನ್ನೊಳು ನಗೆಯಾಡುವ
ತಡಿಯ ಸೇರಿಸಿ ಸೇರಿದನುಪಮ ಶಿಷ್ಯರ
ಗಡಣದ ನಡುವೆ ರಾಜಿಪ ದೇಶಿಕೇಂದ್ರನ ॥ ೨ ॥

ನೀಲ ಸುಜ್ಯೋತಿಯ ಬೆಳಗನು ನೋಡಿ
ಲೀಲೆಯೊಳೆಡೆಯೂರ ಗುರುಸಿದ್ಧಲಿಂಗನೆ
ಕಾಲಕರ್ಮಗಳನು ಪರಿವ ಸುಭಕ್ತ
ಜಾಲದ ಮನೆಯ ಕೊನೆಯೊಳು ನಿಂದವನೆ
ಬಾಲೆ ಮೂರಾರೊಂದುಗೂಡುತೆ ವಸ್ತುವ
[ನೆಲ್ಲ] ದಯದೆ ತೋರ್ಪ ಶಾಂತವೀರೇಶನೆ ॥ ೩ ॥

❑ ❑

೨೩೩

ವರ ವೇದಾಗಮ ವಂದಿತ ವಾರಿಜಗಂಧಿ ಪೊರೆ
ಗಿರಿರಾಜನಂದನೆ ಗುರುಕುಚೆ ಗಾನವಿಲೋಲೆ ಗುಹಾ
ಕರೆ ಸರಸಿಜಲೋಚನೆ ಸತಿಕುಲ ರನ್ನೆ ॥ ಪಲ್ಲ ॥

ಮದಗಜವರಗಾಮಿನಿ ಮಂದಹಾಸಿನಿ
ಸುದತಿ ನಿಕರ ಸೇವಿತೆ
ಮುದದೊಳೆಸೆವ ಶಶಿವದನೆ ದಯಾಕರೆ
ಚದುರೆ ಸರಸ ಮೃದುವಾಣಿ ಕಲ್ಯಾಣಿ ॥ ೧ ॥

ಸನ್ನುತ ಘನನಾಯಕಿ ಸತ್ಯಕೀರ್ತಿ ಸಂ
ಪನ್ನೆ ಪುಣ್ಯ ಪ್ರಕಾಶದ
ಕನ್ನೆ ವಿರಾಜಿಪ ರನ್ನದುಟಿಯ ವರ
ಪನ್ನಗವೇಣಿ ಪಾವನತರ ರೂಪೆ ॥ ೨ ॥

ವಾರಣರಿಪುವಾಹನೆ ವಿಮಳೆ ವಿಶ್ವಾ
ಧಾರೆ ಶಾಂತವೀರೇಶನ
ನೀರೆ ನಿಜವದವತಾರೆ ಮಂಜುಲ ಮಣಿ
ಹಾರೆ ಭಯದೂರೆ ಗಂಭೀರೆ ॥ ೩ ॥

❑ ❑

೨೩೪

ಸರಸ ವಿದ್ಯಾರಮಣಿಯಿರೆ ಬುಧರಿಗಜನು ಜಡ
ತರುಣಿಯರೊಳೇಕೆ ಮೋಹನ ಪುಟ್ಟಿಸಿದನೊ ॥ ಪಲ್ಲ ॥

ಮಿಸುಪ ಶಬ್ದಗಳೆಂಬ ಮೋಹನಾಂಗದ ನಿಜದೊ
ಳೆಸೆವ ನಿಗಮಗಳೆಂಬ ಚೆಲ್ವಮೊಗದ
ರಸಿಕ ಸತ್ಕಾವ್ಯವೆನಿಸುವ ರಂಗುದುಟಿಯ ರಾ
ಜಿಸುವ ತರ್ಕಗಳೆಂಬ ಕುಂಭಕುಚದ ॥ ೧ ॥

ಸಲೆ ವಿರಾಜಿಪ ಪುರಾಣಗಳೆಂಬ ಮೆಲ್ಲಡಿಯ
ಲಲಿತಾಗಮಗಳೆಂಬ ನಳಿತೋಳ್ಗಳ
ವಿಲಸಿತಾಲಂಕಾರವೆನಿಪಲಂಕಾರಂಗಳ ವಿ
ಮಳ ಕವಿತೆಗಳೆಂಬವಿರಳ ಪುರ್ಬುಗಳ ॥ ೨ ॥

ಗಜಗಮನದೆಸೆವ ಛಂದಂಗಳೆಂಬ ಮೆಲ್ಲಡಿಯ
ನಿಜ ನಿಘಂಟುಗಳೆಂಬ ನಿಡುಗಂಗಳ
ಭುಜಗಕುಂಡಲ ಶಾತವೀರೇಶ [ನ] ಪಾದ ಪಂ
ಕಜ ನುತಿಗಳ ನೂತನ ತಿಲಕದ ॥ ೩ ॥
❑ ❑

೨೩೫

ಭಿಕ್ಷವನೆ ಬೇಡುಂಬ ಮೋಕ್ಷಸುಖವನೆ ಕೊಟ್ಟು
ರಕ್ಷಿಸೆನ್ನನು ದಯಾಲೋಲ [ಧನಂಜಯಾ]ಕ್ಷ ॥ ಪಲ್ಲ ॥

ಅಂಗಸುಖವೆಲ್ಲ ಶಿವಲಿಂಗ ಸುಖವೆಂದರಿದು
ಮಂಗಳಾತ್ಮಕನಾಗಿ ಹರಭಕ್ತರ
ಅಂಗಳಕೆ ಹೋಗಿ ಘನಲಿಂಗಕರ್ಪಿ[ತ] ಯೆಂದು
ಹಿಂಗದಾನಂದದಿಂದಿಹಪರದೊಳು ॥ ೧ ॥

ಕರಚೆಲ್ವ ತಾಯಿಗಳ ಅಕ್ಕಗಳ ಮನೆಯಲ್ಲಿ ಭಿಕ್ಷ
ಹರಿಣಲೋಚನದ ಚಂದಿರವ[ದ]ನದ
ಪರಮಪಾವನ ಕಾಂತೆಯರ ಲಿಂಗವಂತೆಯರ
ವರಪುಣ್ಯಗೃಹದೊಳು ಭಿಕ್ಷವೆಂದು ॥ ೨ ॥

ಅಕ್ಕನಾಗಮ್ಮ ನೀಲಮ್ಮ ಚಂಗಲೆ ಚೋಳಿ.
[ಯ] ಕ್ಕ ಮುಕ್ತಾಯಿಗಳ ಮಂದಿರದೊಳು

ಮುಕ್ಕಣ್ಣ ಶಾಂತವೀರೇಶ್ವರಗೆ ಭಿಕ್ಷವನು ಸ
ತ್ಯಕ್ಕಗಳ ಸದನದೊಳು ಭಿಕ್ಷವೆಂದು ॥ ೩ ॥

❑ ❑

೨೩೬

ರಾಗ : ಮಧುಮಾಧವಿ

ಕರುಣವಿರಲಿ ಎನ್ನ ಮೇಲೆ ಕಾಯಜವೈರಿ
ಮುರಿಗೆಯ ಶಾಂತವೀರೇಶ ಮುನಿಜನ ವಂದ್ಯ ಮಹೇಶ ॥ ಪಲ್ಲ ॥

ನಿಗಮಾಗಮ ಪೌರಾಣ ನಿಪುಣ ಗಿರಿಭೂಷಣ
ಅಗರಾಜ ಸನ್ನಿಭ ಧೈರ್ಯ ಅರಿವರ್ಗಜಯ ಶೌರ್ಯ
ಸುಗುಣಮಣಿ ಗಣಕೋಶ ಸುಜನಜನ ವಿಲಾಸ
ಸೊಗಸುವ ಮಂತ್ರಹೃದಯ ಸತತ ಪಾವನಕಾಯ ॥ ೧ ॥

ವಿನಯ ಸಹಿತ ಸುವಾಕ್ಯ ವಿಮಳ ದಿವ್ಯಜ್ಞಾನೈಕ್ಯ
ಘನ ಪಾರಾವಾರ ಗಂಭೀರ ಗತಮಾಯ ಮೋಹದೂರ
ವನಜಾರಿ ಭಾಸುರಕೀರ್ತಿ ವರ ಸದಾಚಾರವರ್ತಿ
ಅನುಪಮ ಭಸಿತಲೇಪ ಅಘಸಂಕುಳ ವಿಲೋಪ ॥ ೨ ॥

ಭವಭೂಜಮೂಲ ಕುಠಾರ ಭಾವಿಪ ಭಕ್ತಮಂದಾರ
ಜವನ ಮದಭಂಗ ಜಂಗಮಲಿಂಗ ಸುಸಂಗ
ಶಿವಸತ್ತ್ವ ವಿಚಾರ ಧೀರ ಶ್ರೀ ವೀರಮಾಹೇಶ್ವ[ರೋ]ದ್ಧಾರ
ಶಿವಲಿಂಗದೇವಸ್ವರೂಪ ಶಿಷ್ಟ ಮೋಕ್ಷಾಂಗನೆಯೋಪ ॥ ೩ ॥

❑ ❑

೨೩೭

ಜಯಮಂಗಳಂ ನಿತ್ಯ ಶುಭಮಂಗಳಂ ಜಯ
ಜಯತು ಶಿವಲಿಂಗ ಧವಲಾಂಗ ನಿಮಗೆ ॥ ಪಲ್ಲ ॥

ಶ್ರೀ ಭಸಿತಗಾತ್ರರಿಗೆ ಸಂತತ ಪವಿತ್ರರಿಗೆ
ತ್ರೈಭುವನ ಕರ್ತರಿಗೆ ಧೀರರಿಗೆ

ಶೋಭನ ಚರಿತ್ರರಿಗೆ ಸದುಜನ [ದ] ಮಿತ್ರರಿಗೆ
ಶಂಭುರೂಪಿನ ಶರಣ ಜಂಗಮಕ್ಕೆ ॥ ೧ ॥

ಮಂಗಳಂ ಶಿವಭಕ್ತ ಮಂದಿರ ನಿವಾಸರಿಗೆ
ಮಂಗಳಂ ಸರ್ವಾಂಗ ಲಿಂಗಿಗಳಿಗೆ
ಮಂಗಳಂ ಷಟ್‌ಸ್ಥಲದ ಮೂರುಸಾವಿರಕೆ ಜಯ
ಮಂಗಳಂ ವಿರತಮೂರ್ತಿಗಳಿಗೆ ॥ ೨ ॥

ಮೂರುಗುಣಗಳ ಮುರಿದು ಈರೈದು ಇಂದ್ರಿಯವ ತೊರೆದು
ಆರುವರ್ಗವ ಗೆಲಿದ ಧೀರರೆನಿಸಿ
ಚಾರುತರ ಮೂವತ್ತಾರುತತ್ತ್ವವ ತಿಳಿದ
ನೂರೊಂದುಸ್ಥಲದ ವಿರತರಿಗೆ
ಜಯಮಂಗಳಂ ನಿತ್ಯ ಶುಭಮಂಗಳಂ ॥ ೩ ॥

ಭವತಿಮಿರ ಅರ್ಕರಿಗೆ ಭಾವಜನ ಗೆಲಿದರಿಗೆ
ಭವಗಿರಿಗೆ ವಜ್ರವೆಂದೆಂಬವರಿಗೆ
ಭವಜಲಾಂಭೋನಿಧಿಗೆ ವಡಬಾಗ್ನಿ ಎಂದೆನಿಪ
ಭವವಳಿದ ಶಿವಯೋಗಿಪುಂಗವರಿಗೆ ॥ ೪ ॥

ಶರಣು ಹೊಕ್ಕರೆ ಕಾಯ್ವ ಬಿರುದಿನ ಮಹಾತ್ಮರಿಗೆ
ಕರುಣಸಾಗರರೆನಿಸಿ ಚರಿಸುವರಿಗೆ
ವರ ವೀರಶೈವದೊಳು ಮೆರವ ಯತಿಮಾನ್ಯರಿಗೆ
ಪರತತ್ವದೊಳು ಬೆರವ ಭಾಸುರರಿಗೆ ॥೫ ॥

ಮಮಕಾರಭೂಪನಿಗೆ ಮಾನಿನಿಯು ಮೋಹಿನಿಗೆ
ಅಮಿತ ಜಪದಿಂ ಜನಿಸಿದ ಮಾಯೆಯ
ಅಮರವರ ಮಧುಕೇಶನಾಲಯದಿ ಗೆಲಿದಂಥ
ದ್ಯುಮಣಿತೇಜದ ಪರದೇಶಿಗಳಿಗೆ ॥ ೬ ॥

ಬಲ್ಲಿದನು ಬಸವೇಶ ಭವದಲ್ಲಿ ನಿರ್ಮಿಸಿದ
ಸಲ್ಲಲಿತ ಶೂನ್ಯಸಿಂಹಾಸನದಲಿ

ಎಲ್ಲ ಶರಣರು ಹೃದಯದಲಿ ಸ್ಮರಿಸಿದ ಗುರು
ಅಲ್ಲಮಾಪ್ರಭುವಾದ ಅಯ್ಯಗಳಿಗೆ ॥ ೭ ॥

□ □

೨೩೮

ರಾಗ : ಕಾಪಿ

ನಂಬಿದೆ ನಿನ್ನ ಚರಣವನು ಬೆಂಬಿಡದೆನ್ನ
ಸಾಂಬ ಶಾಂತವೀರೇಶ ಸಲಹೊ ಮದ್ಗುರೇಶ ॥ ಪಲ್ಲ ॥

ರವಿಕೋಟಿತೇಜ ರಾಜಾಧಿರಾಜ ಕವಿ ಸುರಭೂಜ
ದಿವಿಜಸಂತತಿ ನತ ದಿನಪಸುತಾಹಿತ
ಶಿವ ಮುನಿಜನಪಾಲ ಸಿರೋಮಾಲ ॥ ೧ ॥

ಪಂಕವಿದೂರ ಪಾವನ ಚಲದಂಕ ಗಂಭೀರ
ಪಂಕಜಾಸನ ನುತಿಪಾತ್ರ ಪನ್ನಗಸೂತ್ರ
ಶಂಕರ ಕಾಲಭಯಂಕರ ಸುಖಕರ ॥ ೨ ॥

ಚಂದ್ರಕಲಾಪ ಚತುರ ಚಾರು ರುಂದ್ರಸಲ್ಲಾಪ
ಸಾಂದ್ರಕರುಣ ವೃಷಭೇಂದ್ರವಾಹ ಸುತೋಷ
ಮಂದ್ರತರದ ಘನಮಹಿಪ ಬುಧಮೋಹನ ॥ ೩ ॥

ಅಂಗಜಹರಣ ಅಂಧಕಾಸುರ ಭಂಗ ನಿರ್ಮರಣ
ಮಂಗಳಮಯಮೂರ್ತಿ ಮಂಜುಲತರ ಕೀರ್ತಿ
ತುಂಗಮಹಿಮ ಗಣಪುಂಗವ ವಿತರಣ ॥ ೪ ॥

ಸುಂದರನಟನ ಸುರಾಧಿಪನಂದನಘಟನ
ಮಂದರಧರ ಭವಸಿಂಧುರ ರಿಪುನಾ [ಶ]
ನಂದಿಕೇತನ ಸದಾನಂದ ಶಿವಲಿಂಗಾಂಕ ॥ ೫ ॥

□ □

೨೩೯

ಮಂಗಳರೂಪ ಚಿದಂಗ ಪರಾಕು
ಗಂಗಾಜಟಾಂತೋತ್ತಮಾಂಗ ಪರಾಕು
ಭಂಗರಹಿತ ಸುರತುಂಗ ಪರಾಕು
ಜಂಗಮ ಜಲಜ ಪತಂಗ ಪರಾಕು
ಅಂಗನೆಯರು ಹಸೆಗೆ ಕರದಾರು ಸೋಬಾನವೆ ॥ ೧ ॥

ಕಪಟನಾಟಕ ಸೂತ್ರಧಾರಿ ಪರಾಕು
ಸುಪವಿತ್ರತರ ಸುಶರೀರಿ ಪರಾಕು
ಅಪರಿಮಿತಾನಂದಶಾಲಿ ಪರಾಕು
ವ್ಯಪಗತ ಜನಿಮೃತಿಮಾಲಿ ಪರಾಕೆಂದು
ಚಪಲೆಯರು ಹಸೆಗೆ ಕರದಾರು ಸೋಬಾನವೆ ॥ ೨ ॥

ಕಾಮಿತಫಲದಾಯಕಗೆ ಪರಾಕು
ಕಾಮಜನಕ ಸುಸಾಯಕನೆ ಪರಾಕು
ಸೋಮ ಶಕಲ ಶಾಲಿಮೌಲಿ ಪರಾಕು
ನೇಮರಹಿತ ನಿಜರೂಪ ಪರಾಕೆಂದು
ಕಾಮಿನಿಯರು ಹಸೆಗೆ ಕರದಾರು ಸೋಬಾನವೆ ॥ ೩ ॥

ದಂಡಿತ ದನುಜರಷಂಡ ಪರಾಕು
ಮಂಡಿತ ಹಿಮರುಚಿಖಂಡ ಪರಾಕು
ಚಂಡಕರಾಯುತ ತೇಜ ಪರಾಕೆಂದು
ಪುಂಡರೀಕಾನನೆಯರು ಮನದೊಲವಿಂದೆ
ಕೊಂಡಾಡಿ ಹಸೆಗೆ ಕರದಾರು ಸೋಬಾನವೆ ॥ ೪ ॥

ವೇದಸನ್ನುತ ಶುಚಿಕೀರ್ತಿ ಪರಾಕು
ಮೋದದಾಯಕ ವಿಜಿತಾರ್ಥಿ ಪರಾಕು
ವೇದಾಂತಜನ ಮಧ್ಯವರ್ತಿ ಪರಾಕು
ಶೋಭಿತ ಕನಕಾಭಮೂರ್ತಿ ಪರಾಕೆಂದು
ಆದರದಿಂ ಹಸೆಗೆ ಕರದಾರು ಸೋಬಾನವೆ ॥ ೫ ॥

ಮಾರಮದಾಟವಿ ದಾವ ಪರಾಕು
ನಾರಿಕೃತೋರಗ (?) ದೇವ ಪರಾಕು
ಸಾರ ನಿಗಮಕುಲವಂದ್ಯ ಪರಾಕು
ನೀರಜಮುಖಿಯರು ಮುದದಿಂದೆ ನುತಿಸಿ ಶುಭ
ಕಾರಿಯನು ಹಸೆಗೆ ಕರದಾರು ಸೋಬಾನವೆ ॥ ೬ ॥

ಅಂ[ಬಿಕಾ]ಧರ ಬಿಂಬ ಕೀರ ಪರಾಕು
ಕಂಬಲಾಶ್ವತಗೀತಾಧಾರ ಪರಾಕು
ಕುಂಭಿಮುಖಾಂಬುಜ ಸೂರ ಪರಾಕೆಂದು
ಕುಂಭಕುಚದ ಭರದಿ ಬಳಕುವ ಸು ನಿ
ತಂಬಿನಿಯರು ಹಸೆಗೆ ಕರದಾರು ಸೋಬಾನವೆ ॥ ೭ ॥

ಪರತರ ಗುಣಮಣಿಭೂಷ ಪರಾಕು
ಗುರು[ಶಿವ]ಲಿಂಗದೇವೇಶ ಪರಾಕು
ಸರವಣಸಂಭವ ತಾತ ಪರಾಕು
ಸರಸ ಸಂಗೀತ ಸಂಪ್ರೀತ ಪರಾಕೆಂದು
ತರುಣಿಯರು ಹಸೆಗೆ ಕರದಾರು ಸೋಬಾನವೆ ॥ ೮ ॥
❑ ❑

೨೪೦
ಮುನುಕುಲ ಸಂಕುಲದಧಿಪತಿಯನಿಪನ
ಘನಕನಕಾದ್ರಿಪ ನಿಲಯನ
ತನುಭವ ವೀರ ವರನಿಗೆ ವನರುಹನಯನಗೆ
ವನಿತೆಯರಾರತಿಯ ಬೆಳಗಿರೆ ಸೋಬಾನವೆ ॥ ೧ ॥

ಘುಡಿಘುಡಿಸುತೆ ಕಿಡಿಮಸಗುತೆ
ಪೊಡವಿಯೊಳೆಡೆವಿಡದೆಯ್ದುತೆ
ಮೃಡನಪ್ಪಣೆಯನು ಶಿರದೊಳು ತಡೆಯದೆ ತಳದಗೆ
ಗಣದೊಳಾರತಿಯ ಬೆಳಗಿರೆ ಸೋಬಾನವೆ ॥ ೨ ॥

ಗಜಮುಖದೊಡಹುಟ್ಟಿದಗೆ
ತ್ರಿಜಗನುತೆ ಚರಿತ ಭವ

ರಜನಿಸಂಹಾರ ದಿವಾಕರನಿಗೆ
[ನಿಜ] ಕರುಣಾಬ್ಧಿಗೆ ಶುಭ
ವಿಜಯಗಾರತಿಯ ಬೆಳಗಿರೆ ಸೋಬಾನವೆ ॥ ೩ ॥

ಮುಡಿ ಜಡಿವುತೆ ನಡು ಬಳುಕುತೆ ಮೆ
ಲ್ಲಡಿವಿಡುತೆಡವಿಡದೆ ಬಂದು
ಸಡಗರಿಸುತೆ ಮಡದಿಯರು
ಸಡಗರಿಸುತೆ ಮಡದಿಯರಿಡಿಕಿರಿವುತೆ ಜಗ
ದೊಡೆಯಗಾರುತಿಯ ಬೆಳಗಿರೆ ಸೋಬಾನವೆ ॥ ೪ ॥

ನಿರುಪಮನೆಂದೆನಿಸುವ ಪರತರ ಮಹಿಮೆಯ
ಪೆರೆದಲೆಯಗೆ ವಿಧಿ
ಹರಿವಂದ್ಯ ಪಾದಕಮಲನಿಗೆ ಸುರರೇಹೆಯಂಗೆ ಗುಣ
ಶರಧಿಗಾರತಿಯ ಬೆಳಗಿರೆ ಸೋಬಾನವೆ ॥ ೫ ॥

ಮದಯುತ ದಕ್ಷಮಖವನಶಿಖಿ
ಗದಿರದೆ ಘನ ಶೌರ್ಯದಿ ಮೆರವಗೆ
ಮದಗಜಗತಿಯ ಸುದತಿಯರುರತಿಮುದತಿಯರುರೆ
ಪದುಳದೊಳಾರತಿಯ ಬೆಳಗಿರೆ ಸೋಬಾನವೆ ॥ ೬ ॥

ಸಿತಕರ ದಶಶತಕರ ಸನ್ನುತ
ಹುತವಹನೇತ್ರಗೆ ನಿರ್ಜಿತ
ರತಿಪತಿ ಶಂಭುಸುತನಿಗೆ
ಯತಿನುತಗೆ ಧೃತಿಯುತ
ಮತಿಗಾರತಿಯ ಬೆಳಗಿರೆ ಸೋಬಾನವೆ ॥ ೭ ॥

ಜ್ವಲನಾಕ್ಷಗೆ ಖಲಶಿಕ್ಷಗೆ ವಿಲಸಿತನಿಗೆ
ವಿಲಯವಿರಹಿತಗೆ
ಮಲಿನಾತ್ಮ ದಕ್ಷಹರನಿಗೆ ಶಿ–
ವಲಿಂಗೇಶನ ಚೆಲುನಾತ್ಮಭಾವ
ಕಲಿ ವೀರನಿಗೆ ಸೋಬಾನವೆ ॥ ೮ ॥

 

೨೪೧

ಶ್ರೀ ಗುರುಶಾಂತ ವೀರಾಧಿವೀರ || ಪಲ್ಲ ||

ಶ್ರೀ ಗುರುಶಾಂತವೀರಲಿಂಗ ವೇದತುರಂಗ
ಭೋಗಿಭೂಷಣ ಸತ್ಯಭಾಷಣ ಜಯತೋಷಣ || ೧ ||

ದಕ್ಷಿಣಾಮೂರ್ತಿಯಾಗಿ ದಾನಗುಣದ ಚಾಗಿ
ಪಕ್ಷಪಾತವನೀಗಿ ಪರಮಾತ್ಮ ಸಮ್ಮತ ಯೋಗಿ || ೨ ||

ರಾಮಚಂದ್ರಗೆ ಶಿವಗೀತೆಯ ಬೋಧಿಸಿ
ಪ್ರೇಮದಿ ಮುಕ್ತನ ಮಾಡಿದ ಭವ ಮಹಾನುಭಾವ || ೩ ||

ಹರಿಗೆ ದೀಕ್ಷೆಯನಿತ್ತು ವ್ಯಾಸನೆಂಬ ಪೆಸರ
ಕರುಣಿಸಿ ಪುರಾಣತತಿಯನು ಪೇಳಿಸಿದಸಮ || ೪ ||

ಕಮಲನೇತ್ರನ ದಶಭವಗಳ ತೊಲಗಿಸಿ
ವಿಮಲಬೋಧೆಯನರುಹಿ ಪೊರೆದ ದೇಶಿಕಮೂರ್ತಿ || ೫ ||

ಕೃಷ್ಣನಗ್ರಜನಾದ ದೇವೇಂದ್ರನಿಗೆ ಸಾ
ಸಿಷ್ಟುದೀಕ್ಷೆಯನಿತ್ತ ಹಿಮಕರಮೌಲಿ ಪಾಹಿ || ೬ ||

ನಡುಗಣ್ಣಕಿಚ್ಚಿನಿಂದ ಬೆಂದ ಹರಿಯಾತ್ಮಜ[ನ]
ನೆಡದ ನೇತ್ರದಿ ಸೃಷ್ಟಿಸಿದ ಶಿವೆಯಧಿಪತಿ || ೭ ||

ತಾರಕದನುಜನನುಜೆಯಜಮುಖಿಯಿಂದೆ
ಸೂರೆಯಾಗುವ ಹರಿ ರಮಣಿಯ ಸಲಹಿದ || ೮ ||

ಘನ ಮುರಿಗೆಯ ಶಾಂತವೀರನಾಮವನಾಂತ
ಮನುರಾಜ ಕಾಯೋ ಶಿವಲಿಂಗೇಶ ಗತಮಾಯ || ೯ ||

 

೨೪೨

ರಾಗ : ಆಹುರಿ

ಏನನೆಂಬೆನೆನ್ನೊಗೆತನವ
ಮಾನಭಂಗವ ಮಾಡಿದ ಮನೆಯಾತ ॥ ಪಲ್ಲ ॥

ಒಡಕೆ ಮಡಕೆಯೊಳುದುಕವನೆ ತುಂಬಿ
ಹುಡುಕಿ ತಂದೆನು ನಾನೊಮ್ಮನವ
ಅಡಿಗೆಯ ಮಾಡುವಾಗಳಳುವ ಮಕ್ಕಳಕಾಟ
ಬಿಡದೆ ಮನೆಯಾತನ ಬಿಱುನುಡಿ ಘನವಮ್ಮ ॥ ೧ ॥

ಮೊಸರ ಕಡದು ಬೆಣ್ಣೆಯ ನೆಲುವಿನ ಮೇಲಿರಿಸಿ
ಶಿಶುವಿಗೆ ಮೊಲೆಯನಾ ಕೊಡುತಲಿರ್ದೆ
ಅಸಿಯಕಲ್ಲಿನ ಮೇಲೆ ಮಸಿಯನರದು ಚೆಲ್ಲಿ
ಹುಸಿಯ ಬೆಣ್ಣೆಯ ತಿಂಬ ಹಂದಿಗತನವ ॥ ೨ ॥

ಉಟ್ಟುದ ಸೆಳೆಕೊಂಡು ಅಱಿವೆಯನೆ ಕೊಟ್ಟು
ಹುಟ್ಟ ಮುಱಿದು ಬಟ್ಟಬಯಲನೈದಿಸಿರ್ದ
ದೃಷ್ಟಿಗೆ ಶ್ರೀಗಿರಿಪುರವ ಹೊಂದಿರಲಾಗಿ
ಬಿಟ್ಟಿಗೆ ಹೋಗಿ ಕಂಡೆನು ಕಟಕವನು ॥ ೩ ॥

❑ ❑

೨೪೩

ರಾಗ : ನೀಲಾಂಬ[ರಿ]

ಮೆಚ್ಚಿಸಿಕೋ ನೀಯೆನ್ನ ಪ್ರಾಣ
ಮರೆತಿರಲಾರೆನೆಲೊ ಜಾಣ ॥ ಪಲ್ಲ ॥

ಬಗೆ ಬಗೆ ಶಕುನಿಯಮಂಚದ ಮೇಲೆ
ಘಮಘಮಿಸುವ ಮಲ್ಲಿಗೆಮಾಲೆ
ಅಗಿಲು ಚಂದನ ಗಂಧವ ಧರಿಸೊ.
ಪುಷ್ಪವ ಮುಡಿಸೊ ಮುನಿಸುತ ನೀ ಮೆಯ್ಯನೇ[ವ]ರಿಸೊ ॥ ೧ ॥

ಹೆಣ್ಣು ಜಲ್ಮಕ್ಕೆ ನೀನೊಲಿವಂತೆ
ಚೊಕ್ಕ ಚಿನ್ನಕ್ಕೆ ಬಣ್ಣ ಬೆರದಂತೆ
ಹಣ್ಣು ಸಕ್ಕರೆ ಹಾಲ ಸವಿದಂತೆ ಎನ್ನ
ಪುಣ್ಯಕೆ ನೀ ಬಂದು ಬೆರದಂತೆ ॥ ೨ ॥

ಚಿಕ್ಕ ಪ್ರಾಯದ ನೀ[ರೆ] ನಾ
ಚಿಕ್ಕವಳು ನಾನೊಂದನರಿಯೆ
ಎನ್ನೊಡೆಯ ಶ್ರೀ ಗಿರಿಮಲ್ಲ ಕೂಡಿಕೊ ನಲ್ಲ
ಮಚ್ಚಿಸಿಕೋ ನೀ ಎನ್ನ ಪ್ರಾಣ ॥ ೩ ॥

❑ ❑

೨೪೪

ಸಾರ ಸುಖದೊಳಿರ್ದು ಲಿಂಗ ಸಂಗವೆಂಬ
ಪಾರದೊಳಿಹೆನೆಂದು ಹೇಳು ಕೋಗಿಲೆ ಕೋಗಿಲೆ ॥ ಪಲ್ಲ ॥

ಮುಂಬರಿದು ಮೋಹದಿಂದೆ ಗಂಡನ ತೆಕ್ಕೆಯೊಳಿರ್ದು
ತುಂಬು ಜವ್ವನಿ ತನ್ನ ಗೆಳೆಯಾನ ಗೆಳೆಯಾನ
ಹಂಬಲಿಸುವಂತೆ ಸರ್ವರೊಳಗಿರ್ದಡೆಯು ಲಿಂಗ
ದಿಂಬಿನೊಳಿಹೆನೆಂದು ಹೇಳು ಕೋಗಿಲೆ ಕೋಗಿಲೆ ॥ ೧ ॥

ಚಿತ್ತರದಿ ನರ್ತನದ ಗಾನದೊಳಗಿರ್ದಡೆಯು
ನೆತ್ತಿಯ ಕುಂಭ ಮ[ರೆ]ಯದಂತೆ ಮ[ರೆ]ಯದಂತೆ
ನಿತ್ಯ ಮರ್ತ್ಯರೊಳಗಿರ್ದಡೆಯು ಪರಮಲಿಂಗ
ದತ್ತಲಿಹೆನೆಂದು ಹೇಳು ಕೋಗಿಲೆ ಕೋಗಿಲೆ ॥ ೨ ॥

ನೆರದ ಜನರ ಮಧ್ಯದೊಳಗಿರ್ದ್ದಡೆಯು ಜಾರೆ ಜಾ[ರೆ]
ಉರವಣಿಸಿ ಸುನಿಯ ದೂರುವಂತೆ ದೂರುವಂತೆ
ಮೆರವ ನಾಮರೂಪದೊಳಗಿರ್ದಡೆಯು ಮೂರ್ಲಿಂಗ–
ದರಿವಿನೊಳಿಹೆನೆಂದು ಹೇಳು ಕೋಗಿಲೆ ಕೋಗಿಲೆ ॥ ೩ ॥

ಒಂದು ಮೊಲಿಯ ಕಂದ ನಲಿದುಂಬುತಿರೆ ಪ್ರೇಮದಿಂದ ಮ
ತ್ತೊಂದು ಮೊಲೆಗಿಟ್ಟ ದೃಷ್ಟಿಯ ತೆಗೆಯದಂತೆ

ಛಂದಛಂದದಿಂದೆ ಭೋಗವೃಂದದೊಳಗಿರ್ದಡೆಯು ಲಿಂಗಾ
ನಂದದೊಳಿಹೆನೆಂದು ಹೇಳು ಕೋಗಿಲೆ ಕೋಗಿಲೆ || ೪ ||

ಹುರಿದ ಕಡ್ಲೆ ಅವರೆ ತೊಗರಿ ನೋಟಕೆ ರೂಪಾದಡೆಯು
ಮರಳಿ ಬಿತ್ತಿ ಬೆಳವದಕೆ ಬಾರದಂತೆ ಬಾರದಂತೆ
ಮೆರವ ನಾನಾರೂಪಿನೊಳಗಿರ್ದಡೆಯು ಸಂಗನೊಳ–
ಗೈಕ್ಯವಾಗಿಹೆನೆಂದು ಹೇಳು ಕೋಗಿಲೆ ಕೋಗಿಲೆ || ೫ ||

❑ ❑

೨೪೫

ಶರಣು ಮಾಡಿದೆನೆನ್ನಿ ಸಹಸ್ರವೇಳೆಯೊಳೆನ್ನಿ
ಕರಗಳ ಮುಗಿದು ಸಾಷ್ಟಂಗ ಪ್ರಣುತನಾಗಿ
ಕರುಣಿ ಸಂಗಯ್ಯನಿಗೆ || ಪಲ್ಲ ||

ಮಾರನಗೆಲಿದಗೆ ಮಂಗಳಮಹಿಮಗೆ
ಕಾರಣಾತ್ಮನಿಗೆ ಕಾಲನಗೆಲಿದಗೆ
ಸಾರಸನ್ಮತಿಯವಗೆ
ವೀರಮಾಹೇಶ್ವರಗೆ ವಿದಿತ ಕರ್ಮನಾಶನಿಗೆ
ನಾರಿಯ ತೊರೆದಗೆ ನಂಬಿದ ಜನರಿಗೆ ಉ–
ದಾರ ಸಂಗಮದೇವಗೆ || ೧ ||

ಪನ್ನಂಗಕಟಕನಿಗೆ ಪಲಿಕೆಸೆ ಸರಿಬರೆ
ತನ್ನತಾನಱಿತಗೆ ತರಹರವುಳ್ಳಗೆ
ಮಾನ್ಯರಾದವರಿಗೆ ಮನಮೆಚ್ಚಿ ಬೋಧಿಪಗೆ
ಕನ್ನಡಜಾಣನಿಗೆ
ಹೊನ್ನು ಹೆಣ್ಣು ಮಣ್ಣು ಹೊಱಗಾದ ದೇವಗೆ || ೨ ||

ಷಡುವರ್ಗರಹಿತಗೆ ಸಚ್ಚಿದಾನಂದನಿಗೆ
ಮೃಡಶರಣಾಳಿಗೆ ಮುಕ್ತಿಯನೀವಗೆ
ಪೊಡವಿಗಪ್ರತಿಮ[ನಿ]ಗೆ
ಮಡದಿಯರ ಸವಿನುಡಿಗೆ ಮನವಿಡದಭವಗೆ

ಷಡುಸ್ಥಲಭರಿತಗೆ ಸದ್ಭಾವಚರಿತಗೆ
ನ್ನೊಡೆಯ ಸಂಗಮದೇವಗೆ ॥ ೩ ॥

❑ ❑

೨೪೬

ಆರತಿ ಬೆಳಗುವೆನು ಮುರಿಗೇಶಗೆ
ಆರತಿ ಬೆಳಗುವೆನು ॥ ಪಲ್ಲ ॥

ವಾದಿಗಳೆದೆಶೂಲಗೆ ಭೇದರಹಿತನಿಗೆ
ಚಿ[ದ್] ಚಿದಾಂತಸಾರಗೆ ನಾದ ಬಿಂದು ಕಲೆ–
ಗಾದಿ ಪ್ರಮಥರ ಸನುಮೋದತರೇಶಗೆ
ಆರತಿ ಬೆಳಗುವೆ ॥ ೧ ॥

ಲೋಚನತ್ರಯದೇವಗೆ ಶಶಿಶೀಲನಿಗೆ
ರಾಚೋಟಪ್ರಭುಸ್ವಾಮಿಗೆ
ಪ್ರಾಚೀನ ಸನ್ಮಾರ್ಗ ಚರನಿಗಾಳುವ ಸುಭಕ್ತ
ವಾಚಕ[ಗೆ] ಚರನುತಗೆ ಆರತಿ ಬೆಳಗುವೆ ॥ ೨ ॥

ಅಂಗಜಮದಭಂಗಗೆ ಲಿಂಗಾಂಗಾಯಿತಗೆ
ಜಂಗಮ ಶಿರೋಮಣಿಗೆ ಮಂಗಳಮಯ ಮಾ
ತಂಗಜಹರ ನಿರಂಜನ ನಿರಾಮಯ ಸಂಗಮನಾಥಗೆ
ಆರತಿ ಬೆಳಗುವೆನು ॥ ೩ ॥

❑ ❑

೨೪೭

ಮಂಗಳಂ ಜಯಮಂಗಳಂ ಭವ
ಭಂಗ ಭಾಸುರ ಭಸಿತಾಂಗ ಭಾಳಾಕ್ಷಗೆ ॥ ಪಲ್ಲ ॥

ರಾಜಾಧಿರಾಜಗೆ ರವಿಕೋಟಿತೇಜಗೆ
ರಾಜೀವಾಂಬಕನೇತ್ರ ಪೂಜಿತಗೆ
ರಾಜರಾಜಾಪ್ತಗೆ ರಜತಾದ್ರಿನಿಳಯಗೆ
ಮೂಜಗಧೀಶ ಮುಪ್ಪುರನಾಶಗೆ ॥ ೧ ॥

ಮಂಗಳರೂಪಗೆ ಮರಣವಿಲೋಪಗೆ
ಶೃಂಗಿ ಸುಚಾಪಗೆ ಸ್ತುತಿವಂದ್ಯಗೆ
ಅಂಗಜಭಂಗಗೆ ಅಮಲಚಿದಂಗಗೆ
ಮಂಗಳೆ ಮುಖಪದ್ಮ ಮಧುಕರಗೆ ॥ ೨ ॥

ಸೋಮಗೆ ಸೋಮಜನರ್ಚಿತ ಪಾದಗೆ
ಸೋಮಸಖಗೆ ಸೋಮಶೇಖರಗೆ
ಸೋಮಭೂರುಹನಿವಾಸಗೆ ಸೋಮಪಾಣಿಗೆ
ಸೋಮಾಂಗ ವೀರ ಸಂಗಮನಾಥಗೆ ॥ ೩ ॥

❑ ❑

೨೪೮

ಜ್ಞಾನಸಾಧಕ ಪ್ರಯೋಗವ ನೀ ನೋಡು ಏ ಮನ ಏ ಮನವೆ
ನಾನು ನೀನೆಂಬ ಸಂಶಯು ನೀ ಹೋಗಲಾಡು ಏ ಮನ ಏ ಮನವೆ॥ ಪಲ್ಲ ॥

ಮಾತೆ[ಪಿ]ತರುಗಳ ರೇತ ರುಧೀರದಿಂದ ಏ ಮನ ಏ ಮನವೆ
ಜಾತನಾದೆನೆಂದು ಮಾತನಾಡಿಸಬೇಡ ಏ ಮನ ಏ ಮವವೆ
ಭೂತಪಂಚಕದಿಂದ ಜಾತಪ್ರಾಣಿಗಳೆಂದು ಏ ಮನ ಏ ಮನವೆ
ನೀತಿ ಶಾಸ್ತ್ರಗಳಿದ್ದು ಧಾತುಗೆಡಲುಬೇಡ ಏ ಮನ ಏ ಮನವೆ ॥ ೧ ॥

ಸಿಲೆಯೊಂದೆ ಹಲವು ಪೆಸರಿನಿಂದ ಮೆರೆವುದು ಏ ಮನ ಏ ಮನವೆ
ಜಲವೊಂದೆ ಹಲವು ತೀರ್ಥಗಳಾಗಿ ಚರಿಪುದು ಏ ಮನ ಏ ಮನವೆ
ಕುಲವೊಂದೆ ಹಲವು ಜಾತಿಗಳೆಂದೆನಿಪುದು ಏ ಮನ ಏ ಮನವೆ
ನೆಲವೊಂದೆ ಎಂದು ನಿಶ್ಚಲದಿಂದ ಕಾಂಬುದು ಏ ಮನ ಏ ಮನವೆ॥ ೨ ॥

ತಂದೆ ತಾಯಿ ಸತಿ ಸುತ ಸಹೋದರರೆ ಏ ಮನ ಏ ಮನವೆ
ಒಂದೆ ಬಿಂದುವಿನಿಂದ ಬಂದರೆಂಬುದು ಸತ್ಯ ಏ ಮನ ಏ ಮನವೆ
ಮುಂದುಗಾಣದೆ ಹಲವೊಂದು ಶಾಸ್ತ್ರವನೋದಿಯೇ ಏ ಮನ ಏ ಮನವೆ
ಬಂಧನದೊಳು ಸಿಕ್ಕಿ ಬೆಂದು ಹೋಗಲಿಬೇಡ ಏ ಮನ ಏ ಮನವೆ॥ ೩ ॥

ವಿಧಿ ನಿಷೇಧಗಳೆಂಬ ಹೊದರಿನೊಳಗೆ ಹೊಕ್ಕು ಏ ಮನ ಏ ಮನವೆ
ಕುದಿದು ಕೋಟಲೆಗೊಂಡು ಹದೆದು ನವೆಯಬೇಡ ಏ ಮನ ಏ ಮನವೆ

ಅದ ಇದು ಬೇರೆಂದು ಮದನ ಕಾಲಗೆ ಸಿಕ್ಕಿ ಏ ಮನ ಏ ಮನವೆ
ಸದಸಿ ಕೊಂಬುದೆಲ್ಲ ಶಾಸ್ತ್ರದ ದೆಸೆಯಿಂದ ಏ ಮನ ಏ ಮನವೆ ॥ ೪ ॥

ತತ್ತ್ವಮಸಿಯ ಪದದರ್ಥವ ತಿಳಿಯದೆ ಏ ಮನ ಏ ಮನವೆ
ಸತ್ತು ಹುಟ್ಟುವುದೆಲ್ಲ ವ್ಯರ್ಥ ಧ್ಯಾನವು ಏ ಮನ ಏ ಮನವೆ
ಮೃತ್ಯುಹರನು ಸಂಗಮೇಶನ ಪಾದವ ಏ ಮನ ಏ ಮನವೆ
ನಿತ್ಯ ಧ್ಯಾನಿಸಿ ನೀನು ಸತ್ಯದೊಳಿರುಕಂಡ ಏ ಮನ ಏ ಮನವೆ ॥ ೫ ॥
☐ ☐

೨೪೪

ನುಡಿದಂತೆ ನಡೆವುದೇಕಿಲ್ಲ ನಿನ್ನ
ಬಡಮನದಲಿ ಕೆಡವುದನೀತಿಯಲ್ಲ ॥ ಪಲ್ಲ ॥

ಮಾತಿನೊಳಗೆ ನೀತಿ ನುಡಿವೆ ಹೀಗೆ
ಧಾತುಗೆಟ್ಟು ಭ್ರಷ್ಟು ಆಟದಿ ನಡವೆ
ಖ್ಯಾತಿಯನರಿಯದೆ ಜಡದೆ ಬಹು
ನೀತಿ ಶಾಸ್ತ್ರಗಳಿದ್ದು ಮರದೇಕೆ ಕೆಡುವೆ ॥ ೧ ॥

ವಾಕುಪಾಕವಾಯಿತಲ್ಲ ನಿನ್ನ
ಕಾಕುಮನದ ಚೇಷ್ಟೆಯು ಬಿಡೆಯಲ್ಲ
ಸಾಕು ಶಾಸ್ತ್ರದ ಹೋರಟೆಲ್ಲ ಇನ್ನು
ಜೋಕೆತಪ್ಪಲು ಮುಂತಾಕ ಹೋ ಸಲ್ಲ ॥ ೨ ॥

ದೇಹದ ಗುಣಗಳ ಮರೆಯೆ ಅದ
ಹೋಹವೆಂಬುದ ನೋಡಿ ಆನಂದವರಿಯೆ
ಮೋಹಿಸುತಿಹೆ ನರಗುರಿಯೆ ಶಿವ
ಸೋಹವೆಂಬುದ ಕೇಳಿ ಬುದ್ಧಿಯನರಿಯೆ ॥ ೩ ॥

ನಿನ್ನೊಳಗೆ ನೀನೆ ನೋಡು ಆಹೊ
ಮುನ್ನಿನ ಪ್ರಮಥರಾಡಿದ ಆಟವಾಡು
ಮನ್ಮಥನ. ಬಾಣವ ಶಿಕ್ಷೆ ಮಾಡು ನಿನ್ನ
ಗನ್ನ ಗದುಕಿನ ಹೋರಾಟವ ಹೋಗಲಾಡು ॥ ೪ ॥

ನುಡಿ ಪುರಾತರವೊಲು ನುಡಿವೆ ನಿನ್ನ
ನಡೆ ಕಿರಾತರವೊಲು ನಡತೆಯ ನಡೆವೆ
ಜಡಮನದೊಲು ಮುಂದುಗೆಡುವೆ ನಮ್ಮ
ಮೃಡ ಸಂಗಮೇಶನ ನೆನೆ ಮುಕ್ತಿವಡೆವೆ ॥ ೫ ॥

❑ ❑

೨೫೦

ಬರಿದೆ ಚಿಂತಿಸಬೇಡ ಭ್ರಷ್ಟ ವೃಥಾ
ಕರೆಕರೆಗೊಂಡರೆ ನಿನಗದು ನಷ್ಟ ॥ ಪಲ್ಲ ॥

ಇಲ್ಲದ ಬಯಸಲು ಬರದು ಬಹು
ತಲ್ಲಣಿಸಲು ಬೇಡ ನೀನಿದನರಿದು
ಎಲ್ಲರಿಗೆ ಬಾಯ ಬಿರಿ[ವು]ದು ಬೇಡ
ಬಲ್ಲತನಕದು ಬಹುಮಾನ ಕಿರಿದು ॥ ೧ ॥

ಬರುವಂತದೆಲ್ಲವು ಬಿಡದು ಮತ್ತೆ
ಬರದುದೆಲ್ಲ ಬಾರೆಂದರೆ ಬರದು
ಮೀರಿದ ಮಾತ ನೀ ನುಡಿದು ಮುಂದೆ
ಪಾರಾಗಬೇಡಪಕೀರ್ತಿಯ ಪಡೆದು ॥ ೨ ॥

ನೀನೊಂದ ನೆನೆಯಲು ಬೇಡ ದೈವ
ತಾನೊಂದ ನೆನೆವುದು ಕೇಳೆಲೊ ಮೂಢ
ಜ್ಞಾನವನೀಡಾಡಬೇಡ ನಿನ್ನ
ಧ್ಯಾನದಿಂದ ಆ ಸಂಗಮೇಶನ ಕೂಡು ॥ ೩ ॥

❑ ❑

೨೫೧

ಹಲವ ಚಿಂತಿಸಬೇಡ ತಾಳು
ಸುಲಭದಿ ಶಿವ ಕೃಪೆ ಹೊಲಬಿದ ಕೇಳು ॥ ಪಲ್ಲ ॥

ತನುವ ಗುರುವಿಗೆ ನೀ ಸಲಿಸು ನಿನ್ನ
ಮನವನು ಲಿಂಗದ ನೆನಹಿನೊಳ್ನೆಲಸು

ಧನವ ಜಂಗಮಕೆಂದಿರಿಸು ಇದ–
ರನುವ ತಿಳಿದು ಅಂಗದಿ ಆಚರಿಸು ॥ ೧ ॥

ಅಸಮ ಪಂಚಾಕ್ಷರಿ ಜಪಿಸು ನಿನ್ನ
ನೊಸಲೊಳು ಭಸಿತವ ಒಸೆದು ನೀ ಧರಿಸು
ಎಸೆವರುದ್ರಾಕ್ಷಿಯಲಂಕರಿಸು ಚೆನ್ನ
ಬಸವನಾಮ[ವ] ಬಿಡದೆ ಉಚ್ಚರಿಸು ॥ ೨ ॥

ತೀರ್ಥಪ್ರಸಾದವ ಸಲಿಸು ಶಿವ–
ಭಕ್ತರ ಕಂಡರೆ ಮತ್ತೆ ನೀ ನಮಿಸು
ಮುಕ್ತಿದಾಯಕವಿದು ಪಠಿಸು ನಮ್ಮ
ಕರ್ತು ಮಹಾಸಂಗಮೇಶನೊಳ್ಬೆರಸು ॥ ೩ ॥
❑ ❑

೨೫೨

ರಾಗ : ಸೌರಾಷ್ಟ್ರ

ಹೊಲಬನರಿತು ಜಪಿಸು ಪಂಚಾಕ್ಷರಿಯ ಮಂತ್ರಮಂ
ಹಲವು ಪರಿಯ ಪಾಪವೆಲ್ಲ ಹರಿದು ಪೋಪುದು ॥ ಪಲ್ಲ ॥

ದುರಿತ ಬರಲಿ ದುಃಖ ಬರಲಿ
ಉರಿವಕಿಚ್ಚು ಬಂದು ಸುಡಲಿ
ಬರಿಯ ವಾಕರರ್ಜನೆಗಳ ಹೊರಸಿ ಕಾಡಲಿ(?)
ಸಿರದಮೇಲೆ ಕರವನಿರಿಸಿ
ಗುರುವುದಳೆದ [ಅ]ಮೃತವಿರಲಿ
ಕರಗಿ ಚಿಂತೆಗಳನುಮಾಡಿ ಕೊರಗಲೇತಕೆ ॥ ೧ ॥

ಹಸಿವಿನಲ್ಲಿ ನಿದ್ರೆಯಲ್ಲಿ
ವೆಸನದಲ್ಲಿ ವಿಷಯದಲ್ಲಿ
ಮುಸುಕಿ ಮುಂದುಗೆಡಿಸುತಿರ್ಪ ಕರಣಗುಣದಲಿ
ಹುಸಿಯನಾಡಿ ಅಸುವ ಹೊರೆವ
ಗಸಣಿಗಳಿಗೆ ಸಿಕ್ಕಬೇಡ
ಅಸಮ ಪಂಚಾಕ್ಷರಿಯ ಮರೆದು ಅಸುವ ಬಿಡದಿರು ॥ ೨ ॥

ಹಲವು ಮಂತ್ರ ತಂತ್ರಗಳನು
ಕಲಿತರೇನು ಫಲಗಳಿಲ್ಲ
ಒಲಿದು ಓಂನಮಃಶಿವಾಯಯೆನಿಪ ಮಂತ್ರವ
ಗೆಲವಿನಲ್ಲಿ ಮನದಿ ಜಪಿಸಿ
ಸುಲಭದಲ್ಲಿ ಸಂಗಮೇಶ್ವರನ
ಸಲಿಗೆಯಲ್ಲಿ ಬೆರೆಯೆ ನೆಲೆಯ ಮತವಿದು ॥ ೩ ॥

□ □

೨೫೩

ಹೋದೆಯ ಸುಖವಾಯಿತೆ ನಿನ್ನ
ಬಾಧಿಪ ವಿಷಯವ ಬಯಲು ಮಾಡಿಕೊಂಡು ॥ ಪಲ್ಲ ॥

ಒಂದರಿಂದಲಿ ಪುಟ್ಟಿ ಒಂದರಿಂದಲಿ ತೋರಿ
ಒಂದರೊಳಗೆ ಒಂದನಡಗಿಸುತ
ಒಂದೊಂದ ವ್ಯವಹರಿಸಿ ಒಂದೊಂದ ವಿವರಿಸಿ
ಒಂದರ ಮೂಲದಿಂ ಒಡವೆರವುತಲೀಗ ॥ ೧ ॥

ಎರಡರಮೂಲದಿಂದೆಲ್ಲವನೆ ಕಂಡು
ಇರದೆರಡರ ಭೇದವ ತಿಳಿದು
ಎರಡು ವಿಚಾರದಿ[ವ್ಯ]ವಹರಿಸುತಲಾಗ
ಎರಡಕ್ಕ ಸಿಕ್ಕದೆ ಎರಹುಕಾರನಾಗಿ ॥ ೨ ॥

ಮೂರರಿಂದಲಿ ಮೂರುತೋರಿದ ಬಗೆಗಳ
ಮೂರು ಮೂರರ ಭಾವವನೀಕ್ಷಿಸಿ
ಮೂರು ಮೂರನೆ ಮೂರರೊಳಿಂಬಿಟ್ಟು
ಮೂರುಮೂರನೆ ಮೀರಿ ಮುಂದಕ್ಕೆ ಮುಖವಾಗಿ ॥ ೩ ॥

ನಾಲ್ಕರಿಂದಲಿ ನಾಲ್ಕು ಬಗೆ ಬಗೆಯಾದುದ
ನಾಲ್ಕರೊಳಗೆ ನಾಲ್ಕು ನಟಿಸುತಲಿ
ನಾಲ್ಕು ಬಗೆಯ ಮೀರಿ ನಾನಾಪರಿಯ ಬಿಟ್ಟು
ನಾಲ್ಕವನಣಗಿಸಿ ನಟಣೆಯ ತೋರುತ ॥ ೪ ॥

ಆಯಿದರಿಂದಲಿ ಆಯಿದ ಅಯಿದಾಗಿ ತೋರಲು.
ಅಯಿದುವಿಚಾರದಾಯವನೆ ಕಂಡು
ಆಯಿದು ಅಯ್ದನೆ ತಂದು ಆಯಿದರೊಳಣಗಿಸಿ
ಅಯಿದುಮುಖದ ಸಂಗಮೇಶನೊಳ್ಬೆರೆದು ನೀ ॥ ೫ ॥
❑ ❑

೨೫೪

ಬೆಳಗಿರೆ ಮಂಗಳಾರತಿಯ ಮುಂದೆ
ಹೊಳೆವ ಸ್ವತಂತ್ರಸಿದ್ಧಲಿಂಗನಿಗೆ
ಬೆಳಗಿರೆ ಮಂಗಳಾರತಿಯ ॥ ಪಲ್ಲ ॥

ಆರುಮುಖ ಭೂತೇಂದ್ರ ಕರಣ ವಿಷ-
ಯಾರು ಲಿಂಗಾಂಗವದನ ಕರ ದ್ರವ್ಯ
ಮಾರಮರ್ದನ ಗುಣವಳಿದು ವಿಷ-
ಯಾರರಿಂದರ್ಪಿಸಿ ಸುಖಿಪ ಮಹಿಮನಿಗೆ ॥ ೧ ॥

ನವಚಕ್ರಮಂಟಪದೊಳಗೆ ದಿವ್ಯದಿ
ನವಲಿಂಗಪೂಜೆಯ ಮಾಡಿ ಮಂತ್ರಗಳ
ಸವಣಿಸಿ ದಳ ಕುಳಂಗಳಿಗೆ ನಿತ್ಯ
ಲವಲವಿಸುವ ಮನೋಲ್ಲಯದೊಳೆಸೆವಗೆ ॥ ೨ ॥

ಐಪೊತ್ತು ಮೋಕ್ಷಕಾಶಿ[ಸ]ದ ದೇ[ವ] ವಿ
ರೂಪಾಕ್ಷನೆನಿಪ ಷಟ್ಸ್ಥಲಸಾರ್ವಭೌಮ
ಕಾಪನಹಳ್ಳಿಯ ಗವಿಯ ಸರ್ವ
ಪಾಪನಾಶನ ನದಿತೀರವಾಸನಿಗೆ
ಬೆಳಗಿರೆ ಮಂಗಲಾರತಿಯ.. ॥ ೩ ॥
❑ ❑

೨೫೫

ಗರುವಯ್ಯಾತಕೋ ಮನದೊಳ[ರಿ]ತುಯಿರಬೇಕು
ಪರನಾರಿಯ ಬಯಕೆನ್ನೇಕೆ

ಪರಮೇಶ್ವರನ ನಂಬಿರಬೇಕು
ಗರುವಯಾತಕೋ.. ‖ ಪಲ್ಲ ‖

ಕಾಮ ಕ್ರೋಧವನಳಿದಿರಬೇಕು
ವೇದ ಶಾಸ್ತ್ರವ ಕಲಿತಿರಬೇಕು
ಲಿಂಗದ ಮೇಲೆ ಜ್ಞಾನಿರಬೇಕು ಗುರುವಿನ
ಪಾದವ [ನಂ] ಬಿರಬೇಕು ‖ ೧ ‖

ಕಡಲದಂತ ಗುಣವಿರಬೇಕು
ಪರನಾರಿಸೋದರನೆನಿಸಲಿಬೇಕು
ದಾನ ಧರ್ಮವ ಮಾಡಲಿಬೇಕು
ತನಗೆ ಪುಣ್ಯವ ಗಳಿಸಿರಬೇಕು ‖ ೨ ‖

ಜ್ಞಾನ ಮುಕ್ತಿ[ಲಿ] ಬಾಳಿರಬೇಕು
ಜಾಣನಾಗಿ ಮಾಡುಣಬೇಕು
ಸಾವಳಿಗೆ ಶಿವಲಿಂಗಯ್ಯನ
ಪಾದವನಾದರೆ ನಂಬಿರಬೇಕು
ಗರುವಯಾತಕೋ............. ‖ ೩ ‖
❑ ❑

೨೫೬

ಈತನಲ್ಲವೇನೆ ಸೋಮನಾಥನೆಂಬನು
ಧಾತ್ರಿಗಧಿಕ ಸಾಸಿಲೆಂಬ ಕ್ಷೇತ್ರವಾಸಿಯಾದ ಲಿಂಗ
ಈತನಲ್ಲವೇನೆ.......................... ‖ ಪಲ್ಲ ‖

ಈಶ ಜನರಪೋಶ ದುರಿತನಾಶ ಭುಜಂಗಭೂಷ ಸ
ರ್ವೇಶ ಯಮನಪಾಶವನ್ನು ನಾಶಗೈದ ಗಂಗಾರಮಣ ‖ ೧ ‖

ಕಾಲಕಂಠ ಶೂಲ ಮುಕ್ತಿಮೂಲ ಕರುಣಪಾಲ ಕ–
ಪಾಲಪಾಣಿಯೇ ನಿಡಿದು ಕಾರಣಾತ್ಮ ಕಲುಷನಾಶ ‖ ೨ ‖

ವ್ಯೋಮಾತೀತ ಸೋಮನಾಥ ಸಾಸಲೇಶ ಭವವಿನಾಶ
ಶ್ರೀಗುರುವರೇಣ್ಯನೆನಿಸಿ ನಿಜಾಂಶಿಕನ ಬೆರದ ‖ ೩ ‖
❑ ❑

೨೫೭

ಧವಳಾರ

ಶ್ರೀಮತ್ಸ್ಯಾಂಭವರೂಪ ಹೇಮಪರ್ವತಚಾಪ
ಸ್ವಾಮಿ ಮಾಯಾರಿ ಭವಲೋಪ
ಸ್ವಾಮಿ ಮಾಯಾರಿ ಭವಲೋಪ ಹತಪಾಪ
ಕಾಮಸಂಹರನೆ ಜಯ ಜಯ ॥ ೧ ॥

ಲೋಕವಂದಿತ ಪಾದ ಸಾಕಾರ ಶಿವನಾದ
ಪಾಕಾರಿತನುಜ ವರಮೋದ
ಪಾಕಾರಿತನುಜ ವರಮೋದ ನುತವೇದ
ಏಕಮೂರುತಿಯೆ ಜಯ ಜಯ ॥ ೨ ॥

ಅಮರ ಸನ್ನುತಿ ಪಾತ್ರ ವಿಮಲ ಮಂಗಲಗಾತ್ರ
ಭ್ರಮರಾಭ ಗರಳಧರ ಗೋತ್ರ
ಭ್ರಮರಾಭ ಗರಳಧರ ಗೋತ್ರ ಸುಕ್ಷೇತ್ರ
ನಮಿತ ಪಾಲಿತನೆ ಜಯ ಜಯ ॥ ೩ ॥

ಪರಮ ಪಾವನಭಾವ ವರ ಮಹಾ ಗುರುದೇವ
ಚರಲಿಂಗ ಭಜಕಜನ ಜೀವ
ಚರಲಿಂಗ ಭಜಕಜನ ಜೀವ ಧರ ಕಾಮ
ಸರಸಿಜನಕನೆ ಜಯ ಜಯ ॥ ೪ ॥

ವರ ಸಚ್ಚಿತ್ಸೌಖ್ಯಾಂಗ ಉರು ಸ್ವತಂತ್ರದ ತುಂಗ
ದೊರೆ ಸಿದ್ಧಲಿಂಗ ಧವಲಾಂಗ
ದೊರೆ ಸಿದ್ಧಲಿಂಗ ಧವಲಾಂಗ ಭವ ಭಂಗ
ಪರಮದೇಶಿಕನೆ ಜಯ ಜಯ ॥ ೫ ॥

☐ ☐

೨೫೮

ಜ್ಯೋತಿ ಬೆಳಗುತಿದೆ ನೋಡಿ ಪ್ರೀತಿಯಿಂದೆ
ಮಂತ್ರಮಾತೆಯೊಡಗೂಡಿ ॥ ಪಲ್ಲ ॥

ಕಂಗಳಾಗ್ರನಾಳಮಧ್ಯ ಮಂಗಳ ಸ್ವರೂಪ ಶಿವ
ಲಿಂಗ ಸುಖದ ಸಂಗದೊಳಾಡಿ ॥ ೧ ॥

ಸ್ಥೂಲ ಸೂಕ್ಷ್ಮ ಕಾರಣಾದಿ ಮೂಲವನ್ನು ಮೀರಿ ಮಹಾ
ಕಾಲಪಾವಕಪ್ರಭೆಯನು ನೋಡಿ ॥ ೨ ॥

ಭಾನುಕೋಟಿಮೂರ್ತಿ ಸುಜ್ಞಾನನಿಧಿ ಜಯತೆಂದು
ಶೂನ್ಯರೂಪ ಸಿದ್ಧವೃಷಭನ ಪಾಡಿ ॥ ೩ ॥

❑ ❑

೨೫೪

ತಾನೆ ಬೆಳಗುತಿದೆ ಜ್ಯೋತಿ ಪರಮ ಸು-
ಜ್ಞಾನ ಮಂಟಪದಿ ಪ್ರಖ್ಯಾತಿ ॥ ಪಲ್ಲ ॥

ಭಾನುಮಂಡಲವನು ಸಾರಿ ಪೀಯೂಷ
ಭಾನುಕೋಟಿಯ ಕಳೆಯೇರಿ
ಭಾನುಕೋಟಿಯ ಪ್ರಭೆ ಮೀರಿ ತನ್ನ ಚಿ-
ದ್ಭಾನುಪ್ರಭೆಗಳನು ತೋರಿ ॥ ೧ ॥

ಕರಕಮಲದೊಳಿಷ್ಟಲಿಂಗ ಮಾನಸ
ಸರಸಿಜದೊಳಗೆ ಸುಲಿಂಗ
ಪರಮಭಾವದಿ ತೃಪ್ತಿಲಿಂಗವಾಗಿ ತಾ
ನುರುತರ ತೇಜ ಚಿದಂಗ ॥ ೨ ॥

ಮೂರುಬಣ್ಣದ ಮನೆಯಲ್ಲಿ ಯಾರಿಗು
ತೋರದ ಮಹಾಬಿಲದಲ್ಲಿ
ತಾರಕನಾದದೊಳಲ್ಲಿ ಸಿದ್ಧವೃಷಭ
ಮೂರುತಿಯಾಗಿರುತಲ್ಲಿ ॥ ೩ ॥

❑ ❑

೨೬೦

ಬೆಳಗಿರೆ ನಾರಿಯರೆಲ್ಲ ಬೆಳಗಿರೆ
ವಿಳಸಿತ ಜ್ಯೋತಿಪ್ರಭೆಯು ಮೀರೆ ॥ ಪಲ್ಲ ॥

ಸಂಚಲಮನದ ಪ್ರಪಂಚವ ನೀಗಿ
ಮಿಂಚಿನಪ್ರಭೆಗಳು ತೋರೆ ॥ ೧ ॥

ಜನನ ಮರಣ ಗದ ವನದ[ರಿ] ಮಾರುತ
ವೆನುತ ಪಾಡುವ ಧ್ವನಿದೋರೆ ॥ ೨ ॥

ಬುದ್ಧಿ ಮಾನಸಗಳು ಶುದ್ಧವಾಗಿ ಬೇಗ
ಸಿದ್ಧವೃಷಭನನು ಸಾರೆ ॥ ೩ ॥

೨೬೧

ರಾಗ : ನೀಲಾಂಬರಿ

ಜ್ಞಾನಮಯ ತಾನಾಗಬೇಕು ಜಗದೊಳಗೆ
ನಾನುಯೆಂಬುದು ನೀಗಬೇಕು ॥ ಪಲ್ಲ ॥

ಮಂಗಳಾತ್ಮಕನಾಗಬೇಕು ಅಸ್ಥಿರದ
ಅಂಗಸುಖಗಳನೀಗಬೇಕು
ಲಿಂಗಾಂಗವೇಕಾಗಬೇಕು ಶಿವಲಿಂಗ
ವಂಗವೊಲಿದಾಚರಿಸಬೇಕು ॥ ೧ ॥

ಅಷ್ಟಮದಗಳನಳಿಯಬೇಕು ಸರ್ವರಿಗು
ಶ್ರೇಷ್ಠಕ್ರಿಯೆಗಳ ಹಿಡಿಯಬೇಕು
ಕೆಟ್ಟ ಗುಣಗಳನಳಿಯಬೇಕು ಶಂಕರನ
ನಿಷ್ಠೆಯಿಂದಲಿ ಭಜಿಸಬೇಕು ॥ ೨ ॥

ವಿಷಯಸಂಕುಳವಳಿಯಬೇಕು ಲಿಂಗದನು
ಮಿಷನಯನವನಿಶವಿರಬೇಕು
ಬಿಸಜನ ಲಿಪಿಯಳಿಯಬೇಕು ವರ ಸಿದ್ಧ
ವೃಷಭೇಂದ್ರನೊಳು ಬೆರೆಯಬೇಕು ॥ ೩ ॥

☐ ☐

೨೬೨

ಕೊಡು ಎನಗೆ ವರವ ಕೊಂಡಾಡುವೆನು ಸದ್ಗುರುವೆ
ಎಡೆಯೂರಪುರವಾಸ ಯತಿ ತೋಂಟದೀಶ
ಕಡಬದ ಕಂತೆದೇವರ ಶಿಷ್ಯ ಕವಿ ನಂಜ
ಬಿಡದೆ ನಂಬಿದನ್ನೆಯ್ಯ ಸಿದ್ಧೇಶ ನಿಮ್ಮ
ಕೊಡು ಎನಗೆ ವರವ ..................... ॥ ಪಲ್ಲ ॥

ಕರ್ತು ಕೈಲಾಸದಿಂದಿಳಿದು ಕಗ್ಗೆರೆಯ ಶಿವ
ಭಕ್ತ ಬಿನ್ನಹ ಮಾಡೆ ಕೈಕೊಂಡು ನೋಡಿ
ಹತ್ತು ಹನ್ನೆರಡಬ್ದ ಹುತ್ತದೊಳು ನಿಂದಾತ
ಸುತ್ತಲೈವತ್ತಾರು ದೇಶ ಬಲ್ಲಾತ ॥ ೧ ॥

ಕಪಿಲವರ್ಣದ ಗೋವು ಕರದು ನೀಡಿದ ಠಾವು
ವಿಪರೀತಮಯ ಹಾವು ನಿಯಮದೊಳು ನೀವು
ಜಪವ ಮಾಡುತಲಿಪ್ಪ ಜಯತು ಜಂಗಮರೂಪ
ಕೃಪೆಯ ಮನದೊಳು ಧ್ಯಾನ ಶಿವಲಿಂಗ ಸಂಧಾನ ॥ ೨ ॥

ಪಾದಪೂಜೆಯ ಮಾಡಿ ಪಂಚಾಕ್ಷರಿಯ ಜಪಿಸಿ
ವೇದ ಪುರಾಣ ಗೀರ್ವಾಣಭಾಷೆಯಲ್ಲಿ
ಆದಿ ಬಸವೇಶ್ವರನ ಅತ್ಯಂತ ಹರುಷದಲಿ
ಓದುವಾ ನುಡಿಗೇಳಿವೊಲಿದೆ ಸಿದ್ಧೇಶ ॥ ೩ ॥

೨೬೩

ಕೋಗಿಲಾಲಾಪದಿ ರಾಗವ ಪಾಡುತ
ಯೋಗಿ ಸಿದ್ಧೇಶನ ತೂಗಿರೆ
ಶ್ರೀ ಗುರುತು ರಾಜಿಪ xxxx
ಭೋಗಿಭೂಷಣನನು ತೂಗಿರೆಯಮ್ಮ ತೂಗಿರೆ ॥ ಪಲ್ಲ ॥

ಪೊಗಳುವ ನಿಗಮ [ಆಗಮಾವಳಿಗಳ]xನ
ನಗೆಮೊಗದಬಲೆಯರು ತೂಗಿರೆ

ಅಗಜೆಯರಸನನರ್ಚಿಪ ಗರುವ
xxxxxತೂಗಿರೆಯಮ್ಮ ತೂಗಿರೆ
ಜಗದ ಸುಜನರನು ಪೊರೆವ ಮಹಾತ್ಮನ
ಮೃಗಮದಗಂಧಿಯರು [ತೂಗಿರೆ]
ಮಘಮಘಿಸುವ ಮಲ್ಲಿಗೆಯಮಂಟಪದೊಳು
ಸೊಗಸುವಂದದಿ ಪಾಡಿ ತೂಗಿರೆಯಮ್ಮ ತೂಗಿರೆ ॥ ೧ ॥

[ರಂಜಿ] ಪ ಕೆಂಜೆಡೆಯಭವನ ಬಣ್ಣಿಸಿ
ಮಂಜುಳನೇತ್ರನ ತೂಗಿರೆ
ಬಂಜೆಯರರ್ಥಿ ಪುತ್ರರನಿತ್ತ xx[ಧ]
ನಂಜಯಪಾಣಿಯ ತೂಗಿರೆಯಮ್ಮ ತೂಗಿರೆ
ಕಂಜಬಾಣವ ಸುಟ್ಟು ಭಸಿತವಿಟ್ಟ
xxಯಾವಾಭಂಜನ (xxನ) ಪಾಡುತ ತೂಗಿರೆ
ಕುಂಜರಗಮನೆಯರು ಕುಶಲದಿ ಸ್ವರಗೂಡಿ
ಕಂಜಾರಿಜೂಟನ ತೂಗಿರೆ [ಯಮ್ಮ ತೂಗಿರೆ] ॥ ೨ ॥

ಪಂಚಾಕ್ಷರಿ ತನುಮನವೇಕಲಿಂಗದಿ–
ವಾಂಛಿತ ಶರಣನ ತೂಗಿರೆ
ಕಾಂಚನಾದ್ರೀಶನ ಹೃದಯದೊಳಿಂಬಿಟ್ಟ
ಲಾಂಛನಪ್ರೀಯನ ತೂಗಿ[ರೆಯಮ್ಮ ತೂಗಿರೆ]
ಮುಂಚುವ ಮೋಹಪ್ರಪಂಚುನಳಿದ ನಿಃಪ್ರ
ಪಂಚನ[ನು] ಮನಮುಟ್ಟಿ ತೂಗಿರೆ
ಮಿಂಚುವ ಸುಲಿಪಲ್ಲು ನಗೆಮೊಗದೈಯ್ಯನ
ಅಂಚೆಗಮನೆಯರು ತೂಗಿರೆಯ[ಮ್ಮ] ತೂಗಿರೆ ॥ ೩ ॥

ತಳಿರಡಿ ಸುಳಿನಾಭಿ ತೆಳುವ[ಪು]ತನುಕಾಂತಿ
ನಳಿತೋಳ ನಾರಿಯರು ತೂಗಿರೆ
ಬಳುಕುವ ಬಡನಡುವಿನ ಭಾವಕಿಯರು ಕೂಡಿ
ಎಳುವೆರೆಧರನನು ತೂಗಿರೆಯಮ್ಮ ತೂಗಿರೆ
ಬೆಳತಿಗೆಗಂಗಳ ಕಳೆವೆತ್ತ ಕಾಂತಿಯ
ಅಳಿಕಾಂಬಕನನು ತೂಗಿರೆ
ಥಳಥಳಿಸು[ವ ತ] ನುವೆಳಗಿನ ಮಹಿಮನ
ನಳಿನವದನೆಯರು ತೂಗಿರೆಯಮ್ಮ ತೂಗಿರೆ ॥ ೪ ॥

ಆಸೆಯಾಮಿಷ[ಗ]ಳ ನಾಶವ ಮಾಡಿದ
ಭಾಷೆಪಾಲಕನನು ತೂಗಿರೆ
ಮೀಸಲಭಕ್ತಿಪಥ[ವೀವ] ಸುವಿ–
ಲಾಸನ ಪಾಡುತ ತೂಗಿರೆಯಮ್ಮ ತೂಗಿರೆ
ದೇಶದೇಶಗಳಲ್ಲಿ ಮಹಿಮೆಯ ಮೆರೆದ ಮ–
ಹೇಶನ ಪೊಗಳುತ ತೂಗಿರೆ
ಗೋಸಲಬಗೆ ಚೆನ್ನಬಸವ ಸದ್ಗುರು ಕರಜಾತ
ವಿಖ್ಯಾತನ ತೂಗಿರೆಯಮ್ಮ ತೂಗಿರೆ ॥ ೫ ॥

ಬಚ್ಚಬರಿಯ ಪರಬ್ರಹ್ಮ ಸ್ವರೂಪನ
ಸಚ್ಚಿದಾನಂದನ ತೂಗಿರೆ
ನಿಚ್ಚಪಾದುದಕ ಪ್ರಸಾದಕ್ಕೆ ಮನ ಉಬ್ಬಿ
ಮಚ್ಚಿದ ಮಹಿಮನ ತೂಗಿರೆಯಮ್ಮ ತೂಗಿರೆ
ತುಚ್ಛನುಡಿವ ದೂಷಕರ ಸದೆಬಡಿದಾತ್ಮ
ನಿಶ್ಚಲ ಜಯವೆಂದು ತೂಗಿರೆ
ಉ[ಚ್ಚ] ಹದಿಂದಲಿ ನಿಚ್ಚ ಪೂಜೆಯ ಕೊಂಬ
ಸಚ್ಚಿನ್ಮಯನ ಬೇಗ ತೂಗಿರೆಯಮ್ಮ ತೂಗಿರೆ ॥ ೬ ॥

ನಿಷ್ಠೆಯುಳ್ಳವರಿಗೆ ಇಷ್ಟಾರ್ಥವನೀವ
ದಿಟ್ಟಮೂರುಳ್ಳನ ತೂಗಿರೆ
ಇಟ್ಟಣಿಸುವ ಇಹಪರಗತಿಗಭಯವ
ಕೊಟ್ಟು ರಕ್ಷಿಸುವವನ ತೂಗಿರೆಯಮ್ಮ ತೂಗಿರೆ
ಸೃಷ್ಟಿಗಧಿಕ ಎಡೆಯೂರೊಳು ನಿಂದಘ–
ರಟ್ಟ ಸಿದ್ಧೇಶ್ವರನ ತೂಗಿರೆಯಮ್ಮ ತೂಗಿರೆ ॥ ೭ ॥
❑ ❑

೨೬೪

ಗುರುರಾಯ ಬಂದಮೇಲಮ್ಮ ಎನ್ನ ಶರೀರದ ಅ
ಪರೂಪ ಜಾತ್ರೆಯ ಮಾಡಿದೆನಮ್ಮ ॥ ಪಲ್ಲ ॥

ಗಾಲಿ ನಾಲಕು ತೇರಿಗಮ್ಮ ಅದಕೆ
ಕೀಲುಕುಂಡಲಿಯೆಂಬರೆಯಿಟ್ಟೆನಮ್ಮ

ಮೇಲೇಳುನೆಲೆಮನೆಯಮ್ಮ ಅದಕೆ
ಬಾಲಸರ್ಪದ ಊರ್ಧ್ವಮಿಣಿಯು ಕಾಣಮ್ಮ ॥ ೧ ॥

ಎಪ್ಪತ್ತುಎರಡುಸಾವಿರದ ಹುರಿ ಮೂರು
ತಪ್ಪದೆ ಗಂಟಕ್ಕಿ ಬಿರಿಯಿಕ್ಕಿದೆನಮ್ಮ
ಇಪ್ಪತ್ತುಒಂದುಸಾವಿರದಆರುನೂರ
ರೊತ್ತಿಲಿ ನಡುವೆ ಗದ್ದುಗೆಯಿಟ್ಟೆನಮ್ಮ ॥ ೨ ॥

ಹತ್ತು [ಪ]ಟವು ಹರದಂತೆ ಅದಕೆ
ಎತ್ತನೋಡಲು ನವರತುನ ತೆತ್ತಿಸಿದೆನಮ್ಮ
ಚಿತ್ರದಬೊಂಬೆ ಬಾಗಿಲಲಿ ಮುಂದೆ
ಆರ್ತಿಯಿಂದಲಿ ನಿಲಿಸಿ ಆನಂದದಿಂದ ॥ ೩ ॥

ಭಕ್ತ ಮಾಹೇಶ ಪ್ರಾಣಲಿಂಗಿ ಅವ
ರೊತ್ತಿಲಿ ಪ್ರಸಾದಿ ಶರಣೈಕ್ಯರಮ್ಮ
ಮೊತ್ತದೆ ಮಹಾಲಿಂಗ ನಡುವೆ ಮೇಲೆ
ಇಟ್ಟನೆ ಬ್ರಹ್ಮಾನಂದದ ಕಳಸವಮ್ಮ ॥ ೪ ॥

ತ್ರಿಕೂಟಗಿರಿಗಾಗಿ ತೇರ ವಾದ್ಯ
ಘಂಟಾಘೋಷದಿ ನಡೆಸಿದೆನಮ್ಮ
ಸಾಕಾರ ಗುರುಮೂರ್ತಿ ಸೋಮ–
ಶೇಖರಲಿಂಗನಿಗೆ ಅರ್ಪಿತವಾದೆನಮ್ಮ ॥ ೫ ॥

❑ ❑

೨೬೫

ಭಾವಕಿ ರನ್ನಳೆ ಬರಿದೆ ಮಾಜುವರೆ
ಭಾವಜನೊಸಗೆಯ ಬಗೆ ನಿನ್ನೊಳೇನೆ? ॥ ಪಲ್ಲ ॥

ಪಡುವಲೊಳಗೆ ಉಡುಗಣ ಮೂಡಲೇನೆ ?
ಬೆಡಗಿನಂಕದೊಳ್ಬಿಡುಮುತ್ತಿದೇನೆ ?
ಕಡು ಚೆ[ಲ್ವ] ಫಲಕ[?] ಕುಂಕುಮ ಪಂಕವೇನೆ?
ಜಡಜಮೊಗ್ಗಿಗೆ ಸಣ್ಣ ಪೆರೆ ಬಂದುದೇನೆ ? ॥ ೧ ॥

ಉಮೆಯಸುತನ ವಾಹನದಾಟವೇನೆ ?
ಭ್ರಮರ ಶಿಶಿರದೊಳು ಹೊರಳುವದೇನೆ ?
ಕುಮುದದೊಳಗೆ ಅರುಣಾಂಕುರವೇನೆ ?
ಅಮೃತದೊಳಗಿಹ ಅಸಿತವಿದೇನೆ ? ॥ ೨ ॥

ಕಂದರ್ಪನ ರಥ ಕಲಕಿಹುದೇನೆ ?
ಚಂದದ ಹಂಸೆಯ ಸಂಚಾರವೇನೇ?
ಸಿಂಧುರ ಮದವೆದ್ದ ಕಾರಣವೇನೆ ?
ಇಂದು ಹೊಸಹಳ್ಳಿ ವೀರ ಬಂದಿದ್ದನೇನೆ ? ॥ ೩ ॥

□ □

೨೬೬

ಜಯ ಮಂಗಳ ಸದಾಶಿವನಿಗೆ ಜ್ಯೋತಿ–
ರ್ಮಯ ನಿತ್ಯಾನಂದ ತ್ರಿಣೇಶನಿಗೆ ॥ ಪಲ್ಲ ॥

ಮೂಜಗದೆರೆಯಗೆ ಮೋಹನಕಾರಗೆ
ಸಜ್ಜನರಕ್ಷಗೆ ಶಂಕರಗೆ
ಸಜ್ಜುಕದರಳ ಸೋಮಮುಡಿಯ ಜವ್ವನೆಯರು
ಮಜ್ಜನಪ್ರಿಯಗಾರತಿಯೆತ್ತಿರೆ ॥ ೧ ॥

ಪೊಸಹರೆಯದ ಸೊಬಗುಳ್ಳ ಬಾಲಕಿಯರು
ಶಶಿಧರ ಸುಖಕರ ಜಯಯೆನುತಲಿ
ಕುಶಲದಿಂದ[ಲಿ ನಲಿ]ದಾಡುತ ಪಾಡುತ
ಪಶುಪತಿಧರಗಾರತಿಯೆತ್ತಿರೆ ॥ ೨ ॥

ದುಷ್ಟವೈರಿಗಳ ಸಂಹರಿಸುವಾತನಿಗೆ
ಶ್ರೇಷ್ಠಜನಾಮನನನುಪಮಗೆ
ಅಷ್ಟಮೂರುತಿಗೆ ಅಗಣಿತ ಮಹಿಮಗೆ
ನಿಷ್ಠೆಯಿಂದಾರತಿಗಳನೆತ್ತಿರೆ ॥ ೩ ॥

□ □

೨೬೭

ವಾರಿಜನಯನಪೂಜಿತನ ನೋಡುತ ಭವ
ದೂರವಾದ ಪುಣ್ಯ[ದ] ನೀರ ತರುವೆ
ತಾರೇ ಬಿಂದಿಗೆಯ ತಂಗೆಮ್ಮ
ತಾರೇ ಬಿಂದಿಗೆಯ ॥ ಪಲ್ಲ ॥

ಚೆನ್ನದ ಬಿಂದಿಗೆ ರನ್ನದ ಸಿಂಬಿ
ಕನ್ನಡಿ ಪೋಲುವ ಕದಪಿನ ಕಾಂತೆ
[ಚೆ]ನ್ನ ಸರವು ಚಿಂತಾಕ ಮುತ್ತಿನಬೊಟ್ಟು
ಮಿನ್ನದಿಂದೊಪ್ಪುವ ಕನ್ನಡಜಾಣೆ ॥ ೧ ॥

ಮುತ್ತಿನಮುಡಿಯೊಳೆ ಮೂರು ಎಸಳಿನಿಂದ
ತೆತ್ತಿಸಿದ ಹತ್ತೆಗಟ್ಟಿನ ತೋರ
ಮುತ್ತಿನ ಮೂಗುತಿ ವಿಸ್ತಾರದ ಪದಕ
ಹಸ್ತಕಂಕಣ ಹರಳೋಲೆಯ ಚೆನ್ನೆ ॥ ೨ ॥

ತೋಳ ಬಾಪುರಿಗಳ ಸಾಲಿನಿಂದೊಪ್ಪುವ
ಏಳೆಂಟು ಕೋಟಿಗೆ ಮಿಗಿಲಾದ
ಕೀಲು ಕೀಲಿಗೆ ವಜ್ರಬಿಗಿದ ಕಂಚಿಯದಾಮ
ಜಾಲದಿಂದೊಪ್ಪುವ ಬಾಲಕಿ ನೀನು
ತಾರೇ ಬಿಂದಿಗೆಯ ॥ ೩ ॥

ಎಂದೆಂದು ಮಾಜದ ನವರತ್ನದ ಪೊಸ
ದಂದುಗೆ ಮಂಟಿಗೆ ಮುದಗಳ [?]
ಚಂದದ ಮಿಸುನಿಯ ಕಾಲುಂಗರ ಪಿಲ್ಲಿ
ಹೊಂದಿದ ಚರಣೆ ರಾಕೇಂದುವದನೆ ॥ ೪ ॥

ಅಂಗಗುಣಗಳನಳಿದ ಶಿವಶರಣ–
ರಂಗನೆಯರೊಳೊಡನಾಡುತಲಿ
ಮಂಗಳಾತ್ಮಕ ಪರಶಿವನ ಪೂಜೆಗೆ ವಿಯ–
ದ್ಗಂಗೋದಕವನ್ನು ತರುವೆನು ನೀರೆ
ತಾರೇ ಬಿಂದಿಗೆಯ ॥ ೫ ॥

□ □

# ಅನುಬಂಧಗಳು

ಸ್ವರವಚನಗಳ ಅಕಾರಾದಿ

ಸ್ವರವಚನಗಳ ಆಕರಸೂಚಿ

ಸ್ವರವಚನಗಳ ಪ್ರಕಟಿತ ವಿವರ

ಸ್ವರವಚನಾಂಕಿತಗಳ ಅಕಾರಾದಿ

# ಸ್ವರವಚನಗಳ ಅಕಾರಾದಿ

❑ ❑

## ಸ್ವರವಚನಗಳ ಆಕರಸೂಚಿ

೧ (ಕಾ) (೩ಹಿಂ) ಬಸವಭವನ (ಬೆಂ)
೨ (ಕಾ) (೪ ಮುಂ –೫ ಹಿಂ) ಬಸವಭವನ (ಬೆಂ)
೩ (ಕಾ) (೧೧ ಹಿಂ) ಬಸವಭವನ (ಬೆಂ)
೪ (ಕಾ) (೫ ಮುಂ– ೬ಮುಂ) ಬಸವಭವನ (ಬೆಂ)
೫ (ಕಾ) ಬಸವಭವನ (೬ ಹಿಂ– ೭ ಮುಂ) (ಬೆಂ)
೬ (ಕಾ) ಬಿ ೬೬೬ (೫ ಹಿಂ– ೬ ಮುಂ) ಕ ಅ ಕೇಂ (ಬೆಂ)
೭ (ಕಾ) (೧೦ ಹಿಂ) ಬಸವಭವನ (ಬೆಂ)
೮ (ಕಾ) (೩೬ ಹಿಂ) ಬಸವಭವನ (ಬೆಂ)
೯ (ಕಾ) (೨ ಹಿಂ) ಬಸವಭವನ (ಬೆಂ)
೧೦ (ಕಾ) (೨ ಮುಂ) ಬಸವಭವನ (ಬೆಂ)
೧೧ (ಕಾ) (೧೦ ಮುಂ+ಹಿಂ) ಬಸವಭವನ (ಬೆಂ)
೧೨ (ಕಾ) (೮ ಮುಂ) ಬಸವಭವನ (ಬೆಂ)
೧೩ (ಕಾ) (೮ ಹಿಂ) ಬಸವಭವನ (ಬೆಂ)
೧೪ (ಕಾ) ಬಿ ೯೫೬ (೬ಮುಂ+ಹಿಂ); ಕ ಅ ಕೇಂ (ಬೆಂ)
೧೫ (ಕಾ) (೯ ಹಿಂ – ೧೦ ಹಿಂ) ಬಸವಭವನ (ಬೆಂ)
೧೬ (ಕಾ) (೧ ಮುಂ – ೨ ಮುಂ) ಬಸವಭವನ (ಬೆಂ)
೧೭ (ಕಾ) (೩ ಮುಂ) ಬಸವಭವನ (ಬೆಂ)
೧೮ (ಕಾ) (೯ ಮುಂ) ಬಸವಭವನ (ಬೆಂ)
೧೯ (ಕಾ) (೮ ಮುಂ –೯ ಮುಂ) ಬಸವಭವನ (ಬೆಂ)
೨೦ (ಕಾ) (೧೦ ಹಿಂ – ೧೧ ಮುಂ) ಬಸವಭವನ (ಬೆಂ)
೨೧ (ಕಾ) (೧೧ ಮುಂ + ಹಿಂ) ಬಸವಭವನ (ಬೆಂ)
೨೨ (ಕಾ) (೮ ಹಿಂ) ಬಸವಭವನ (ಬೆಂ)
೨೩ (ಕಾ) (೬ ಮುಂ + ಹಿಂ) ಬಸವಭವನ (ಬೆಂ)
೨೪ (ಕಾ) (೭ ಹಿಂ) ಬಸವಭವನ (ಬೆಂ)
೨೫ (ಕಾ) (೩ ಮುಂ–೪ ಮುಂ) ಬಸವಭವನ (ಬೆಂ)
೨೬ (ಕಾ) (೭ ಮುಂ – ೮ ಮುಂ) ಬಸವಭವನ (ಬೆಂ)
೨೭ (ಕಾ) (೫ ಹಿಂ) ಬಸವಭವನ (ಬೆಂ)
೨೮ (ಕಾ) (೫ ಹಿಂ) ಬಸವಭವನ (ಬೆಂ)
೨೯ (ಓ) ೧೭೪೭ (೭ ಹಿಂ–೮ಮುಂ) ಕ ಅ ಕೇಂ (ಬೆಂ)

೩೦ (ಓ) ೫೦೩ (೬೭ ಮುಂ) ಬೃಹನ್ಮಠ (ಚಿ)
೩೧ (ಓ) ೭೮೨ (೨೫ ಮುಂ) ಬೃಹನ್ಮಠ (ಚಿ)
೩೨ (ಓ) ೧೯೧ (೧೮ ಮುಂ+ ಹಿಂ) ಬೃಹನ್ಮಠ (ಚಿ)
೩೩ (ಓ) ೧೯೧ (೧೭ ಮುಂ + ಹಿಂ) ಬೃಹನ್ಮಠ (ಚಿ)
೩೪ (ಓ) ೧೯೧ (೧೯ ಮುಂ) ಬೃಹನ್ಮಠ (ಚಿ)
೩೫ ಶ್ರೀ ಜಿ.ಎ. ಶಿವಲಿಂಗಯ್ಯ (ಮೈ)
೩೬ (ಓ) ೧೧೬೪ ಕ ಅ ಸಂ (ಮೈ)
೩೭ (ಓ) ೪೬೫ (೧೦೨ ಹಿಂ–೧೦೩ ಮುಂ) ಕ ಅ ಕೇಂ (ಬೆಂ)
೩೮ (ಓ) ೫೮೨ (೩೦ ಮುಂ+ಹಿಂ) ಬೃಹನ್ಮಠ
೩೯ (ಓ) ೧೨೫೩ (೪೯ ಮುಂ+ಹಿಂ) ಕ ಅ ಸಂ (ಮೈ)
೪೦ ಬಿ.೯೨೮(೨೪ ಹಿಂ) ಕ ಅ ಕೇಂ (ಬೆಂ)
೪೧ (ಓ) ೪೮೧ (ಬಿಡಿಗರಿ) ಬೃಹನ್ಮಠ (ಚಿ)
೪೨–೪೩ ಶ್ರೀ ಎಸ್. ಉಮಾಪತಿ (ದಾವಣಗೆರೆ)
೪೪ ಶ್ರೀ ಪಿ. ಎಂ. ಗಿರಿರಾಜು (ಮೈ)
೪೫ (ಓ) ೨೨೫/೧ (೩ ಮುಂ+ ಹಿಂ) ಬೃಹನ್ಮಠ (ಚಿ)
೪೬–೪೭ (ಓ) ೨೨೫/೧ (೩ಮುಂ) ಬೃಹನ್ಮಠ (ಚಿ)
೪೮ (ಓ) ೧೮೫ (೯೬ ಹಿಂ–೯೭ ಹಿಂ) ಬೃಹನ್ಮಠ (ಚಿ)
೪೯ (ಓ) ೪೫೧ (೩೧ ಹಿಂ– ೩೨ ಮುಂ) ಬೃಹನ್ಮಠ (ಚಿ)
೫೦ (ಓ) ೬೭೯ (೪೭ ಹಿಂ–೪೮ ಮುಂ) ಬೃಹನ್ಮಠ (ಚಿ)
೫೧ (ಓ) ೧೮೫ (೯೬ ಮುಂ + ಹಿಂ) ಬೃಹನ್ಮಠ (ಚಿ)
೫೨ (ಓ) ಬೇಲಿಮಠ (ಬೆಂ); ಬಿ.೧೩೯೮ (೫೬ ಹಿಂ – ೫೭ ಮುಂ) ಕ ಅ ಕೇಂ (ಬೆಂ)
೫೩ ಶ್ರೀ ಹೇ.ಚಿ. ಶಾಂತವೀರಯ್ಯ (ಬೆಂ)
೫೪ (ಓ) ೫೦೩ (೬೩ ಮುಂ + ಹಿಂ) ಬೃಹನ್ಮಠ (ಚಿ)
೫೫ (ಓ) ೫೦೩ (೬೩ ಮುಂ) ಬೃಹನ್ಮಠ (ಚಿ)
೫೬ (ಓ) ೫೦೩ (೬೨ ಮುಂ+ ಹಿಂ) ಬೃಹನ್ಮಠ (ಚಿ)
೫೭ (ಓ) ೮೪ (೩೫ ಹಿಂ) ಬೃಹನ್ಮಠ (ಚಿ)
೫೮ (ಓ) ೨೪೧೭ (೭ ಹಿಂ ) ವ ವಾ ಭಾಂ (ಧಾ)
೫೯ (ಓ) ೨೪೧೭ (೧೩೦ ಹಿಂ– ೧೩೧ ಹಿಂ) ವ ವಾ ಭಾಂ (ಧಾ)
೬೦ (ಓ) ೧೭೧/೧ (೧ ಮುಂ)ಕ ಅ ಕೇಂ (ಬೆಂ)
೬೧ (ಕಾ) ಬೇಲಿಮಠ (ಬೆಂ)
೬೨ (ಕಾ) (೧೨ ಮುಂ) ಬಸವಸಮಿತಿ (ಬೆಂ)

೬೩ (ಓ) (೬೩ ಮುಂ + ಹಿಂ) ಕ ಅ ಕೇಂ (ಬೆಂ).

೬೪ (ಓ) (೭೧ ಹಿಂ – ೭೨ ಹಿಂ) ಕ ಅ ಕೇಂ (ಬೆಂ)

೬೫ (ಕಾ) ೧೪೦೦(೧೦೨ ಹಿಂ – ೧೦೩ ಮುಂ) ಕ ಅ ಕೇಂ (ಬೆಂ)

೬೬ (ಕಾ) ೧೩೯೮ (೬೬ ಮುಂ) ಕ ಅ ಕೇಂ (ಬೆಂ)

೬೭ (ಓ) ಕೊಟ್ಟೂರುಸ್ವಾಮಿ ಮಠ, ಹೊಸಪೇಟೆ

೬೮ (ಓ) ೩೬೮ (೪೨ ಹಿಂ –೪೩ ಮುಂ) ಬೃಹನ್ಮಠ (ಚಿ)

೬೯ ಕ ಅ ಕೇಂ (ಬೆಂ)

೭೦ ಕ ಅ ಕೇಂ (ಬೆಂ)

೭೧ (ಕಾ) ೬೧೯ (೮ ಮುಂ) ಕ ಅ ಕೇಂ (ಬೆಂ)

೭೨ (ಕಾ) ೧೩೯೮ (೬೭ ಮುಂ) ಕ ಅ ಕೇಂ (ಬೆಂ)

೭೩ (ಕಾ) ೧೩೯೮ (೬೬ಮುಂ) ಕ ಅ ಕೇಂ (ಬೆಂ)

೭೪ (ಕಾ) ೧೩೯೮ (೬೭ ಮುಂ + ಹಿಂ) ಕ ಅ ಕೇಂ (ಬೆಂ)

೭೫ (ಓ) ೩೫೩ (೩೮ ಹಿಂ– ೩೯ ಮುಂ) ಬೃಹನ್ಮಠ (ಚಿ)

(ಓ) ಪಂಚನಹಳ್ಳಿ (೪೭ ಹಿಂ)

೭೬ (ಓ) ಪಂಚನಹಳ್ಳಿ (೫೦ ಮುಂ + ಹಿಂ)

೭೭ (ಓ) ಪಂಚನಹಳ್ಳಿ (೪೮ ಮುಂ + ಹಿಂ)

೭೮ ಕ ಅ ಕೇಂ (ಬೆಂ)

೭೯ ಕ ಅ ಕೇಂ (ಬೆಂ)

೮೦ (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)

೮೧ (ಓ) ಪಂಚನಹಳ್ಳಿ (೫೩ ಮುಂ + ಹಿಂ)

೮೨ (ಓ)ಪಂಚನಹಳ್ಳಿ(೪೬ ಹಿಂ–೪೭ ಮುಂ); (ಓ) ೩೫೩(೧೫ ಮುಂ – ೧೬ ಹಿಂ) ಬೃಹನ್ಮಠ (ಚಿ)

೮೩ (ಓ) ಪಂಚನಹಳ್ಳಿ (೫೧ ಹಿಂ) ; (ಓ) ೩೫೫(೧೪ ಮುಂ + ಹಿಂ) ಬೃಹನ್ಮಠ (ಚಿ)

೮೪ (ಓ) ಪಂಚನಹಳ್ಳಿ (೪೯ ಹಿಂ – ೫೦ ಮುಂ); (ಓ)೧೨೫೩ (೪೨ ಹಿಂ – ೪೩ ಮುಂ) ಕ ಅ ಕೇಂ (ಬೆಂ)

೮೫ (ಕಾ) ೯೫೭ (೩೦ ಹಿಂ – ೩೨ ಮುಂ) (ಓ) ೧೨೫೩ (೪೨ ಹಿಂ – ೪೩ ಮುಂ) ಕ ಅ ಕೇಂ (ಬೆಂ)

೮೬ (ಓ) ಪಂಚನಹಳ್ಳಿ (೪೪ ಮುಂ)

೮೭ (ಓ) ೩೫೩ (೪೧ ಹಿಂ ) ಬೃಹನ್ಮಠ (ಚಿ)

೮೮ (ಓ) ಪಂಚನಹಳ್ಳಿ (೪೮ ಹಿಂ–೪೯ ಮುಂ)

೮೯ (ಓ) ೩೬೮ (೨೪ ಮುಂ + ಹಿಂ) ಬೃಹನ್ಮಠ (ಚಿ)

೯೦ (ಓ) ೩೬೮ (೪೬ ಮುಂ + ಹಿಂ) ಬೃಹನ್ಮಠ (ಚಿ)
೯೧ (ಓ) ೩೬೮ (೫೨ ಮುಂ + ಹಿಂ) ಬೃಹನ್ಮಠ (ಚಿ)
೯೨ (ಓ) ೨೫೮ (ಬಿಡಿ ಗರಿ) ಬೃಹನ್ಮಠ (ಚಿ)
೯೩ (ಓ) (೬೩ ಮುಂ) ಕ ಅ ಕೇಂ (ಬೆಂ)
೯೪ (ಓ) ೨೪೧೭ (೧೩೭ ಮುಂ+ ಹಿಂ) ವ ವಾ ಭಾಂ (ಧಾ)
೯೫ (ಓ) ೧೧೨೬/೪ (೭ ಹಿಂ – ೮ ಮುಂ) ಕ ಅ ಸಂ (ಮೈ)
೯೬ ವ ವಾ ಭಾಂ (ಧಾ)
೯೭ ೧೮೯೭ ರ ಪ್ರಕಟಿತ ಪ್ರತಿ; ಕ ಅ ಕೇಂ (ಬೆಂ)
೯೮ (ಓ) ೪೧೧ (೧ ಹಿಂ – ೨ ಮುಂ ) ಬೃಹನ್ಮಠ (ಚಿ )
೯೯ (ಓ)೪೬೮ (ಬಿಡಿ ಗರಿ) ಬೃಹನ್ಮಠ (ಚಿ)
೧೦೦ (ಕಾ) ವ ವಾ ಭಾಂ (ಧಾ)
೧೦೧ (ಕಾ) ೧೦೬೧ ವ ವಾ ಭಾಂ (ಧಾ)
೧೦೨ ರಿಂದ ೧೨೩ : ಶ್ರೀ ಜಿ.ಎ. ಶಿವಲಿಂಗಯ್ಯ (ಮೈ)
೧೨೪(ಓ) ಪಂಚನಹಳ್ಳಿ (೫೧ ಮುಂ)
೧೨೫ (ಓ) ಪಂಚನಹಳ್ಳಿ (೪೮ ಹಿಂ)
೧೨೬ (ಓ) ಪಂಚನಹಳ್ಳಿ (೪೯ ಮುಂ)
(ಓ) ೩೫೩ (೧೬ ಮುಂ + ಹಿಂ) ಬೃಹನ್ಮಠ (ಚಿ)
೧೨೭ ಕ ಅ ಕೇಂ ?
೧೨೮ (ಕಾ) ೯೫೯ (೫೩ ಮುಂ) ಕ ಅ ಕೇಂ (ಬೆಂ)
೧೨೯ (ಓ) ೩೨೧/೩ (೧ ಮುಂ +ಹಿಂ)
(ಓ) ೧೨೫೩/೪ (೪೩–೪)
ಬೇಲಿಮಠ, ಬೆಂಗಳೂರು
೧೩೦ (ಓ) ಪಂಚನಹಳ್ಳಿ (೪೬ ಮುಂ)
೧೩೧ (ಓ) ಪಂಚನಹಳ್ಳಿ (೫೩ ಮುಂ)
೧೩೨ (ಓ) ಪಂಚನಹಳ್ಳಿ (೪೪ ಹಿಂ – ೪೫ ಮುಂ)
೧೩೩ (ಕಾ) ೯೫೬ (೨೦ ಮುಂ – ೨೧ ಹಿಂ) ಕ ಅ ಕೇಂ (ಬೆಂ)
೧೩೪ (ಓ) ಪಂಚನಹಳ್ಳಿ (೪೮ ಮುಂ)
೧೩೫ ಕ ಅ ಕೇ ೦ (ಬೆಂ)
೧೩೬ (ಓ) ೨೯ (೩೦ ಹಿಂ – ೩೧ ಮುಂ) ಹೊನ್ನವಳ್ಳಿ
೧೩೭ (ಓ) ಪಂಚನಹಳ್ಳಿ (೫೩ ಹಿಂ – ೫೪ ಹಿಂ)
೧೩೮ (ಕಾ) ೯೭೫ (೪ ಮುಂ) ಕ ಅ ಕೇಂ (ಬೆಂ)
೧೩೯ (ಕಾ) ೧೬೪೭ (೪೬ ಹಿಂ) ಕ ಅ ಕೇಂ (ಬೆಂ)

೧೪೦ (ಕಾ) ಬೇಲಿಮಠ (ಬೆಂ)
೧೪೧ (ಓ) ೭೧೪ (೩೪ ರ ಅನಂತರ) ಬೃಹನ್ಮಠ (ಚಿ)
೧೪೨ (ಕಾ)ಕ ಅ ಕೇಂ ( ಬೆಂ)
೧೪೩ (ಓ) ೭೧೫ (೨೮ ಮುಂ +ಹಿಂ) ಬೃಹನ್ಮಠ (ಚಿ)
೧೪೪ (ಓ) ೭೧೫ (೨೮ ಮುಂ +ಹಿಂ ) ಬೃಹನ್ಮಠ (ಚಿ)
೧೪೫ (ಓ) (೯೧ನೇ) ಶ್ರೀ ಉಮೇಶಚಂದ್ರ (ಕೆಂಗೇರಿ)
೧೪೬ (ಓ) ಕ ಅ ಕೇಂ (ಬೆಂ)
೧೪೭ (ಕಾ) ಬಿ. ೬೧೯ (೧೪ ಹಿಂ) ಕ ಅ ಕೇಂ (ಬೆಂ)
೧೪೮ (ಓ) ಕ ಅ ಕೇಂ (ಬೆಂ)
೧೪೯ (ಓ) ೧೨೫೩ (೪೮ ಮುಂ ) ಕ ಅ ಸಂ (ಮೈ)
೧೫೦ (ಓ) ೪೩೮ (೧ ಮುಂ +ಹಿಂ) ಬೃಹನ್ಮಠ (ಚಿ)
೧೫೧ (ಓ) ೫೧೮ (೩೧ ಮುಂ + ಹಿಂ) ಬೃಹನ್ಮಠ (ಚಿ)
೧೫೨ ಪ್ರೊ ಜಿ. ಎಂ. ಉಮಾಪತಿ ಶಾಸ್ತ್ರಿ (ಧರ್ಮಸ್ಥಳ)
೧೫೩ (ಓ) ೧೨೫೩ (೭೦ ಮುಂ) ವ ವಾ ಭಾಂ (ಧಾ)
(ಓ) ೮೪ (೧೭ ಮುಂ+ ಹಿಂ) ಬೃಹನ್ಮಠ (ಚಿ)
(ಓ) ೬೫೩ (೫ ಮುಂ) ಬೃಹನ್ಮಠ (ಚಿ)
೧೫೪ (ಓ) ೧೨೫೩ (೩೭ ಹಿಂ – ೩೮ ಹಿಂ) ಕ ಅ ಸಂ (ಮೈ)
೧೫೫ (ಕಾ) ೯೭೫ (೧೪ ಮುಂ) ಕ ಅ ಕೇಂ ( ಬೆಂ)
೧೫೬ (ಓ) ೧೭೪೭ (೪ ಮುಂ – ೫ ಮುಂ) ಕ ಅ ಕೇಂ ( ಬೆಂ)
೧೫೭ (ಓ) (ಬಿಡಿಗರಿ) ಬೃಹನ್ಮಠ (ಚಿ)
೧೫೮ (ಓ) (ಬಿಡಿಗರಿ) ಬೃಹನ್ಮಠ (ಚಿ)
೧೫೯ (ಓ) (ಬಿಡಿಗರಿ) ಬೃಹನ್ಮಠ (ಚಿ)
೧೬೦ (ಓ) (ಬಿಡಿಗರಿ) ಬೃಹನ್ಮಠ (ಚಿ)
೧೬೧ (ಓ) ೩೮೫೧ (ಬಿಡಿಗರಿ) ವ ವಾ ಭಾಂ (ಧಾ)
೧೬೨ (ಓ) ೧೬೨೭ (೪೩ ನೇ) ಕ ಅ ಕೇಂ (ಬೆಂ)
೧೬೩ (ಓ) ೮೩೦ (೨೬ನೇ) ಕ ಅ ಸಂ (ಮೈ)
೧೬೪ (ಓ) ೧೧೦೦ (ಕೊನೆಯ) ಕ ಅ ಕೇಂ (ಬೆಂ)
೧೬೫ (ಓ) ಮೂರುಸಾವಿರಮಠ, ಹುಬ್ಬಳ್ಳಿ
೧೬೬ (ಕಾ) ೩೭೭(೮ ಮುಂ + ಹಿಂ) ತೋಂಟದಾರ್ಯಮಠ, ಗದಗ
೧೬೭ (ಓ) ೧೧೫೦ (೧೬ನೇ) ಕ ಅ ಕೇಂ (ಬೆಂ)
೧೬೮ (ಕಾ) ೫೬೭ (೯೫ ನೇ) ಕ ಅ ಕೇಂ (ಬೆಂ)
೧೬೯ (ಓ) ೧೫೩/೧೭ (೧೦೫ ಹಿಂ) ಕ ಅ ಕೇಂ (ಬೆಂ)

೧೭೦ (ಕಾ) ೧೪೭೯ (೫೦ನೇ) ಕ ಅ ಕೇಂ (ಬೆಂ)
೧೭೧ (ಕಾ) ೧೪೭೯ (೭೪ನೇ) ಕ ಅ ಕೇಂ (ಬೆಂ)
೧೭೨ (ಕಾ) ೫೫೦ (ಬಿಡಿಗರಿ) ಬೃಹನ್ಮಠ (ಚಿ)
೧೭೩ (ಕಾ) ೬೩೮ (೮೬೮ ಮುಂ + ಹಿಂ) ಕ ಅ ಕೇಂ (ಬೆಂ)
೧೭೪ (ಓ) ೭೮೮ (೩೨ ಮುಂ) ಬೃಹನ್ಮಠ (ಚಿ)
೧೭೫ (ಓ) ೧೨೫೩ (೭೨ ಹಿಂ – ೭೩ ಮುಂ) ಕ ಅ ಸಂ (ಮೈ)
೧೭೬ (ಕಾ) ೯೭೨ (೬ ಮುಂ – ೭ ಮುಂ) ಕ ಅ ಕೇಂ ( ಬೆಂ)
೧೭೭ (ಕಾ) ವ ವಾ ಭಾಂ (ಧಾ)
೧೭೮ (ಕಾ) ೬೫೫ (ಬಿಡಿ ಹಾಳೆ ) ಕ ಅ ಕೇಂ (ಬೆಂ)
೧೭೯ (ಕಾ) ೬೫೫ (ಬಿಡಿ ಹಾಳೆ ) ಕ ಅ ಕೇಂ (ಬೆಂ)
೧೮೦ (ಓ) ೧೮೫ (೪೩ ಮುಂ) ಬೃಹನ್ಮಠ (ಚಿ)
೧೮೧ (ಕಾ) ಶ್ರೀ ಎಸ್. ಉಮಾಪತಿ (ದಾವಣಗೆರೆ)
(?) ಡಾ। ಎಸ್. ಆರ್ ಗುಂಜಾಳ (ಧಾ)
೧೮೨ (ಕಾ) ೬೩೮ (೬೮ ಹಿಂ – ೬೯ ಮುಂ) ಕ ಅ ಕೇಂ (ಬೆಂ)
೧೮೩ (ಓ) ೧೨೯೫ (೬ನೇ ) ಮ ಸಂ ಪಾ (ಮೈ)
೧೮೪ (ಓ) ೭೯೨ (೩೬ ಮುಂ + ಹಿಂ) ಬೃಹನ್ಮಠ (ಚಿ)
೧೮೫ (ಕಾ) ಹೀ. ಚಿ. ಶಾಂತವೀರಯ್ಯ (ಬೆಂ)
೧೮೬ (ಕಾ)ಕೆ. ಬಿ. ೫೪೯ (೪೮ ಮುಂ + ಹಿಂ) ಕ ಅ ಸಂ (ಮೈ)
೧೮೭ (ಕಾ) ಬಿ. ೧೧೪೭/೧, ಕ ಅ ಕೇಂ (ಬೆಂ)
೧೮೮ (ಕಾ) (೩೪ ಮುಂ) ಹೀ.ಚಿ. ಶಾಂತವೀರಯ್ಯ (ಬೆಂ)
೧೮೯ (ಓ) ೨೪೧೭ (೧೫೫ ಹಿಂ) ವ ವಾ ಭಾಂ (ಧಾ)
೧೯೦ (ಓ) ೬೦೯/೪೩ (೧೪೯ ಹಿಂ–೧೫೦ ಮುಂ) ಬೃಹನ್ಮಠ (ಚಿ)
೧೯೧ (ಓ) ೧೨೫೩ (೭೩ ಮುಂ) ಕ ಅ ಸಂ (ಮೈ)
೧೯೨ (ಓ) ಮೂರುಸಾವಿರಮಠ (ಹುಬ್ಬಳ್ಳಿ)
೧೯೩ (ಓ) ಮೂರುಸಾವಿರಮಠ (ಹುಬ್ಬಳ್ಳಿ)
೧೯೪ (?)
೧೯೫ (ಓ) ೧೧೩೧ (೭ನೇ) ಕ ಅ ಸಂ (ಮೈ)
೧೯೬ (ಓ) ೮೫೭/೧ (೫ನೇ) ಕ ಅ ಕೇಂ (ಬೆಂ)
೧೯೭ (ಓ) ಬೃಹನ್ಮಠ (ಚಿ)
೧೯೮ (ಓ) (ಬಿಡಿಗರಿ) ವ ವಾ ಭಾಂ (ಧಾ)
೧೯೯ (ಕಾ) ೯೮೬ (೧೦–೧೧ ಮುಂ) ಕ ಅ ಕೇಂ (ಬೆಂ)
೨೦೦ (ಓ) ೨೪೧೭ (೧೪೯ ಹಿಂ) ವ ವಾ ಭಾಂ (ಧಾ)

೨೦೧ (ಕಾ) ೩೭೭ (೩ ಹಿಂ– ೪ ಮುಂ) ತೋಂಟದಾರ್ಯಮಠ, ಗದಗ.

೨೦೨ (ಓ) ೧೧೫೭/೬ (೧ ಮುಂ) ಕ ಅ ಸಂ (ಮೈ)

೨೦೩ (ಕಾ) ಶ್ರೀ ಎಸ್. ಉಮಾಪತಿ (ದಾವಣಗೆರೆ)

೨೦೪ (ಓ) ಶ್ರೀ ಎಸ್. ಉಮಾಪತಿ (ದಾವಣಗೆರೆ)

೨೦೫ (ಓ) ೨೫೭೪ (೧ ಹಿಂ – ೨ ಮುಂ) ವ ವಾ ಭಾಂ (ಧಾ)

೨೦೬ (ಓ) ಕ ಅ ಕೇಂ (ಬೆಂ)

೨೦೭ (ಓ) (೯೫ ಹಿಂ – ೯೭ ಮುಂ) ಶ್ರೀ ಉಮೇಶಚಂದ್ರ (ಕೆಂಗೇರಿ)

೨೦೮ (ಓ) ೪೬೮ (೬೬ ಹಿಂ –೬೭ ಮುಂ) ಕ ಅ ಕೇಂ (ಬೆಂ)

೨೦೯ (ಓ) ೮೫/೪ (ಬಿಡಿಗರಿ: ೩ ಹಿಂ) ಹೊನ್ನವಳ್ಳಿ

೨೧೦ (ಓ) ೧೩೫೩ ಕ ಅ ಸಂ (ಮೈ)

೨೧೧ (ಸಂ) ಸಿದ್ಧರಾಮ ಶಿವಾಚಾರ್ಯ, ಯಲಬುರ್ಗಿ

೨೧೨ (ಓ) ೧೨೫೩ (೬೧ನೇ) ಕ ಅ ಸಂ (ಮೈ)

೨೧೩ (ಓ) ಕ ಅ ಕೇಂ (ಬೆಂ)

೨೧೪ (ಕಾ) ೩೮೪ (೨–೯) ತೋಂಟದಾರ್ಯಮಠ, ಗದಗ

೨೧೫ (ಓ) ೩೫೩ (೧೭೭ ನೇ) ಬೃಹನ್ಮಠ (ಚಿ)

೨೧೬ (ಓ) ೭೮೪ (ಗರಿ –?) ಬೃಹನ್ಮಠ (ಚಿ)

೨೧೭ (ಓ) ೧೮೫ (೮ನೇ) ಬೃಹನ್ಮಠ (ಚಿ)

೨೧೮ (ಓ) ೬೫೩ (೫ ಹಿಂ) ಬೃಹನ್ಮಠ (ಚಿ)

೨೧೯ (ಓ) ೭೯೨ (೪೪ನೇ) ಬೃಹನ್ಮಠ (ಚಿ)

೨೨೦ (ಓ) ೯ (೨೧ನೇ) ತರಳಬಾಳು ಬೃಹನ್ಮಠ (ಸಿರಿಗೆರೆ)

೨೨೧ (ಓ) ಬೃಹನ್ಮಠ (ಚಿ)

೨೨೨ (ಓ) ೮೦೧/೪ ಕ ಅ ಕೇಂ (ಬೆಂ)

೨೨೩ (ಕಾ) ಕ ಅ ಕೇಂ (ಬೆಂ)

೨೨೪ (ಕಾ) ಕ ಅ ಕೇಂ (ಬೆಂ)

೨೨೫ (ಓ) ೫೮೨ (ಬಿಡಿಗರಿ) ಬೃಹನ್ಮಠ (ಚಿ)

೨೨೬ (ಕಾ) ಚೇಲಿಮಠ (ಬೆಂ)

೨೨೭ ಸಿದ್ಧರಾಮ ಶಿವಾಚಾರ್ಯ, ಯಲಬುರ್ಗಿ

೨೨೮ (ಓ) ೩೬೫, ಮೂರುಸಾವಿರಮಠ, (ಹುಬ್ಬಳ್ಳಿ)

೨೨೯ (ಓ) ೩೬೫, ಮೂರುಸಾವಿರಮಠ, (ಹುಬ್ಬಳ್ಳಿ)

೨೩೦ (ಓ) ೩೬೮, ಬೃಹನ್ಮಠ (ಚಿ)

೨೩೧ (ಓ) ೪೩೧ (೪೫ ಮುಂ) ಬೃಹನ್ಮಠ (ಚಿ)

೨೩೨ (ಓ) ೬೫, ಮೂರುಸಾವಿರ ಮಠ, ಹುಬ್ಬಳ್ಳಿ

೨೩೩ (ಓ) ೩೬೮, ಬೃಹನ್ಮಠ (ಚಿ)
೨೩೪ (ಓ) ೨೪೪ (೨೨೪ ಹಿಂ) ಬೃಹನ್ಮಠ (ಚಿ)
೨೩೫ (ಓ) ೧೭೧೪/೯ (೬೦ ಮುಂ) ಬೃಹನ್ಮಠ (ಚಿ)
೨೩೬ (ಓ) ೬೫ , ಮೂರುಸಾವಿರ ಮಠ (ಹುಬ್ಬಳ್ಳಿ)
೨೩೭ (ಓ) ೧೭೩/೨ (೧೮ನೇ) ಕ ಅ ಕೇಂ (ಬೆಂ)
೨೩೮ (ಓ) ಮೂರುಸಾವಿರಮಠ (ಹುಬ್ಬಳ್ಳಿ)
೨೩೯ (ಓ) ೨೭೫೪ (೩ ಹಿಂ– ೪ ಮುಂ) ವ ವಾ ಭಾಂ (ಧಾ)
೨೪೦ (ಓ) ೨೭೫೪ (೨ ಹಿಂ – ೩ ಹಿಂ) ವ ವಾ ಭಾಂ (ಧಾ)
೨೪೧ (ಓ) ೬೫, ಮೂರುಸಾವಿರಮಠ (ಹುಬ್ಬಳ್ಳಿ)
೨೪೨ (ಓ) ೮೭ (ಬಿಡಿಗರಿ) ಬೃಹನ್ಮಠ (ಚಿ)
೨೪೩ (ಓ) ೪೨೭ (೨೨ ಮುಂ) ಕ ಅ ಕೇಂ (ಬೆಂ)
೨೪೪ (ಓ) ೮೪ (೧೭ ಹಿಂ) ಬೃಹನ್ಮಠ (ಚಿ)
೨೪೫ (ಓ) ಪಂಚನಹಳ್ಳಿ
೨೪೬ (ಕಾ) ೯೫೬ (೨೪ ಹಿಂ) ಕ ಅ ಕೇಂ (ಬೆಂ)
೨೪೭ (ಓ) ೪೧೫ (೮೯ನೇ) ಬೃಹನ್ಮಠ (ಚಿ)
೨೪೮ ರಿಂದ ೨೫೩ (ಓ) ಶ್ರೀ ಉಮೇಶಚಂದ್ರ (ಕೆಂಗೇರಿ)
೨೫೪ (ಓ) ೧೬೨೦ (೨೪ ಹಿಂ–೨೫ ಮುಂ) ಕ ಅ ಕೇಂ (ಬೆಂ)
೨೫೫ (ಕಾ) ೧೦೨೧ (೧೫ ಹಿಂ –೧೬ ಮುಂ) ಕ ಅ ಕೇಂ (ಬೆಂ)
೨೫೬ (ಓ) ಶ್ರೀ ಪಿ. ಎಂ.ಗಿರಿರಾಜು (ಮೈ)
೨೫೭ (ಓ) ೨೫೭೪ (೫ನೇ) ವ ವಾ ಭಾಂ (ಧಾ)
೨೫೮ (ಓ) ೨೫೭೪ (೭ ಮುಂ ) ವ ವಾ ಭಾಂ (ಧಾ)
೨೫೯ (ಓ) ೨೫೭೪ (೬ ಹಿಂ –೭ ಮುಂ) ವ ವಾ ಭಾಂ (ಧಾ)
೨೬೦ (ಓ) ೫೭೪ (೮ ಮುಂ) ವ ವಾ ಭಾಂ (ಧಾ)
೨೬೧ (ಓ) ೫೭೪ (೮ ಮುಂ) ವ ವಾ ಭಾಂ (ಧಾ)
೨೬೨ (ಓ) ೧೭೪೭ (೨೯ ಹಿಂ – ೩೦ ಹಿಂ) ಕ ಅ ಕೇಂ (ಬೆಂ)
೨೬೩ (ಓ) ೪೮೧ (ಬಿಡಿಗಿರಿ) ಬೃಹನ್ಮಠ (ಚಿ)
೨೬೪ (ಓ) ಉಮೇಶಚಂದ್ರ (ಕೆಂಗೇರಿ)
೨೬೫ (ಓ) ೭೪೬/೨(೧೧೮ ಹಿಂ) ಬೃಹನ್ಮಠ (ಚಿ)
೨೬೬ (ಓ) (೧೨೪ನೇ) ಶ್ರೀ ಉಮೇಶಚಂದ್ರ (ಕೆಂಗೇರಿ)
೨೬೭ (ಓ) ಪ್ರೊ.ಜಿ.ಎಂ. ಉಮಾಪತಿ ಶಾಸ್ತ್ರಿ (ಧರ್ಮಸ್ಥಳ)

 

# ಸ್ವರವಚನಗಳ ಪ್ರಕಟಿತ ವಿವರ

೧ –
೨ ಬಸವ ಪಥ, ೧೩.೧೧,೧೯೯೨, ೫೨–೩
೩ ಕರ್ನಾಟಕ ಭಾರತಿ, ೨೫.೧, ೧೯೯೨, ೧೯೪
೪ –೬ ಬಸವ ಪಥ, ೧೩.೯, ೧೯೯೧, ೧೯–೨೧
೭ –೮ ಬಸವ ಪಥ,೧೪.೪, ೧೯೯೨, ೪೮–೯
೯ –
೧೦ ಸತ್ಯಶುದ್ಧ ಕಾಯಕ, ೧.೬, ೧೯೯೧, ೮೮–೯೦
೧೧ ಬಸವ ಪಥ,೧೪.೮, ೧೯೯೨, ೫೫
೧೨ ರಿಂದ ೩೯ –
೪೦ ಬಸವ ಪಥ, ೧೪.೪,೧೯೯೨, ೪೯
೪೧ ಬಸವ ಪಥ, ೧೩.೬, ೧೯೯೧,೪೨–೩
೪೨ ಲೋಚನ, ೩.೨, ೧೯೮೫,೧
೪೩ ಲೋಚನ, ೩.೨,೧೯೮೫,೨
೪೪ ಬಸವ ಪಥ, ೧೪.೪, ೧೯೯೨,೫೦
೪೫ ಸತ್ಯಶುದ್ಧ ಕಾಯಕ, ೨.೩,೧೯೯೨, ೭೮
೪೬ ಸತ್ಯಶುದ್ಧ ಕಾಯಕ, ೨.೩,೧೯೯೨, ೭೭
೪೭ ಸತ್ಯಶುದ್ಧ ಕಾಯಕ, ೨.೩,೧೯೯೨, ೭೭ – ೭೮
೪೮ –
೪೯ ಬಸವ ಪಥ, ೧೪.೮, ೧೯೯೨, ೫೫–೬
೫೦ –
೫೧ –
೫೨ ಬಸವ ಪಥ, ೧೪.೧, ೧೯೯೨, ೨೧–೨
೫೩ ಸ್ಮರಣಸಂಚಿಕೆ, ಶ್ರೀ ಜ. ಶಿವರಾತ್ರೀಶ್ವರ ಸಂಯುಕ್ತ ಕಿರಿಯ ಕಾಲೇಜು, ಜಯನಗರ, ಬೆಂಗಳೂರು ೮೨, ೧೯೮೮, ೨೨
೫೪ –
೫೫ –
೫೬ –
೫೭ –

೫೮ –

೫೯ –

೬೦ –

೬೧ ಬಸವ ಪಥ, ೧೪.೪ ೧೯೯೨, ೫೦–೧

೬೨ –

೬೩–೬೬ ಬಸವ ಪಥ, ೧೧.೭ , ೧೯೮೯, ೪೫–೮

೬೭ ಬಸವ ಪಥ, ೧೧.೧,೧೯೮೯, ೨೨-೫

೬೮ –

೬೯ –

೭೦ –

೭೧ –

೭೨ – ೪ ಲೋಚನ, ೧.೧ , ೧೯೮೮, ೫೨ –೪

೭೫–೯೧ –

೯೨ ಬಸವ ಪಥ, ೧೩.೬,೧೯೯೧, ೪೬ – ೭

೯೩ –

೯೪–

೯೫ ಬಸವ ಪಥ, ೮.೯, ೧೯೮೬, ೫೦–೧

೯೬ –

೯೭ (ಸಂ) ಎಳಂದೂರು ಶಾಸ್ತ್ರಿ ಸುಬ್ಬಣ್ಣ, ೧೮೯೭, ೨೫ – ೭

೯೮ –

೯೯ ಸತ್ಯಶುದ್ಧ ಕಾಯಕ, ೧.೬, ೧೯೯೧, ೯೦

೧೦೦ –

೧೦೧ –

೧೦೨–೧೨೩ ಬಸವ ಪಥ, ೩.೯, ೧೯೮೧, ೬೭–೮೨

೧೨೪–೧೩೫ –

೧೩೬ ಬಸವ ಪಥ, ೧೪.೮, ೧೯೯೨, ೫೭

೧೩೭ –

೧೩೮–

೧೩೯ –೪೦ ಬಸವ ಪಥ, ೧೦.೬, ೧೯೮೮, ೨೮–೩೧

೧೪೧–೪೪ –

೧೪೫ ಬಸವ ಪಥ, ೧೩.೬, ೧೯೯೧, ೪೮

೧೪೬ –

೧೪೭–

೧೪೮ ಬಸವ ಪಥ, ೧೧.೧ ೧೯೮೯, ೨೭–೮

೧೪೯ –

೧೫೦ –

೧೫೧ ಸತ್ಯಶುದ್ಧ ಕಾಯಕ,೧.೫, ೧೯೯೧, ೬೨–೩

೧೫೨ ಕ್ರಮಾಂಕ, '೫೩'ರಂತೆ, ೨೩

೧೫೩ –

೧೫೪ ಬಸವ ಪಥ, ೧೧.೪–೫,೧೯೮೯, ೬೧–೨

೧೫೫–

೧೫೬ –

೧೫೭–೫೯ ಕರ್ನಾಟಕ ಭಾರತಿ, ೨೪.೩, ೧೯೯೨, ೧೬೫–೬೬

೧೬೦ –

೧೬೧ ಬಸವ ಪಥ, ೧೪.೧, ೧೯೯೨, ೧೮೧

೧೬೨ ಬಸವ ಪಥ, ೧೩.೬, ೧೯೯೧, ೪೭–೮

೧೬೩ ಬಸವ ಪಥ, ೧೪.೧, ೧೯೯೨, ೧೯

೧೬೪ –

೧೬೫ –

೧೬೬ –

೧೬೭ ಸಾಧನೆ, ೧೪.೪,೧೯೮೫, ೧೫೩–೧೫೪

೧೬೮ –

೧೬೯ ಸಾಧನೆ, ೬.೧, ೧೯೭೭, ೧೪೭

೧೭೦ ಕರ್ನಾಟಕ ಲೋಚನ, ೩.೨, ೧೯೯೦, ೯೨

೧೭೧ ಸಮಾಜಸಂಗಮ, ಕೆಂಗೇರಿ ಉಪನಗರ, ೧೯೮೪

೧೭೨ ಸತ್ಯಶುದ್ಧ ಕಾಯಕ, ೧.೬, ೧೯೯೨, ೧೯೪–೯೬

೧೭೩ –

೧೭೪ ಕರ್ನಾಟಕ ಭಾರತಿ, ೨೫.೨, ೧೯೯೨, ೧೯೪–೯೬

೧೭೫ ಕರ್ನಾಟಕ ಲೋಚನ, ೩.೨, ೧೯೯.೦, ೯೨–೩

೧೭೬ –

೧೭೭ ಕರ್ನಾಟಕ ಲೋಚನ, ೩.೨, ೧೯೯೦, ೯೩–೪

೧೭೮ –

೧೭೯ –

೧೮೦ –

೧೮೧ ಬಸವ ಪಥ, ೪.೮, ೧೯೮೨, ೫೨–೫
೧೮೨ –
೧೮೩ –
೧೮೪ ಕರ್ನಾಟಕ ಭಾರತಿ, ೨೫.೨, ೧೯೯೨, ೧೯೬
೧೮೫ –
೧೮೬ –
೧೮೭ ಮುರಿಗೆ ಶಾಂತವೀರಸ್ವಾಮಿಗಳ ಸ್ತೋತ್ರಕರಂಡ, (ಸಂ) ಎಸ್. ಶಿವಣ್ಣ,
೧೯೮೪ (೪೭–೮)
೧೮೮ –
೧೮೯ –
೧೯೦ ಕ್ರಮಾಂಕ, '೧೮೭'ರಂತೆ, ೪೫
೧೯೧ –
೧೯೨ ಸತ್ಯಶುದ್ಧ ಕಾಯಕ, ೧೫, ೧೯೯೧, ೬೩
೧೯೩ ಸತ್ಯಶುದ್ಧ ಕಾಯಕ, ೧.೫, ೧೯೯೧, ೯೪
೧೯೪–೯೮ –
೧೯೯ ಬಸವ ಪಥ, ೧೪.೧೧, ೧೯೯೩, ೧೨
೨೦೦–೦೫ –
೨೦೬ ಕರ್ನಾಟಕ ಲೋಚನ, ೩.೨, ೧೯೯೦, ೯೫–೬
೨೦೭ ಬಸವ ಪಥ, ೧೩.೭, ೧೯೯೧, ೬–೭
೨೦೮ ರಂಭಾಪುರಿ ಬೆಳಗು, ೧.೨, ೧೯೯೨, ೨೭
೨೦೯ ಬಸವ ಪಥ, ೧೪.೮, ೧೯೯೨, ೫೭–೮
೨೧೦ –
೨೧೧ ಶಂಕರದೇವರ ಪದಗಳು (ಸಂ) ಸಿದ್ಧರಾಮ ಶಿವಾಚಾರ್ಯ, ಯಲಬುರ್ಗಿ
೨೧೩ –
೨೧೪ –
೨೧೫ –
೨೧೬ –
೨೧೭ –
೨೧೮ –
೨೧೯ ಕರ್ನಾಟಕ ಭಾರತಿ, ೨೫.೨, ೧೯೯೨, ೧೯೭–೨೦೦
೨೨೦ ತರಳಬಾಳು, ಜನವರಿ ೧೯೮೩, ೨೯–೩೧
೨೨೧ –

೨೨೨ –

೨೨೩–೨೪ ಬಸವ ಪಥ, ೧೨.೧೧, ೧೯೯೧, ೩೬–೮

೨೨೫ ಸತ್ಯಶುದ್ಧ ಕಾಯಕ, ೧.೬,೧೯೯೧, ೯೦–೧

೨೨೬ ಬಸವ ಪಥ, ೧೪.೧, ೧೯೯೨, ೨೦ – ೧

೨೨೭–೨೯ –

೨೩೦ ಬಸವ ಪಥ, ೧೪.೧೧, ೧೯೯೩, ೧೩೪

೨೩೧ ಬಸವ ಪಥ ೧೩.೬ ೧೯೯೧, ೪೩

೨೩೨ –

೨೩೩ ಬಸವ ಪಥ, ೧೪.೧೧, ೧೯೯೩, ೧೩೪

೨೩೪ ಸತ್ಯಶುದ್ಧ ಕಾಯಕ, ೧.೬, ೧೯೯೧,೯೧–೨

೨೩೫ ಕರ್ನಾಟಕ ಲೋಚನ, ೩.೨, ೧೯೯೦, ೯೫

೨೩೬ –

೨೩೭ ಪ್ರಸಾದ, ೨೩.೬, ೧೯೮೮, ೨೦–೧

೨೩೮ –

೨೩೯ ಪ್ರಸಾದ, ೨೨.೧೮, ೧೯೮೪, ೩೯–೪೧

೨೪೦ ಪ್ರಸಾದ, ೨೨.೧೮, ೧೯೮೪, ೪೨

೨೪೧ –

೨೪೨ ಬಸವ ಪಥ, ೧೩.೧೧, ೧೯೮೫, ೨೦–೪

೨೪೩–೪೭ –

೨೪೮–೫೩ ಬಸವ ಪಥ, ೬.೧೦, ೧೯೮೫, ೨೦–೪

೨೫೪ ಬಸವ ಪಥ, ೧೩.೭, ೧೯೯೧, ೫

೨೫೫–೬೧ –

೨೬೨ ಬಸವ ಪಥ, ೧೪.೮, ೧೯೯೨, ೫೬

೨೬೩ ಬಸವ ಪಥ, ೩೧.೬, ೧೯೯೧, ೪೪–೬

೨೬೪ ಶರಣ ಸಾಹಿತ್ಯ, ೩೧.೩–೪, ೧೯೬೮, ೬೮

೨೬೫– ೬೬ –

೨೬೭ ಚೆನ್ನುಡಿ, ೨.೪೨, ೧೯೮೭, ೩

 

## ಸ್ವರವಚನಾಂಕಿತಗಳ ಅಕಾರಾದಿ

ಸುತ್ತೂರು ಶ್ರೀ ಜಗದ್ಗುರು ವೀರಸಿಂಹಾಸನ ಮಹಾಸಂಸ್ಥಾನಮಠ, ನಾಡಿನ ಒಂದು ಪ್ರಾಚೀನ ಧರ್ಮಪೀಠ. ಚೋಳಚಕ್ರೇಶ್ವರನ ಪ್ರಾರ್ಥನೆಯ ಸುಮಧುರ ರಸಾಮೃತ ಫಲ. ಸಂಸ್ಥಾಪನಾಚಾರ್ಯರು ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರು. ಆ ಮಹಾಶಿವಯೋಗಿಗಳು ನಿತ್ಯನಿಜಾನಂದದಲ್ಲಿ ಸದಾ ನೆಲೆಸಿರುವ ಶಿವಯೋಗಸಮಾಧಿ —ಅದುವೆ ಶ್ರೀಕರ್ತೃಗದ್ದುಗೆ. ಅದು ನಿಶ್ಚಿಂತ ನಿಜನಿವಾಸ, ಬೆಳಕಿನ ಪ್ರಶಾಂತ ಆವಾಸ. ಅಲ್ಲಿಂದ ಹೊರಹೊಮ್ಮುವ ಶಿವಬೆಳಗು ಸರ್ವವ್ಯಾಪಿಯಾಗಿ ಹರಡಿದೆ. ನಡೆದು ಬರುತ್ತಿದೆ ಮನುಕುಲದ ಕಲ್ಯಾಣ ಅಸದೃಶವಾಗಿ. ಉಜ್ವಲವಾದ ಆ ಗುರು ಪರಂಪರೆಯಲ್ಲಿ ಬಂದ ಮಹಾನುಭಾವರೆಲ್ಲರೂ ಕಾರುಣ್ಯಸಿಂಧುಗಳು, ಲೋಕೈಕಬಂಧುಗಳು.

ನಾಡಿನ ಧಾರ್ಮಿಕ-ಸಾಮಾಜಿಕ, ಶೈಕ್ಷಣಿಕ—ಸಾಂಸ್ಕೃತಿಕ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಗೆ ಶ್ರೀಮಠದ ಸೇವೆ ಅಮೋಘ ಹಾಗೂ ಅದ್ವಿತೀಯ. ಸಾಹಿತ್ಯ-ಸಂಗೀತ-ಕಲೆಗಳಿಗೆ ನೀಡುತ್ತಿರುವ ಕೊಡುಗೆ ಅಸಂಖ್ಯ ಹಾಗೂ ಗಣನೀಯ. 'ಪರಮಶಿವಾಧಿಕ್ಯ ಚೂಡಾಮಣಿ' ಗ್ರಂಥವನ್ನು ರಚಿಸಿ ಶ್ರೀ ಮಲೆಯಮಾದೇಶ್ವರರಿಗೆ ಆಶ್ರಯ ನೀಡಿದ ಸಿದ್ಧಸಂಜದೇಶಿಕೇಂದ್ರರು; 'ಅಮುಗಿದೇವಯ್ಯಗಳಸಾಂಗತ್ಯ'ವನ್ನು ಬರೆದ ಕವಿ ಶಿವಲಿಂಗ ದೇವನಿಗೆ ಪ್ರೇರಕ—ಪೋಷಕರಾದ ಕಟನೀನಂಜುಂಡದೇಶಿಕೇಂದ್ರರು; ತೋಂಟದ ಸಿದ್ಧಲಿಂಗಯತಿಗಳ ಶಿಷ್ಯಪ್ರಮುಖರಲ್ಲಿ ಒಬ್ಬರಾಗಿ ಸ್ವತಂತ್ರವಚನಕಾರರೆಂದು ಪ್ರಸಿದ್ಧ ರಾದ ಘನಲಿಂಗಿಶಿವಯೋಗಿಗಳು; 'ಮಂತ್ರಮಹರ್ಷಿ'ಗಳೆನಿಸಿ 'ಶಿವಮಂತ್ರಮಹಿಮೆ' ಗ್ರಂಥವನ್ನು ನೀಡಿದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು; 'ಘನಲಿಂಗಿ ದೇವರ ವಚನಗಳು' ಮತ್ತು ಶ್ರೀ ಗೌರೀಶಂಕರ ಮಹಾಸ್ವಾಮಿಗಳವರ 'ಅಕ್ಕಮಹಾದೇವಿ' ಚಂಪೂಕಾವ್ಯ—ಇವುಗಳನ್ನು ಸಂಪಾದಿಸಿಕೊಟ್ಟ 'ಶ್ರೀಮನ್ಮಹಾರಾಜ ರಾಜಗುರುತಿಲಕ' ಜಗದ್ಗುರು ಡಾ. ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳು; 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ'ವನ್ನು ಸಂಪಾದಿಸಿಕೊಟ್ಟು ಗ್ರಂಥ ಪ್ರಕಾಶನಕ್ಕೆ ಪ್ರೋತ್ಸಾಹವೀಯುತ್ತಿರುವ ಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು—ಇವರೇ ಮೊದಲಾದ ಗುರುವರೇಣ್ಯರು ಕೈಕೊಂಡ ಧರ್ಮಸಂರಕ್ಷಣೆ—ಸಾಹಿತ್ಯಪರಿಪೋಷಣೆ ಗಮನಾರ್ಹ ಹಾಗೂ ಸ್ತುತ್ಯರ್ಹ. ಮನುಕುಲದ ಏಳಿಗೆಗಾಗಿ ಶ್ರೀಪೀಠದಿಂದ ಸಲ್ಲುತ್ತಿರುವ ಮಹತ್ಸೇವೆ ಅಭಿವಂದನೀಯ ಹಾಗೂ ಸದಾ ಸಂಸ್ಮರಣೀಯ!

---

**ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ : ಮೈಸೂರು**